# ಕನ್ನಡದಲ್ಲಿ ಮಹಾತ್ಮ್ಯಗಳು : ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನಾ ಮಹಾಪ್ರಬಂಧ)


ಸಂಶೋಧಕರು

ಆಶಾ ಎನ್.ಟಿ.

ಮಾರ್ಗದರ್ಶಕರು

ಡಾ.ಎಫ್.ಟಿ.ಹಳ್ಳಿಕೇರಿ

ಪ್ರಾಧ್ಯಾಪಕರು





ಹಸ್ತಪ್ರತಿಶಾಸ್ತ್ರ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ೫೮೩ ೨೭೬

೨೦೧೯

# ಕನ್ನಡದಲ್ಲಿ ಮಹಾತ್ಮ್ಯೆಗಳು : ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನಾ ಮಹಾಪ್ರಬಂಧ)


ಸಂಶೋಧಕರು

**ಆಶಾ ಎನ್.ಟಿ.**

ಮಾರ್ಗದರ್ಶಕರು

**ಡಾ.ಎಫ್.ಟಿ.ಹಳ್ಳಿಕೇರಿ**

ಪ್ರಾಧ್ಯಾಪಕರು





ಭಾಷಾ ನಿಕಾಯ

ಹಸ್ತಪ್ರತಿ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬

೨೦೧೯

# ಸಂಶೋಧಕರ ಪ್ರಮಾಣ ಪತ್ರ

**"ಕನ್ನಡದಲ್ಲಿ ಮಹಾತ್ಮೆಗಳು : ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ.ಎಫ್.ಟಿ.ಹಳ್ಳಿಕೇರಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 24/06/19
ಸ್ಥಳ : ವಿದ್ಯಾರಣ್ಯ

Asha N.T.

**(ಆಶಾ ಎನ್.ಟಿ.)**
ಸಂಶೋಧಕರು
ಹಸ್ತಪ್ರತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀಮತಿ **ಆಶಾ ಎನ್.ಟಿ.** ಅವರು **"ಕನ್ನಡದಲ್ಲಿ ಮಹಾತ್ಮೆಗಳು : ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 24/06/19
ಸ್ಥಳ : ವಿದ್ಯಾರಣ್ಯ

**ಡಾ. ಎಫ್.ಟಿ.ಹಳ್ಳಿಕೇರಿ**
ಪ್ರಾಧ್ಯಾಪಕರು
ಹಸ್ತಪ್ರತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನದ ಪೂರ್ವ ಪೀಠಿಕೆ

ಅಧ್ಯಾಯ : ಒಂದು

# ಮಹಾತ್ಮೆಗಳ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ಸಮೀಕ್ಷೆ

## ೧.೧ ಪ್ರಸ್ತಾವನೆ

ಸಾಹಿತ್ಯ ಚರಿತ್ರೆಕಾರರು ಕನ್ನಡ ಸಾಹಿತ್ಯವನ್ನು ಕವಿಗಳ ಕಾಲಕ್ಕನುಗುಣವಾಗಿ ವಿವಿಧ ಕಾಲಘಟ್ಟಗಳಲ್ಲಿ ವಿಭಾಗ ಮಾಡಿದ್ದಾರೆ. ಪ್ರಾಚೀನ, ಮಧ್ಯಕಾಲೀನ, ಆಧುನಿಕ, ಆಧುನಿಕೋತ್ತರ ಎಂಬ ಈ ವಿಭಾಗ ಕ್ರಮದಿಂದ ಆಯಾ ಕಾಲಘಟ್ಟದ ಸಂಸ್ಕೃತಿ, ಭಾಷೆ, ಸಾಹಿತ್ಯ ಮುಂತಾದ ಅಂಶಗಳನ್ನು ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗಿದೆ. ಮೇಲಿನ ಪ್ರತಿಯೊಂದು ಕಾಲಘಟ್ಟದಲ್ಲಿಯೂ ಕನ್ನಡ ಸಾಹಿತ್ಯ ಸಮೃದ್ಧವಾಗಿ ರಚನೆಗೊಂಡಿದೆ. ಕನ್ನಡ ಸಾಹಿತ್ಯದಲ್ಲಿ ಮಧ್ಯಕಾಲೀನ ಸಾಹಿತ್ಯವು ಅತ್ಯಂತ ಪ್ರಮುಖವಾದ (ಮೈಸೂರು ಒಡೆಯರ ಕಾಲ) ಕಾಲಘಟ್ಟವಾಗಿದೆ. ಈ ಕಾಲದಲ್ಲಿ ಶೈವ ಮತ್ತು ವೈಷ್ಣವ ಸಾಹಿತ್ಯವು ವಿಸ್ತಾರವಾಗಿ ಬೆಳೆದು ಬಂದಿತು. ಅದರಲ್ಲಿಯೂ ವೈಷ್ಣವ ಸಾಹಿತ್ಯವು ಇನ್ನೂ ಸವಿಸ್ತಾರವಾಗಿ ಬೆಳೆದುಬಂದಿತು. ಆ ರೀತಿಯಲ್ಲಿ ಬೆಳೆದು ಬಂದ ಸಾಹಿತ್ಯವೇ ಪುರಾಣಗಳು ಮತ್ತು ಮಹಾತ್ಮೆಗಳು. ಈ ಸಂದರ್ಭದಲ್ಲಿ ಹಿಂದಿನ ಮಾರ್ಗಶೈಲಿಯ ಸಂಪ್ರದಾಯದಿಂದ ಬಿಡಿಸಿಕೊಂಡು ಸಾಮಾನ್ಯ ಜನರ ಭಾಷೆಯಲ್ಲಿ ಕೆಲವು ಮಹಾತ್ಮೆ ಕೃತಿಗಳು ಸಂಪ್ರದಾಯವನ್ನು ಸಾಮಾಜಿಕವಾಗಿ ಬಿತ್ತುವ ಹಿನ್ನೆಲೆಯಲ್ಲಿ ಸೃಷ್ಟಿಯಾಧವು.

ಈ ಜನಭಾಷೆಯ ಸಾಹಿತ್ಯದಿಂದ ಪ್ರೇರಣೆ ಪಡೆದ ಆ ಕಾಲದ ಪ್ರಮುಖ ಕವಿಗಳಾದ ಹರಿಹರ, ರಾಘವಾಂಕನ ನಂತರದ ಕವಿಗಳು ಸಾಮಾನ್ಯರಿಗೂ ಅರ್ಥವಾಗುವಂತಹ ಸರಳವಾದ ರಗಳೆ, ಷಟ್ಪದಿ, ಸಾಂಗತ್ಯ, ಶತಕ ಮುಂತಾದ ಪ್ರಕಾರಗಳಲ್ಲಿ ಕಾವ್ಯಗಳನ್ನು ರಚಿಸಿದರು. ಈ ಹಿನ್ನೆಲೆಯಲ್ಲಿ ವಚನಕಾರರ ಪ್ರಭಾವದಿಂದ ಪ್ರೇರಿತಗೊಂಡ ಅಂದಿನ ವೀರಶೈವ ಕವಿಗಳು ಹಲವು ಪುರಾಣ, ಕಾವ್ಯ, ಚರಿತ್ರೆಗಳನ್ನು ರಚನೆ ಮಾಡಿದರೆ; ಅದೇ ಹಿನ್ನೆಲೆಯಲ್ಲಿ ಶೈವ ಮಹಾತ್ಮೆಗಳು ಹುಟ್ಟಿಕೊಂಡವು. ಈ ಎರಡು ಸಾಹಿತ್ಯದ ಮೂಲ

ಪ್ರೇರಣೆ ಎಂದರೆ ಕನ್ನಡ ಸಾಹಿತ್ಯದ ಆರಂಭ ಕಾಲದ ಜೈನ ಸಾಹಿತ್ಯದಲ್ಲಿ ತೀರ್ಥಂಕರರ ಚಾರಿತ್ರಿಕ ಕಥನ ಚರಿತ್ರೆಗಳನ್ನು ಬರೆಯಲು ಪಂಪ, ಪೊನ್ನ, ರನ್ನರತಂಹ ಕವಿಗಳು ಪುರಾಣ ಪರಂಪರೆಯ ಹಿನ್ನೆಲೆಯನ್ನು ಅನುಸರಿಸಿದ್ದರು. ಇದೇ ಮಾದರಿಯನ್ನು ವೀರಶೈವ ಮತ್ತು ವೈಷ್ಣವ ಕವಿಗಳು ಅವರವರ ಧರ್ಮದ ಮಹಾನ್ ವ್ಯಕ್ತಿಗಳ ಜೀವನ ಚರಿತ್ರೆಯನ್ನು ಮತ್ತು ಪ್ರಮುಖ ಕ್ಷೇತ್ರಗಳನ್ನು ಕಾವ್ಯಗಳ ಮೂಲಕ ಚಿತ್ರಿಸುವಾಗ ಪುರಾಣ ಮಾರ್ಗವನ್ನು ಅನುಸರಿಸಿದರು.

ಈ ಪುರಾಣಗಳಲ್ಲಿ ಅಥವಾ ಮಹಾತ್ಮೆಗಳಲ್ಲಿ ಕವಿಗಳು ಅವರ ಧರ್ಮದ ಪುಣ್ಯ ಪುರುಷರ ಜೀವನ ಚರಿತ್ರೆ ಮತ್ತು ಕ್ಷೇತ್ರಗಳನ್ನು ವರ್ಣಿಸುವಾಗ ಅನೇಕ ಕಾಲ್ಪನಿಕ ಚಿತ್ರಣಗಳನ್ನು ಕೂಡಿಸಿ, ಕಲ್ಪಿತ ಚರಿತ್ರೆಯಲ್ಲಿ ಕಾವ್ಯದ ರೂಪಕೊಟ್ಟು ಮಹಾಕಾವ್ಯಗಳನ್ನಾಗಿ ರಚಿಸಿದರು. "ಪುರಾಣ ಮತ್ತು ಮಹಾಕಾವ್ಯಗಳ ಒಳ ಆತ್ಮ ಸ್ಥೂಲವಾಗಿ ಒಂದೇ ಆಗಿ ಕಂಡುಬಂದರೂ ಪುರಾಣಗಳ ವಸ್ತು ಮತ್ತು ರೀತಿಯಲ್ಲಿ ಸೂಕ್ಷ್ಮ ವ್ಯತ್ಯಾಸ ಕಂಡುಬರುತ್ತದೆ. ಇತಿಹಾಸ ಮತ್ತು ಮಹಾಕಾವ್ಯಗಳಲ್ಲಿ ಕಥನ ವಸ್ತು ಪ್ರಮುಖವಾದರೆ, ಪುರಾಣಗಳಲ್ಲಿ ತಾತ್ವಿಕ ಮತ್ತು ಧಾರ್ಮಿಕ ಅಂಶಗಳು ಪ್ರಾಮುಖ್ಯತೆಯನ್ನು ಪಡೆದಿವೆ."[೧]

ಈ ಧಾರ್ಮಿಕ ಅಂಶಗಳ ಪ್ರತಿಪಾದನೆಗಾಗಿ ಕವಿಗಳು ಧರ್ಮದ ಅನುಯಾಯಿಗಳ ಚರಿತ್ರೆಯನ್ನು ತಮ್ಮ ಕಾವ್ಯಗಳಿಗೆ ವಸ್ತುವಾಗಿಸಿಕೊಂಡು ಕಾವ್ಯ ರಚನೆ ಮಾಡಿದರು. ಈ ಎರಡು ಧರ್ಮಗಳು ಒಂದೇ ಸಂದರ್ಭದಲ್ಲಿ ಪ್ರಬಲ ಧರ್ಮಗಳಾಗಿರಬೇಕು, ಅಲ್ಲದೆ ಹದಿನೈದು ಮತ್ತು ಹದಿನಾರನೇ ಸಂದರ್ಭದ ಕಾಲಘಟ್ಟದಲ್ಲಿ ವಿಜಯನಗರ ಅರಸರ ಆಳ್ವಿಕೆಯಿತ್ತು, ಆ ರಾಜರು ಎಲ್ಲಾ ಧರ್ಮಗಳಿಗೆ ಪ್ರೋತ್ಸಾಹ ಕೊಟ್ಟಿದ್ದರು. ಹಾಗೆಯೇ ಎಲ್ಲಾ ಧರ್ಮಗಳ ಪೋಷಣೆಗೆ ಅರಸರು ಪ್ರೋತ್ಸಾಹ ಕೊಟ್ಟಿದ್ದರೆಂದು ಚರಿತ್ರೆಯ ಪುಟಗಳಲ್ಲಿ ನೋಡಬಹುದು. ಅದರಲ್ಲೂ ಶೈವ ಮತ್ತು ವೈಷ್ಣವ ಧರ್ಮ ಮತ್ತು ಸಾಹಿತ್ಯಕ್ಕೆ ಅಲ್ಲಿನ ಅರಸರು ಶೈವ ಮತ್ತು ವೈಷ್ಣವ ಧರ್ಮದವರಾಗಿದ್ದರಿಂದ, ಕರ್ನಾಟಕ ಸುತ್ತಲ ಪ್ರದೇಶಗಳಲ್ಲಿ ನೆಲೆಸಿದ್ದ ಪ್ರಸಿದ್ಧ ಪುರುಷರನ್ನು ಮತ್ತು ಧಾರ್ಮಿಕ ಕ್ಷೇತ್ರಗಳನ್ನು ಅತ್ಯಂತ ಭಕ್ತಿಯಿಂದ ಕಾವ್ಯಗಳನ್ನು ಚಿತ್ರಿಸುವುದರ ಮೂಲಕ, ಶೈವ ಮತ್ತು ವೈಷ್ಣವ ಧರ್ಮವನ್ನು ಭೂಮಿಯ ಮೇಲೆ ನಿರಂತರವಾಗಿರುವಂತೆ ಕಾಪಾಡಲು ಆಯಾ ಧರ್ಮಿಯರು ಶ್ರಮಿಸಿದರು. ಹಾಗಾಗಿ ಸಾಮಾನ್ಯವಾಗಿಯೇ ಶೈವ ಮತ್ತು ವೈಷ್ಣವ ಚರಿತ್ರೆಗಳು, ಪುರಾಣಗಳು, ಮಹಾತ್ಮೆಗಳು ಕವಿಗಳ ಮನಸ್ಸಲ್ಲಿ ಕಾವ್ಯ ಪ್ರೇರಣೆಯಾಗಲು ಒಂದು ಕಾರಣವಿರಬಹುದು.

ಈ ಹಿನ್ನೆಲೆಯಲ್ಲಿ ಸೃಷ್ಟಿಯಾದವುಗಳೇ ಸ್ಥಳಕೇಂದ್ರಿತ ಮಹಾತ್ಮ್ಯೆ ಮತ್ತು ವ್ಯಕ್ತಿಕೇಂದ್ರಿತ ಮಹಾತ್ಮ್ಯೆಗಳು. ಈ ಅಧ್ಯಯನದಲ್ಲಿ ವ್ಯಕ್ತಿಕೇಂದ್ರಿತ ಮಹಾತ್ಮ್ಯೆಗಳಿಗಿಂತ ಸ್ಥಳ ಕೇಂದ್ರಿತ ಮಹಾತ್ಮ್ಯೆಗಳಿಗೆ ಆದ್ಯತೆ ಕೊಡಲಾಗಿದೆ. ಕಾರಣ ೧೬-೧೭ನೇ ಶತಮಾನದಲ್ಲಿ ಅತೀ ಹೆಚ್ಚು ಸ್ಥಳ ಕೇಂದ್ರಿತ ಮಹಾತ್ಮ್ಯೆಗಳನ್ನು ನೋಡಬಹುದು. ಇಲ್ಲಿ ಸ್ಥಳಗಳಿಗೆ ಪ್ರಮುಖ ಆದ್ಯತೆಯನ್ನು ಕೊಡಲಾಗದೆ; ಅದರೊಂದಿಗೆ ಸುತ್ತಮುತ್ತಲಿನ ಪ್ರಮುಖ ಧಾರ್ಮಿಕ ಕ್ಷೇತ್ರಗಳನ್ನು ಚಾರಿತ್ರಿಕ ಮತ್ತು ಐತಿಹಾಸಿಕ ಹಿನ್ನೆಲೆಯನ್ನು ಒಳಗೊಂಡು ಪುರಾಣ ಮಾರ್ಗದಲ್ಲಿ ಕ್ಷೇತ್ರ ಮಹಾತ್ಮ್ಯೆಗಳ ಚಿತ್ರಣವನ್ನು ನೋಡಬಹುದು. ಹೀಗೆ ರಚನೆಗೊಂಡ ಸ್ಥಳ ಮಹಾತ್ಮ್ಯೆಗಳ ಸಾಹಿತ್ಯ ತುಂಬಾ ಹುಲುಸಾಗಿ ಬೆಳೆದಿದೆ. ಅದರಲ್ಲೂ ಚಿಕ್ಕದೇವರಾಜನ ಕಾಲದಲ್ಲಿ ಅನೇಕ ಕ್ಷೇತ್ರ ಮಹಾತ್ಮ್ಯೆಗಳು ರಚನೆಯಾದವು. ಪಶ್ಚಿಮರಂಗ, ಶ್ರೀರಂಗ, ವೆಂಕಟಗಿರಿ, ಹಸ್ತಿ-ಯಾದವಗಿರಿ ಈ ಪಂಚ ಕ್ಷೇತ್ರಗಳ ಮಹಾತ್ಮ್ಯೆಗಳೇ ಹೆಚ್ಚಾಗಿ ರಚಿತವಾಗಿವೆ. ಇದಕ್ಕೆ ಕಾರಣ ಚಿಕ್ಕದೇವರಾಯನಿಗೆ ಆ ಕ್ಷೇತ್ರಗಳ ಬಗ್ಗೆ ಇದ್ದ ಭಕ್ತಿ. ವೈಷ್ಣವ ಧರ್ಮದ ಮೇಲಿದ್ದ ಶ್ರದ್ಧೆ, ಧರ್ಮ ಪ್ರಚಾರದಲ್ಲಿದ್ದ ಆಸಕ್ತಿ ಇವೇ ಆಗಿವೆ. ಅಲ್ಲದೆ ಇವನ ಆಶ್ರಿತ ಕವಿಗಳಲ್ಲಿ ಹೆಚ್ಚು ಮಂದಿ ಶ್ರೀ ವೈಷ್ಣವ ಧರ್ಮದವರಾಗಿದ್ದರು. ಅವರು ಈ ಕ್ಷೇತ್ರ ಮಹಾತ್ಮ್ಯೆಗಳನ್ನು ವರ್ಣಿಸುವುದರ ಮೂಲಕ ತಮ್ಮ ಧರ್ಮ ಪ್ರಚಾರವನ್ನು ವಿಶೇಷವಾಗಿ ಮಾಡಿದರು.

ಅವರಿಗೆ ಧರ್ಮ ಪ್ರಚಾರಕ್ಕೆ ಇದೊಂದು ಒಳ್ಳೆಯ ಮಾಧ್ಯಮವಾಯಿತು. ಹೀಗಾಗಿಯೇ ಈ ಕಾಲದಲ್ಲಿ ಅನೇಕ ಮಹಾತ್ಮ್ಯೆ ಗ್ರಂಥಗಳು ಸೃಷ್ಟಿಯಾದವು. ಮೇಲಿನ ಪ್ರತಿಯೊಂದು ಕ್ಷೇತ್ರದ ಬಗೆಗೂ ವಿವಿಧ ಕವಿಗಳು ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಕಾವ್ಯ ರಚಿಸಿರುವುದಕ್ಕೂ ಈ ಧರ್ಮ ಪ್ರಚಾರವೇ ಕಾರಣವಾಗಿರಬೇಕು. ಉದಾಹರಣೆಗೆ ಶ್ರೀರಂಗದ ಬಗೆಗೆ ಚಿಕ್ಕುಪಾಧ್ಯಾಯ, ಚೆಲುವಾಂಬೆ, ಸಿಂಗರಾರ್ಯ, ಅಪ್ಪಲಾಚಾರ್ಯ, ಚನ್ನರಾಜಪ್ಪ ಮುಂತಾದವರು ಕಾವ್ಯ ಶತಕಗಳನ್ನು ಬರೆದರು. ಹೀಗೆ ಒಂದೇ ಕ್ಷೇತ್ರದ ಬಗೆಗೆ ಅನೇಕರು ಕಾವ್ಯಗಳನ್ನು ಬರೆದಂತೆಯೇ; ಗದ್ಯ, ಸಾಂಗತ್ಯ, ಲಾವಣಿ ಹಾಡು, ಚಂಪೂ ಹೀಗೆ ಅನೇಕ ಸಾಹಿತ್ಯ ಪ್ರಕಾರಗಳಲ್ಲಿಯೂ ಬರೆದರು. ಈ ಮಾತಿಗೆ ಉತ್ತಮ ನಿದರ್ಶನ ಚಿಕ್ಕುಪಾಧ್ಯಾಯನ ಕೃತಿಗಳು. ಅವನು ಬ್ರಹ್ಮಾಂಡ ಪುರಾಣದಲ್ಲಿನ ಕಾಂಚಿ, ತಿರುಪತಿ, ಶ್ರೀರಂಗ, ಪಶ್ಚಿಮರಂಗ (ಈಗಿನ ಶ್ರೀರಂಗಪಟ್ಟಣ) ಈ ಪುಣ್ಯಕ್ಷೇತ್ರಗಳ ಐತಿಹ್ಯವನ್ನು ಅದರ ಸುತ್ತಲೂ ನೂರಾರು ವರ್ಷಗಳಿಂದಲೂ ಹೆಣೆದುಕೊಂಡು ಬಂದಿರುವ ಜನರ ಧಾರ್ಮಿಕ ಶ್ರದ್ಧೆ ಮತ್ತು ವಿಶ್ವಾಸಗಳನ್ನು ಕುರಿತು ಕ್ರಮವಾಗಿ ಚಂಪೂವಿನಲ್ಲಿ ಹಸ್ತಿಗಿರಿ (ಕಾಂಚಿ) ಮಹಾತ್ಮ್ಯೆವನ್ನು, ಕಮಲಾಚಲ

(ಹಿಮವದ್ಗೋಪಾಲ ಸ್ವಾಮಿಬೆಟ್ಟ) ಮಹಾತ್ಮೆಯನ್ನು, ಗದ್ಯದಲ್ಲಿ ವೆಂಕಟಗಿರಿ (ತಿರುಪತಿ) ಮಹಾತ್ಮೆ, ಶ್ರೀರಂಗ ಮಹಾತ್ಮೆಗಳನ್ನೂ ಸಾಂಗತ್ಯದಲ್ಲಿ, ಪಶ್ಚಿಮರಂಗ ಮಹಾತ್ಮೆ, ಯಾದವಗಿರಿ (ಮೇಲುಕೋಟೆ) ಮಹಾತ್ಮೆಗಳನ್ನು ರಚಿಸಿರುವನು.

ಮತ್ತೆ ತಾನು ಗದ್ಯದಲ್ಲಿ ಬರೆದಿರುವ ಮಹಾತ್ಮೆ ಗ್ರಂಥಗಳನ್ನು ತಿಮ್ಮಕವಿಯಿಂದ ಚಂಪೂ ರೂಪದಲ್ಲಿಯೂ ಬರೆಸಿರುವನು. ಚಿಕ್ಕುಪಾಧ್ಯಾಯನು ಯಾದವಗಿರಿ ಮಹಾತ್ಮೆಯನ್ನು ಗದ್ಯದಲ್ಲೂ, ಸಾಂಗತ್ಯದಲ್ಲೂ ಬೇರೆ-ಬೇರೆಯಾಗಿ ಬರೆದುದಲ್ಲದೆ, ತಿಮ್ಮಕವಿಯಿಂದ ಅದನ್ನೇ ಚಂಪೂ ಪ್ರಕಾರದಲ್ಲೂ ಬರೆಸಿರುವನು. ಒಂದೇ ವಸ್ತುವನ್ನು ಹೀಗೆ ಬೇರೆ ಬೇರೆ ಪ್ರಕಾರದಲ್ಲಿ ಏಕೆ ಬರೆಸಿರುವನು ಎಂದರೆ ಅದು ಜನ ಪ್ರಚಾರಕ್ಕೂ ಮತ್ತು ಪಂಡಿತ-ಪಾಮರರೆಲ್ಲರಿಗೂ ಆಸ್ವಾದವಾಗಲೆಂದು ಇರಬೇಕು. ಚಂಪೂ ಹಿಂದಿನಿಂದಲೂ ಪಂಡಿತ ಪ್ರಿಯವಾಗಿ ಬಂದದ್ದಲ್ಲದೇ, ಗದ್ಯ ಮತ್ತು ಪದ್ಯದಿಂದ ಕೂಡಿರುವಂತದ್ದು. ಸಾಂಗತ್ಯವಂತೂ ಕನ್ನಡಿಗರಿಗೆ ಪ್ರಾಣಪದಕದಂತೆ ಮಹಾತ್ಮೆ ಕೃತಿಗಳನ್ನು ರಚಿಸಲಾಗಿದೆ. ಅಲ್ಲದೇ ಎಲ್ಲಾ ರೀತಿಯ ಸಾಹಿತ್ಯ ಪ್ರಕಾರದಲ್ಲೂ ಮಹಾತ್ಮೆ ಕಾವ್ಯಗಳು ರಚನೆಯಾದವು.

ಚಿಕ್ಕದೇವರಾಜನ ಆಳ್ವಿಕೆಯಲ್ಲಿ ವೈಷ್ಣವ ಧರ್ಮ ಹೆಚ್ಚು ಪ್ರಾಬಲ್ಯವಾಗಿದ್ದಿರಬೇಕು, ಆದ್ದರಿಂದಲೇ ಇವನ ಕಾಲಘಟ್ಟದಲ್ಲಿ ಬೆಳೆದು ಬಂದ ಸಾಹಿತ್ಯ ಪೂರ್ಣವಾಗಿ ವೈಷ್ಣವ ಧರ್ಮದ ಹಿನ್ನೆಲೆಯಿಂದ ಕೂಡಿದೆ. ಅದರಲ್ಲೂ ಕ್ಷೇತ್ರಮಹಿಮೆ ಅಥವಾ ಸ್ಥಳ ಮಹಿಮೆಗಳ ವರ್ಣನೆಗೆ ಮತ್ತು ವೈಷ್ಣವ ಧರ್ಮ ಪ್ರಚಾರಕ್ಕೆ ಈ ಮಹಾತ್ಮೆಗಳು ಮೀಸಲಾಗಿದೆಯೇ ವಿನಾಃ, ಚಾರಿತ್ರಿಕ ದೃಷ್ಟಿಯಿಂದ ಮಹತ್ವವಾದವುಗಳಾಗಿಲ್ಲ. ಸಾಮಾನ್ಯವಾಗಿ ಈ ಕಾಲದ ಬ್ರಾಹ್ಮಣ ಕವಿಗಳ ಕಾವ್ಯಗಳಲ್ಲಿ ತಮ್ಮ ಧರ್ಮ ಪ್ರಚಾರದ ಜೊತೆಜೊತೆಗೆ ಚರಿತ್ರೆಯನ್ನು ಹೆಣೆಯುವುದು ಒಂದು ರೀತಿಯ ವಾಡಿಕೆ. ಅದರಂತೆ ಕೆಲವು ಬ್ರಾಹ್ಮಣ ಕವಿಗಳಾದ ಚಿಕ್ಕುಪಾಧ್ಯಾಯ, ತಿಮ್ಮಕವಿಗಳಂತವರು ಇಂತಹ ಮಹಾತ್ಮೆ ಕಾವ್ಯಗಳ ಪ್ರಾರಂಭದಲ್ಲಿ ಅಥವಾ ಮುಕ್ತಾಯವಾದ ನಂತರ ಅರಸರ ವಂಶಾವಳಿಯನ್ನು ಕಟ್ಟಿಕೊಟ್ಟಿದ್ದಾರೆ. ಆದರೆ ಇತರೆ ಮಹಾತ್ಮೆ ಕಾವ್ಯಗಳಲ್ಲಿ ಅವರು ಹೇಳಿರುವುದನ್ನೇ ಬಹಳ ಸಂಕ್ಷಿಪ್ತವಾಗಿ ಹೇಳಿದ್ದಾರೆ. ಇಲ್ಲಿ ಹೊಸದೇನನ್ನೂ ಹೇಳಿಲ್ಲ. ಅಲ್ಲದೆ ಅಂದಿನ ರಾಜಕೀಯ ಅಥವಾ ಸಾಮಾಜಿಕ ಸ್ಥಿತಿಗತಿಗಳನ್ನು ತಿಳಿಯುವುದಕ್ಕೂ ಇದು ಹೆಚ್ಚು ಸಹಕಾರಿಯಾಗಿಲ್ಲ. ಇದಕ್ಕೆ ಕಾರಣ, ಕವಿಗಳ ಉದ್ದೇಶ ಮುಖ್ಯವಾಗಿ ಇದಾಗಿರಲಿಲ್ಲ. ತನ್ನ ಆಶ್ರಯದಾತನ ಆದೇಶದಂತೆ ಶ್ರೀರಂಗ ಕ್ಷೇತ್ರದ ಮಹಿಮೆಯನ್ನು 'ಅನುನಯದಿಂದೆಲ್ಲರಜಿವವೊಲ್' ಗದ್ಯದಲ್ಲಿ ರಚಿಸುವುದೇ ಆಗಿದೆ. ಅಂದರೆ ಆಶ್ರಯದಾತನ ಮೆರೆಗೆ ಬ್ರಹ್ಮಾಂಡಪುರಾಣದಲ್ಲಿ ಹೇಳಿರುವ ಶ್ರೀರಂಗ

ಮಹಾತ್ಮ್ಯೆಯನ್ನು ಕನ್ನಡಕ್ಕೆ ಯಥಾವತ್ತಾಗಿ ಭಾಷಾಂತರಿಸಿರುವುದು ಎಂಬಂತೆ ಚಿಕ್ಕದೇವರಾಜನ ಆಶ್ರಯದಲ್ಲಿ ಬೆಳೆದ ಸಾಹಿತ್ಯ ಧಾರ್ಮಿಕ ಸಾಹಿತ್ಯಕ್ಕೆ ಮೀಸಲಾದವೇ ಹೊರತು, ಅಂದಿನ ಸಾಮಾಜಿಕ ಸಂದರ್ಭ, ರಾಜಕೀಯ ಸಂಗತಿಗಳು, ಆರ್ಥಿಕ ಸಂಗತಿಗಳನ್ನು ತಿಳಿಸಲು ಅಲ್ಲ ಎಂಬಂತಹ ರೀತಿಯಿಂದ ರಚನೆಯಾದ ಕಾವ್ಯಗಳಿವು ಎಂಬ ಒಂದು ಸಣ್ಣ ವಿಷಾದವು ಈ ಕಾವ್ಯಗಳನ್ನು ಗಮನಿಸಿದಾಗ ತಿಳಿಯುತ್ತದೆ.

ಪ್ರತಿಯೊಂದು ಕಾವ್ಯ ಕಾದಂಬರಿಯಲ್ಲಿ ಚಿತ್ರಿತವಾಗುವಂತೆ ನಾಯಕ-ನಾಯಕಿಯರ ಪಾತ್ರಗಳಲ್ಲಿ ನೇರವಾಗಿ ಕ್ಷೇತ್ರ ಮಹಿಮಾ ವರ್ಣನೆಗೆ ಮತ್ತು ಆಯಾ ಧರ್ಮ ಪ್ರಚಾರವೇ ಕಾವ್ಯಗಳ ಗುರಿಯಾಗಿದೆ. ಇಲ್ಲಿ ಸೃಷ್ಟಿಯಾದ ಕಥೆಗಳೆಲ್ಲವೂ ಈ ಕಾರಣಕ್ಕಾಗಿಯೇ ಬಂದಿವೆ. ಉದಾಹರಣೆಗೆ ಕಾವ್ಯದಲ್ಲಿ ಬರುವ 'ದತ್ತಾತ್ರೇಯ ವಿಜಯವು' ವೇದಗಳ ಮಹತ್ವವನ್ನು, ವೈಷ್ಣವ ಧರ್ಮವನ್ನು ಮತ್ತು ಅದರ ಮಹಿಮೆಯನ್ನೂ ಸಾರಿದರೆ; 'ಚತುರ್ವೇದಿ', 'ಸುಚರಿತ' ಮುಂತಾದ ಕಥೆಗಳು ಕ್ಷೇತ್ರದ ವರ್ಣನೆಗಾಗಿ, ಮಹಿಮೆಗಾಗಿಯೇ ಮೀಸಲಾಗಿದೆ. ಹೀಗಾಗಿ ಇಲ್ಲಿ ಯಾವ ಕಥೆಯನ್ನು ಕವಿಗಳು ಅನವಶ್ಯಕವಾಗಿ ಚಿತ್ರಿಸಿಲ್ಲ ಎನ್ನಬಹುದು. ಇಲ್ಲಿ ಹಲವಾರು ಕಥೆಗಳು ಮತ್ತು ಪಾತ್ರಗಳು ಬರುತ್ತವೆ. ಆದರೆ ಅವೆಲ್ಲವೂ ನೀತಿ, ಭಕ್ತಿ, ಭಯ, ನೈತಿಕತೆಯನ್ನು ಮತ್ತು ಮಹಿಮಾತಿಶಯಗಳನ್ನು ವರ್ಣಿಸುವುದಕ್ಕಾಗಿಯೇ ಬಂದಿವೆ.

ಇಂತಹ ಸಾಹಿತ್ಯ ರಚನೆಯು ಕನ್ನಡ ಸಾಹಿತ್ಯದಲ್ಲಿ ಅದರಲ್ಲೂ ಒಡೆಯರ ಕಾಲದ ಸಾಹಿತ್ಯಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಅಲ್ಲದೇ ಒಡೆಯರ ಕಾಲದಲ್ಲಿ ಸಾಹಿತ್ಯಕ್ಕೆ ಒಂದು ಪ್ರತ್ಯೇಕ ಇತಿಹಾಸವಿದೆ ಎಂದರೆ ಅದು ಚಾರಿತ್ರಿಕ ಮತ್ತು ಮಹಾತ್ಮ್ಯೆ ಗ್ರಂಥಗಳ ಹೆಚ್ಚಳದ ವೈಶಿಷ್ಟ್ಯದ ಕಾರಣಕ್ಕಿರಬಹುದು. ಒಂದು ರೀತಿಯಲ್ಲಿ ಒಡೆಯರ ವಿಶೇಷ ಪ್ರೋತ್ಸಾಹದಿಂದಾಗಿ ಮಹಾತ್ಮ್ಯೆ ಗ್ರಂಥಗಳ ರಚನೆಯ ಮನ್ವಂತರವೇ ಆರಂಭವಾಯಿತು. ಈ ಪ್ರಕಾರದಲ್ಲಿ ಅನೇಕ ಕವಿಗಳು ಹಲವಾರು ಗ್ರಂಥಗಳನ್ನು ರಚಿಸಿದರು. ಗಾತ್ರ ಮತ್ತು ಪಾತ್ರಗಳೆರಡರಲ್ಲೂ ಸಮೃದ್ಧವಾಗಿ ಸಾಹಿತ್ಯ ನಿರ್ಮಾಣವಾಯಿತು. ಇಂತಹ ಸಮೃದ್ಧಿಗೆ ಸಂಸ್ಕೃತದ ಸ್ಕಂದಪುರಾಣ ಮತ್ತು ಆಗ್ನೇಯ ಪುರಾಣಗಳಲ್ಲಿ ವೈವಿಧ್ಯಪೂರ್ಣ ವಸ್ತು-ವಿಷಯ ದೊರೆತದ್ದೂ ಒಂದು ಕಾರಣವಿರಬೇಕು.

ಈ ಕಾವ್ಯಗಳು ಯಾವುದೇ ಒಂದು ಪುರಾಣಕ್ಕೆ ಋಣಿಯಾಗಿ ಅಂಟಿಕೊಂಡಿದ್ದರೂ ಅಲ್ಲಿನ ಕಥೆಯನ್ನೇ ಯಥಾವತ್ತಾಗಿ ಅನುಸರಿಸಿದ್ದರೂ ತಮ್ಮ ಕಾವ್ಯಗಳನ್ನು ಕವಿಗಳು ಸ್ವತಂತ್ರ ಕಾವ್ಯವನ್ನಾಗಿ ರೂಪಿಸಿಕೊಂಡಿದ್ದಾರೆ. ಅಂದರೆ ಒಂದು ಕ್ಷೇತ್ರ ಮಹಿಮೆಯನ್ನು

ಹೇಳುವುದು ಆ ಕಾವ್ಯದ ಉದ್ದೇಶವಾದರೂ; ಅಲ್ಲಿನ ಕಥೆಗಿರುವ ಪೌರಾಣಿಕ ಅಂಶಗಳಿಗೆ ಪ್ರಸ್ತುತ ಭೌಗೋಳಿಕ ಅಂಶಗಳನ್ನು ಮತ್ತು ಇತಿಹಾಸ, ಐತಿಹ್ಯಗಳಂತಹ ಪುರಾಣ ಕಥೆಗಳ ಸಂಗಮದೊಂದಿಗೆ ಹಲವಾರು ಉಪಕಥೆಗಳನ್ನು ಜೋಡಿಸುವುದರ ಮೂಲಕ ಕಾವ್ಯಗಳನ್ನು ಸ್ವಾರಸ್ಯವಾಗಿರುವಂತೆ, ಆಸ್ವಾದನಾರ್ಹವಾಗಿರುವಂತೆ ಮಾಡಲಾಗಿದೆ. ಅಲ್ಲದೆ ಕೆಲವು ಸಲ ಮಾಹಿತಿಕೋಶಗಳಂತೆಯೂ ಈ ಕಾವ್ಯಗಳು ಕಂಡುಬರುತ್ತವೆ. ಮಹಾತ್ಮೆಗಳು ವ್ಯಕ್ತಿ, ಸ್ಥಳ, ನದಿ, ಘಟನೆಗಳ ಸುತ್ತ ಆವರಿಸಿಕೊಂಡಿರುತ್ತವೆ, ಅದರಲ್ಲೂ ಸ್ಥಳಗಳಿಗೆ (ತೀರ್ಥ ಕ್ಷೇತ್ರಗಳಿಗೆ) ಮಹಾತ್ಮೆಗಳು ಮೀಸಲಾಗಿವೆ. ಇಲ್ಲಿ ಪುರಾಣ ಕಥೆಯೊಂದಿಗೆ ಕವಿಯ ಕಾಲಮಾನದ ಜನರ ಸ್ಥಿತಿಗಳು ನಿರೂಪಣೆಗೊಂಡಿರುವುದರಿಂದ ಸಾಮಾಜಿಕ–ಸಾಂಸ್ಕೃತಿಕ ಅಧ್ಯಯನಕ್ಕೂ ಆ ಮೂಲಕ ಇತಿಹಾಸದ ರಚನೆಗೂ ಕೃತಿಗಳು ಸಹಾಯಕವಾಗಿವೆ. ಭಕ್ತಿ ಸಾಹಿತ್ಯದಂತೆ ತೋರುವ ಕಾವ್ಯದ ಒಡಲಿನಲ್ಲಿ ವಾಸ್ತವ ಮತ್ತು ಕಾಲ್ಪನಿಕ ಸ್ಪಂದನಗಳಿರುವುದು ಸ್ಪಷ್ಟವೇ ಎಂದು ಅನಿಸಿದರೂ, ಸರಿಯಾದ ದಾಖಲೆಗಳು ಮತ್ತು ನೈಜ್ಯ ಇತಿಹಾಸದ ಕೊರತೆಯಿಂದಾಗಿ ಡೋಲಾಯಮಾನದ ಸ್ಥಿತಿಯಲ್ಲೇ ಉಳಿದು ವಾಸ್ತವತೆಯನ್ನು ನಿರ್ಧರಿಸಲು ಕಷ್ಟವಾಗುತ್ತದೆ.

ಇವು ಕಾವ್ಯಗಳು ಮಾತ್ರ ಆಗಿರದೇ ನೀತಿಸಂಹಿತೆಯ ಗ್ರಂಥಗಳು ಆಗಿವೆ. ಕಾರಣ ಇಲ್ಲಿ ಬರುವ ಹಲವಾರು ತೀರ್ಥಕ್ಷೇತ್ರಗಳ ಕಥೆಗಳಲ್ಲಿ, ಉಪಕಥೆಗಳಲ್ಲಿ ತತ್ವ, ನೀತಿ, ಧರ್ಮ, ಭಕ್ತಿಯೇ ಎದ್ದು ಕಾಣುತ್ತದೆ. ಕೆಲವು ಸಲ ಭಕ್ತಿಯ ಪರವಶತೆಯಿಂದ ಕೂಡಿದ ಕವಿತಾ ಮನೋಧರ್ಮವನ್ನು ಹೆಚ್ಚಳವಾಗಿ ಈ ಮಹಾತ್ಮೆಗಳಲ್ಲಿ ಕಾಣಬಹುದಾಗಿದೆ. ಒಂದು ಕ್ಷೇತ್ರದ ದಾರ್ಶನಿಕತೆಯನ್ನು ಸರ್ವರಿಗೂ ಪರಮಾತ್ಮ ಸುಲಭ ಎಂಬುದನ್ನು ಪ್ರಾಣಿ, ಪಕ್ಷಿ, ಮನುಷ್ಯ, ಋಷಿ, ದೇವ ದೇವತೆಗಳ ಕಥೆಗಳ ಮೂಲಕ ಮನುಷ್ಯ ಲೋಕವನ್ನು ಎಚ್ಚರಿಸಿ ತಿದ್ದುವ ಕಥೆಗಳನ್ನು ಕಾಣಬಹುದು. ಭಕ್ತಿಯ ಪ್ರಭಾವ ಲಯದಲ್ಲಿಯೇ ಅಂದಿನ ಸಮಾಜದ ಜನರು ಬದುಕುತ್ತಿದ್ದರೆಂದೆನಿಸುತ್ತದೆ. ಈ ಹಿನ್ನೆಲೆಯಲ್ಲಿ ಎಲ್ಲಾ ಕವಿಗಳು ಶೈವ ಮತ್ತು ವೈಷ್ಣವ ಧರ್ಮದ ತತ್ವಾದರ್ಶಗಳನ್ನು ನಂಬಿ ಕಾವ್ಯಗಳನ್ನು ಬರೆದಿರಬೇಕು. "ಧರ್ಮವೇ ಜೀವನದ ಉಸಿರೆಂದು ಹೇಳಲಾದ ಭಾರತದಲ್ಲಿ, ಎಲ್ಲ ಕಾವ್ಯ ಕಲೆಗಳ ಮೂಲ ಸ್ಫೂರ್ತಿಯೇ ಧರ್ಮವಾಗಿದೆ. ಈ ಮಾತು ಕರ್ನಾಟಕದ ಸಾಹಿತ್ಯ ಕಲೆಗಳಿಗೂ ಯಥಾವತ್ತಾಗಿ ಅನ್ವಯಿಸುತ್ತದೆ. ಇಲ್ಲಿ 'ಧರ್ಮ' ಎಂಬ ಮಾತಿಗೆ ಮತಧರ್ಮಗಳು ಎಂಬ ಅರ್ಥವನ್ನಿಟ್ಟುಕೊಂಡು ವಿಚಾರ ಮಾಡಲಾಗಿದೆ"[೨] ಎನ್ನುವ ಮಾತನ್ನು ಮಹಾತ್ಮೆಗಳಲ್ಲಿಯೂ ನೋಡಬಹುದು.

ಈ ಸಾಹಿತ್ಯದ ವಸ್ತುಗಳನ್ನು ಪಟ್ಟಿಹಾಕಿದರೆ ಧರ್ಮ, ತತ್ವ, ನೀತಿ ಪ್ರಚಾರವನ್ನೇ ಮುಖ್ಯ ವಸ್ತುಗಳನ್ನಾಗಿ ಮಾಡಿಕೊಂಡು ಕೃತಿಗಳ ಸಂಖ್ಯೆಯೇ ಮಿಗಿಲಾಗಿ ಬಂದಿವೆ. ಈ ಸಾಹಿತ್ಯ ಎಂದೂ ಸಾಹಿತ್ಯೋದ್ದೇಶದಿಂದಷ್ಟೇ ರಚಿತವಾದದ್ದು ವಿರಳ. ಇಲ್ಲಿನ ಸಾಹಿತ್ಯವು ಜನರ ಶ್ರೇಯಸ್ಸನ್ನು ಸಾಧಿಸಲು ಎಂಬಂತಿವೆ. ಅಷ್ಟೇ ಅಲ್ಲದೆ ಇದು ಪಾಪ, ಇದು ಪುಣ್ಯ, ಇದು ಹಿತ, ಇದು ಅಹಿತ ಎನ್ನುವ ತಿಳಿಹೇಳಲು ಒಟ್ಟಿನಲ್ಲಿ ಪುರುಷಾರ್ಥ ಪ್ರಾಪ್ತಿಗೋಸ್ಕರ ಕಾವ್ಯವನ್ನು ಓದುವುದರಿಂದ ಜನಕ್ಕೆ ಪಾಪ ಪರಿಹಾರವಾಗುತ್ತದೆ; ಪುಣ್ಯ ಸಿದ್ಧಿಯಾಗುತ್ತದೆ. ಮೋಕ್ಷ ದೊರೆಯುತ್ತದೆ ಎಂಬ ಪಲ್ಲವಿಯನ್ನು ಪಠಿಸುತ್ತಾ ಬಂದ ಈ ಕಾವ್ಯಗಳು ಎಲ್ಲಾ ಪ್ರಯೋಜನಗಳನ್ನೂ ಸಂಧಿಸಿಕೊಡುವ 'ಧರ್ಮ'ವೊಂದೇ ಕವಿಗಳ ಕಾವ್ಯದ ವಸ್ತುವಾದದ್ದು ಆಶ್ಚರ್ಯವಲ್ಲ. ಮಹಾತ್ಮ್ಯೆಗಳಲ್ಲಿ ಕಾವ್ಯದ ಉದ್ದೇಶವೇ, ಧರ್ಮದ ಉದ್ದೇಶವೂ ಆದಾಗ, ಸಾಹಿತ್ಯ ಎನ್ನುವುದು ಧರ್ಮ ಪ್ರಸಾರದ ಹಾಗೂ ಧರ್ಮ ಪ್ರಚಾರದ ಮಾಧ್ಯಮಗಳಾದವು. ವೀರಶೈವ ಮತ್ತು ವೈಷ್ಣವ ಧರ್ಮದ ಕವಿಗಳು, ಉದ್ದಕ್ಕೂ ಈ ಉದ್ದೇಶದಿಂದಲೇ ಕೃತಿ ಬರೆಯುತ್ತಾ ತಮ್ಮ ಸ್ವಂತ ವಿಷಯಗಳನ್ನು ಹೇಳಿಕೊಳ್ಳುವಾಗ ತಾವು ಯಾವ ಮತಧರ್ಮದವರು ಎಂಬ ವಿಷಯವನ್ನು, ಆಯಾ ಧರ್ಮಗಳ ವಿಚಾರಗಳಲ್ಲಿ ತಮಗಿರುವ ಒಲವು ನಿಲುವುಗಳನ್ನು ಹೇಳಿಕೊಂಡಿದ್ದಾರೆ.

ಕೆಲವು ವೇಳೆ ಈ ಸಂಗತಿಯನ್ನು ಹೇಳದೆ ಬಿಟ್ಟರೂ, ಅಂಥ ಕವಿಗಳ ಕಾವ್ಯ ವಸ್ತುವಿನಿಂದಲೂ, ಅವರ ಇಷ್ಟದೇವತಾ ಸ್ತುತಿಗಳಿಂದಲೂ, ಅಥವಾ ಕಾವ್ಯಗಳಲ್ಲಿ ಮತೀಯಾಂಶಗಳಿಂದಲೂ ಅವರ ಮತ-ಧರ್ಮವನ್ನು ಗೊತ್ತು ಮಾಡಬಹುದು. ಒಟ್ಟಿನಲ್ಲಿ ಯಾವ ಕವಿಯೂ, ತಾನು ಒಪ್ಪಿಕೊಂಡ ಮತ-ಧರ್ಮಗಳ ಪ್ರಭಾವದಿಂದ ಹೊರಗೆ ನಿಲ್ಲಲು ಸಾಧ್ಯವಾಗಿಲ್ಲ. ಹಾಗೆಯೇ ಆಯಾ ಮತ-ಧರ್ಮಗಳ ಪರವಾದ ಧೋರಣೆಯಿಂದ ಹೊರತಾಗಿರಲೂ ಸಾಧ್ಯವಾಗಿಲ್ಲ. ಅಷ್ಟರಮಟ್ಟಿಗೆ ಆಯಾ ಕವಿಗಳು ಅಂದಂದಿನ ಮತ-ಧರ್ಮಗಳಿಗೆ ಬದ್ಧರಾಗಿದ್ದಾರೆ. ಹೀಗೆ ಧರ್ಮದಿಂದ ಸ್ಫೂರ್ತಿಗೊಂಡ ಸಾಹಿತ್ಯವನ್ನು ಧಾರ್ಮಿಕ ಸಾಹಿತ್ಯ, ಭಕ್ತಿ ಸಾಹಿತ್ಯ, ಅನುಭವ ಸಾಹಿತ್ಯ ಎಂದು ಹೇಳಬಹುದು. ಕಾರಣ ಮಹಾತ್ಮ್ಯೆಗಳು ಕೆಲವು ಸಲ ಭಕ್ತಿಯ ಮೌಲ್ಯಗಳನ್ನು, ಅನುಭವದ ತುಣುಕುಗಳನ್ನು ಮತ್ತು ಜೀವನದ ಮೌಲ್ಯಗಳನ್ನು ತಿಳಿಸುತ್ತವೆ. ಈ ಹಿನ್ನೆಲೆಯಲ್ಲಿ ಅಂದಿನ ಸಾಮಾಜಿಕ ಪರಿಸರದ ಸಂಗತಿಗಳೊಂದಿಗೆ ಕಥೆಯ ವಸ್ತು ವಿಷಯವನ್ನು ಅಧ್ಯಯನ ಮಾಡಬೇಕಾಗುತ್ತದೆ. ಹಾಗೆ ಸಮಕಾಲೀನ ಸಾಮಾಜಿಕ, ಚಾರಿತ್ರಿಕ ಅಂಶಗಳ ಸಾಮ್ಯತೆ ಮತ್ತು ಭಿನ್ನತೆಗಳನ್ನು ಅಧ್ಯಯನದ ಮೂಲಕ ಗುರುತಿಸುವ ಸಲುವಾಗಿ "ಕನ್ನಡದಲ್ಲಿ ಮಹಾತ್ಮ್ಯೆಗಳು: ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ.

## ೧.೨ ಅಧ್ಯಯನದ ಉದ್ದೇಶ

"ಕನ್ನಡದಲ್ಲಿ ಮಹಾತ್ಮ್ಯೆಗಳು : ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆಯ ಈ ಅಧ್ಯಯನವು ಮಹಾತ್ಮ್ಯೆಗಳ ಅರ್ಥ, ಉಗಮ, ಸ್ವರೂಪ ಹಾಗೂ ಪ್ರಕಾರಗಳನ್ನು ಕಟ್ಟಿಕೊಡುವುದು ಈ ಸಂಶೋಧನೆಯ ಮುಖ್ಯ ಉದ್ದೇಶವಾಗಿದೆ.

ಆಧುನಿಕ ಪೂರ್ವ ಕಾಲದಲ್ಲಿ ರಚನೆಗೊಂಡಿರುವ ಮಹಾತ್ಮ್ಯೆಗಳನ್ನು ಸಂಗ್ರಹಿಸಿ ಅಧ್ಯಯನ ಮಾಡಲಾಗಿದೆ.

ವ್ಯಕ್ತಿ ಮಹಾತ್ಮ್ಯೆಗಳು, ಸ್ಥಳ ಮಹಾತ್ಮ್ಯೆಗಳು, ತತ್ವ ಮಹಾತ್ಮ್ಯೆಗಳು ಎಂದು ಮೂರು ಬಗೆಯಲ್ಲಿವೆ ಇವುಗಳ ವಸ್ತು ವೈವಿಧ್ಯತೆಯನ್ನು ಹಾಗೂ ಮಹಾತ್ಮೆಗಳ ರಚನೆಯ ಸ್ವರೂಪ ಮತ್ತು ನಿರೂಪಣಾ ಶೈಲಿಯನ್ನು ಭಾಷಿಕವಾಗಿ ಅಧ್ಯಯನ ಮಾಡುವುದು ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

ಸ್ಥಳ, ವ್ಯಕ್ತಿ, ತತ್ವ ವಿಚಾರಗಳನ್ನು ವರ್ಣಿಸುವ ಮೂಲಕ ಹುಟ್ಟಿಕೊಂಡ ಮಹಾತ್ಮ್ಯೆಗಳು ವೈವಿಧ್ಯತೆಯಿಂದ ಕೂಡಿದ ಕಥೆಗಳ ಸಂಪ್ರದಾಯವನ್ನೊಳಗೊಂಡ ದೇವತೆಗಳಿಗೆ ಮತ್ತು ಪುರಾಣ ಪ್ರಸಿದ್ಧಿ ಸ್ಥಳಗಳಿಗೆ ಹೆಚ್ಚು ಒತ್ತು ಕೊಡಲಾಗಿದೆ. ಇವು ಇತಿಹಾಸಕ್ಕೆ ಮತ್ತು ಐತಿಹ್ಯಕ್ಕೆ ಎಷ್ಟು ಹತ್ತಿರವಾಗಿದೆ ಹಾಗೂ ಅಂತಹ ಮಹಾತ್ಮ್ಯೆಗಳನ್ನು ಎಷ್ಟು ಭಿನ್ನವಾಗಿ ಚಿತ್ರಿಸಲಾಗಿದೆ ಎಂಬುದನ್ನು ಸಾಂಸ್ಕೃತಿಕವಾಗಿ ಅಧ್ಯಯನ ಮಾಡಲಾಗಿದೆ.

ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಮುಂದಿನ ಉದ್ದೇಶಗಳನ್ನು ಪ್ರಧಾನವಾಗಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

➤ ಕನ್ನಡ ಸಾಹಿತ್ಯದಲ್ಲಿ ಹಲವಾರು ಮಹಾತ್ಮ್ಯೆಗಳು ಸ್ಥಳವೊಂದನ್ನು ಕುರಿತು ಅಥವಾ ವಸ್ತು, ಘಟನೆಗಳ ಸುತ್ತ ಹುಟ್ಟಿಕೊಂಡು ಕಾವ್ಯರೂಪವನ್ನು ಪಡೆದಿವೆ. ಇವು ಸಾಮಾನ್ಯವಾಗಿ ಚರಿತ್ರೆಗಳಿಂದ ಸ್ವಲ್ಪ ಭಿನ್ನವಾಗಿ ಸಾಂಪ್ರದಾಯಿಕ ಪುರಾತನವಾದ ಪುರಾಣಗಳನ್ನಾಧರಿಸಿ ಸ್ಥಳ, ವ್ಯಕ್ತಿ, ತತ್ವವಿಚಾರಗಳ ಮಹತ್ವವನ್ನು ಕೀರ್ತಿಸುವ ಉದ್ದೇಶದಿಂದ ಮಹಾತ್ಮ್ಯೆಗಳು ಹುಟ್ಟಿಕೊಂಡವು. ಇವು ವೈವಿಧ್ಯತೆಯಿಂದ ಕೂಡಿದ ಕಲ್ಪನಾ ಕಥೆಗಳ ಸಂಪ್ರದಾಯವನ್ನೊಳಗೊಂಡ ದೇವತೆಗಳ, ಪುರಾಣ ಪ್ರಸಿದ್ಧರ ಸ್ಥಳಗಳನ್ನು ಚಿತ್ರಿಸುವ ಚರಿತ್ರೆಗಳೇ ಆಗಿವೆ. ಇವುಗಳ ಮೂಲಕ ಅಂದಿನ ಸಮಕಾಲೀನ ಜನಜೀವನ ತಿಳಿಯುವುದು ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

- ವೈವಿಧ್ಯಮಯವಾದ ಮಹಾತ್ಮೆಗಳು ಒಂದು ಪ್ರತ್ಯೇಕ ಸಾಹಿತ್ಯ ಪ್ರಕಾರವಾಗಿ ಬೆಳೆದುಬಂದಿಲ್ಲ. ಭಕ್ತಿ, ಆಚರಣೆ, ವ್ರತ, ತೀರ್ಥಕ್ಷೇತ್ರಗಳನ್ನು ಹೇಳುವ ಮಹಾತ್ಮೆಗಳು, ಹಲವಾರು ಕಾವ್ಯಪ್ರಕಾರದಲ್ಲಿ ರಚಿತವಾಗಿವೆ. ಚಂಪೂ, ಷಟ್ಪದಿ, ಗದ್ಯ, ರಗಳೆ, ಚೌಪದಿ ಮುಂತಾದ ಛಂದೋ ವೈವಿಧ್ಯ ಹಾಗೂ ಶೈಲಿಯಿಂದ ವಿಶಿಷ್ಟವಾದ ಸ್ಥಾನ ಪಡೆದಿವೆ. ಹೀಗೆ ಚಿತ್ರಿತವಾಗಿರುವ ಭಾಷೆಯ ವೈಶಿಷ್ಟ್ಯಗಳ ಸ್ವರೂಪವನ್ನು ತಿಳಿಯುವುದು ಈ ಅಧ್ಯಯನದ ಉದ್ದೇಶಗಳಲ್ಲೊಂದಾಗಿದೆ.
- ಮಹಾತ್ಮೆಗಳು ರಚನೆಗೊಂಡಿರುವುದು ಸಾಮಾಜಿಕ ಮತ್ತು ಸಾಂಸ್ಕೃತಿಕವಾಗಿ ಬೆಳವಣಿಗೆಯಾದ ವಿಶಿಷ್ಟ ಪರಿಸರದಲ್ಲಿ. ಈ ಸಂದರ್ಭದಲ್ಲಿ ರಾಜಕೀಯವಾಗಿ ಅಭಿವೃದ್ಧಿ ಹೊಂದಿದ್ದ ಈ ಪರಿಸರಗಳು ವಿಶಿಷ್ಟವಾಗಿದ್ದವು. ಈ ಹಿನ್ನೆಲೆಯಲ್ಲಿ ಎಲ್ಲಾ ಮಹಾತ್ಮೆಗಳಲ್ಲಿ ಆ ಕಾಲದ ಸಾಂಸ್ಕೃತಿಕ ಪರಿಸರದ ಚಿತ್ರಣ ಅಡಕಗೊಂಡಿರುವುದನ್ನು ಕಾಣಬಹುದು. ಹಾಗಾಗಿ ಈ ಮಹಾತ್ಮೆಗಳಲ್ಲಿ ನಿರೂಪಿತವಾಗಿರುವ ೧೬-೧೭ನೇ ಶತಮಾನದ ಹಲವು ಸಾಂಸ್ಕೃತಿಕ ಸಂಗತಿಗಳನ್ನು, ಧಾರ್ಮಿಕ ಸಂಗತಿಗಳನ್ನು, ಆರ್ಥಿಕ ಸಂಗತಿಗಳನ್ನು, ರಾಜಕೀಯ ಸಂಗತಿಗಳನ್ನು, ವಿನಾದಾವಳಿಗಳನ್ನು ಮತ್ತು ಸಾಮಾಜಿಕ ಮೌಲ್ಯಗಳನ್ನು ಸಾಂಸ್ಕೃತಿಕವಾಗಿ ಅಧ್ಯಯನ ಮಾಡುವುದು ಪ್ರಮುಖ ಉದ್ದೇಶವಾಗಿದೆ.

ಈ ಎಲ್ಲಾ ಉದ್ದೇಶಗಳನ್ನು ಹಿನ್ನೆಲೆಯಾಗಿ "ಕನ್ನಡದಲ್ಲಿ ಮಹಾತ್ಮೆಗಳು: ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯವನ್ನು ಸಮಗ್ರವಾಗಿ ಚರ್ಚಿಸಲಾಗಿದೆ.

**೧.೩ ಅಧ್ಯಯನ ವ್ಯಾಪ್ತಿ ಮತ್ತು ವೈಧಾನಿಕತೆ**

"ಕನ್ನಡದಲ್ಲಿ ಮಹಾತ್ಮೆಗಳು: ಸಾಂಸ್ಕೃತಿಕ ಅಧ್ಯಯನ"ವಾದ್ದರಿಂದ ಮುಖ್ಯವಾಗಿ ಈ ಮಹಾತ್ಮೆಗಳಲ್ಲಿನ ವಸ್ತುವಿಷಯದ ಮೇಲೆಯೇ ಕೇಂದ್ರೀಕೃತವಾಗಿರುತ್ತದೆ. ಆದರೂ ಅಧ್ಯಯನವೆಂದರೆ ಕೇವಲ ಮಹಾತ್ಮೆಗಳ ಪುರಾಣಾಂಶವೇ ಅಧ್ಯಯನವಲ್ಲ. ಆದ್ದರಿಂದ ಮಹಾತ್ಮೆಗಳ ಅರ್ಥ, ಉಗಮ, ಸ್ವರೂಪದಿಂದ ಹಿಡಿದು ಅದರ ಪ್ರಕಾರಗಳನ್ನು ಹೇಳುತ್ತ; ಇದರೊಂದಿಗೆ ಚಾರಿತ್ರಿಕ, ಐತಿಹ್ಯಕ ಮತ್ತು ಸಾಂಸ್ಕೃತಿಕವಾಗಿ ವಿಸ್ತೃತ ಅಧ್ಯಯನ ಮುಖ್ಯವಾಗುತ್ತದೆ. ಕನ್ನಡದಲ್ಲಿ ಹಲವಾರು ಮಹಾತ್ಮೆ ಕೃತಿಗಳನ್ನು ರಚಿಸಿದ್ದಾರೆ. ಆದರೆ ಆಧುನಿಕಪೂರ್ವ ಕಾಲದ ೧೬-೧೭ನೇ ಶತಮಾನದ (ವಿಜಯನಗರ ಅರಸರ ಕಾಲದ) ಸಾಹಿತ್ಯಕ್ಕೆ ಹೆಚ್ಚು ಒತ್ತು ಕೊಟ್ಟು ಅಧ್ಯಯನದ ವ್ಯಾಪ್ತಿಯನ್ನು ಗುರುತಿಸಿಕೊಳ್ಳಲಾಗಿದೆ.

## ವೈಧಾನಿಕತೆ

ಸಾಹಿತ್ಯ ಮತ್ತು ಇತರೆ ಪೂರಕ ಆಕರಗಳ ಮಾಹಿತಿಯೊಂದಿಗೆ "ಕನ್ನಡದಲ್ಲಿ ಮಹಾತ್ಮೆಗಳು : ಸಾಂಸ್ಕೃತಿಕ ಅಧ್ಯಯನ"ವನ್ನು ಕೈಗೊಳ್ಳಲಾಗಿದೆ. ಈ ಅಧ್ಯಯನಕ್ಕೆ ಪ್ರಮುಖವಾಗಿ ಕ್ಷೇತ್ರ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವ ಸ್ಥಳ ಮಹಾತ್ಮೆಗಳ ಗ್ರಂಥಗಳನ್ನು ಪ್ರಮುಖ ಆಕರಗಳಾಗಿ ಬಳಸಿಕೊಳ್ಳಲಾಗಿದೆ. ನಂತರ ಪೂರಕ ಆಕರಗಳಾಗಿ ವಿದ್ವಾಂಸರ ಬರಹಗಳು, ಲೇಖನಗಳು, ಚಾರಿತ್ರಿಕ ಕೃತಿಗಳು ಮತ್ತು ಕರ್ನಾಟಕ ಸ್ಥಳ ಗ್ಯಾಜಿಟಿಯರ್‌ಗಳ ಮೂಲಕ ಪ್ರಮುಖ ಕ್ಷೇತ್ರ, ಅಥವಾ ಸ್ಥಳಗಳ ಸಂಪೂರ್ಣ ಮಾಹಿತಿಯನ್ನು ವಿವರಣಾತ್ಮಕವಾಗಿ ದಾಖಲಿಸಿಕೊಳ್ಳುವುದರ ಜೊತೆಜೊತೆಗೆ ಅವುಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಹೀಗಾಗಿ ಈ ಅಧ್ಯಯನವು ಆಕರಮುಖಿ ಮತ್ತು ವಿಶ್ಲೇಷಣಾ ಮುಖಿ ಮಾದರಿ ವಿಧಾನವನ್ನು ಇಲ್ಲಿ ಅನುಸರಿಸಲಾಗಿದೆ.

ಮಹಾತ್ಮೆಗಳು ಕನ್ನಡದಲ್ಲಿ ಕಾವ್ಯ, ಚರಿತ್ರೆ, ಐತಿಹ್ಯದ ಮೂಲಕ ಕ್ಷೇತ್ರ ಹಿನ್ನೆಲೆಯಲ್ಲಿ ಧರ್ಮವನ್ನು ಹೇಗೆ ಕಾವ್ಯಗಳು ಅಭಿವ್ಯಕ್ತಿಸಿವೆ ಎಂಬುದನ್ನು ವಿಶ್ಲೇಷಣಾತ್ಮಕ ವಿಧಾನವನ್ನು ಅನುಸರಿಸಲಾಗಿದೆ.

"ಕನ್ನಡದಲ್ಲಿ ಮಹಾತ್ಮೆಗಳು : ಸಾಂಸ್ಕೃತಿಕ ಅಧ್ಯಯನ"ವನ್ನು ಸಾಂಸ್ಕೃತಿಕ ಬದುಕಿನಲ್ಲಿ ಜೀವನಾವರ್ತನ ಆಚರಣೆಗಳು, ಸಂಪ್ರದಾಯಗಳು, ನಂಬಿಕೆ, ನಿಷೇಧ, ಮನೋರಂಜನೆ ಹಾಗೂ ಕಾರ್ಯಕರ್ತವ್ಯಗಳ ಕುರಿತಾದ ಮಾಹಿತಿಯನ್ನು ವರ್ತಮಾನದ ಆಲೋಚನೆ ಮೂಲಕ ಶೋಧಿಸುವ ಹಾಗೂ ಅರ್ಥೈಸುವ ಸಾಂಸ್ಕೃತಿಕ ವಿಧಾನವನ್ನು ಈ ಸಂಶೋಧನೆಯನ್ನು ಒಳಪಡಿಸಲಾಗಿದೆ. ಮಹಾತ್ಮೆಗಳಿಗೆ ಸಂಬಂಧಿಸಿದಂತೆ ಮಹಾತ್ಮೆ ಕೃತಿಗಳು ಸಾಹಿತ್ಯ ಮತ್ತು ಕ್ಷೇತ್ರ ಮಾಹಿತಿಗಳ ಪರಸ್ಪರ ಅಂತರ್‌ಸಂಬಂಧ ಹೊಂದಿದ್ದು ಅವುಗಳಲ್ಲಿನ ಸಾಂಸ್ಕೃತಿಕ ಅಂಶಗಳನ್ನು ಶೋಧಿಸುವುದು ಇಲ್ಲಿಯ ಪ್ರಮುಖ ವಿಧಾನವಾಗಿದೆ.

ಒಟ್ಟಾರೆಯಾಗಿ ಈ ಅಧ್ಯಯನವು ಬಹುಮುಖಿ ಆಕರಗಳ ಸಂಗ್ರಹ ಮತ್ತು ವಿಶ್ಲೇಷಣಾತ್ಮಕ ಮಾದರಿಯಲ್ಲಿ ಈ ಮಹಾಪ್ರಬಂಧವನ್ನು ರಚಿಸಲಾಗಿದೆ.

## ೧.೪ ಅಧ್ಯಯನದ ಸ್ವರೂಪ

"ಕನ್ನಡದಲ್ಲಿ ಮಹಾತ್ಮೆಗಳು : ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಒಟ್ಟು ಏಳು ಅಧ್ಯಾಯಗಳನ್ನು ರೂಪಿಸಿಕೊಳ್ಳಲಾಗಿದೆ.

ಮೊದಲನೆಯ ಅಧ್ಯಯನದ ಪೂರ್ವ ಪೀಠಿಕೆಯಲ್ಲಿ ಅಧ್ಯಯನಕ್ಕೆ ಸೂಕ್ತ ಪ್ರಸ್ತಾವನೆಯನ್ನು ಹಾಕಿಕೊಳ್ಳುವುದರ ಮೂಲಕ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪಗಳನ್ನು ತಿಳಿಸಲಾಗಿದೆ. ನಂತರ ಮಹಾತ್ಮ್ಯೆ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಇದುವರೆಗೂ ನಡೆದ ಅಧ್ಯಯನಗಳನ್ನು ಸಮೀಕ್ಷೆ ಸ್ವರೂಪದಲ್ಲಿ ಕಟ್ಟಿಕೊಡಲಾಗಿದೆ.

ಎರಡನೆಯ ಅಧ್ಯಯನದಲ್ಲಿ ಮಹಾತ್ಮ್ಯೆಗಳ ಅರ್ಥ, ಉಗಮ, ಸ್ವರೂಪ ಮತ್ತು ಪ್ರಕಾರಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸುವುದರ ಮೂಲಕ ವಿಶ್ಲೇಷಿಸಲಾಗಿದೆ.

ಮೂರನೆಯ ಅಧ್ಯಯನದಲ್ಲಿ ಮಹಾತ್ಮ್ಯೆಗಳ ವಸ್ತು-ವಿನ್ಯಾಸವನ್ನು ಚರ್ಚಿಸಲಾಗಿದೆ. ಮಹಾತ್ಮ್ಯೆಗಳಲ್ಲಿ ಚಿತ್ರಿತವಾಗಿರುವ ವಸ್ತುವನ್ನು ಮೂರು ಬಗೆಯಲ್ಲಿ ಗುರುತಿಸಿಕೊಳ್ಳುತ್ತಾ ಚರ್ಚೆ ಮಾಡಲು ಪ್ರಾರಂಭಿಸಿದ್ದೇನೆ. ಅದೆಂದರೆ ವ್ಯಕ್ತಿ ಮಹಾತ್ಮ್ಯೆಗಳು, ಸ್ಥಳ ಮಹಾತ್ಮ್ಯೆಗಳು, ತತ್ವಕೇಂದ್ರಿತ ಮಹಾತ್ಮ್ಯೆಗಳು ಎಂದು, ಇವುಗಳ ಮೂಲಕ ಸಂಕ್ಷಿಪ್ತ ಕಥಾವಸ್ತುವನ್ನು ಪರಿಚಯಿಸುವ ಪ್ರಯತ್ನ ಮಾಡಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಮಹಾತ್ಮ್ಯೆಗಳ ಚಾರಿತ್ರಿಕ ವಿವೇಚನೆಯನ್ನು ಮಾಡಲಾಗಿದೆ. ಇದರಲ್ಲಿ ಮೂಲಕೃತಿಗಳೊಂದಿಗೆ ಕರ್ನಾಟಕ ಗ್ಯಾಜಿಟಿಯರ್‌ಗಳು ಮತ್ತು ಕರ್ನಾಟಕ ಇತಿಹಾಸ ಕೃತಿಗಳನ್ನಿಟ್ಟುಕೊಂಡು ಚರಿತ್ರೆಯನ್ನು ಕಟ್ಟಿಕೊಡುವ ಮತ್ತು ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

ಅಧ್ಯಾಯ ಐದರಲ್ಲಿ ಮಹಾತ್ಮ್ಯೆಗಳ ಸಾಂಸ್ಕೃತಿಕ ವಿಶ್ಲೇಷಣೆ ಮಾಡಲಾಗಿದೆ. ವಿಭಿನ್ನ ಪರಿಸರದಲ್ಲಿ ರಚನೆಯಾದ ಮಹಾತ್ಮ್ಯೆಗಳನ್ನು ಮಾನವ ಸಂಸ್ಕೃತಿಗೆ ಸಂಬಂಧಿಸಿದ ಸಾಮಾಜಿಕ ಸಂಗತಿಗಳು, ಧಾರ್ಮಿಕ ಸಂಗತಿಗಳು, ಆರ್ಥಿಕ ಸಂಗತಿಗಳು, ರಾಜಕೀಯ ಸಂಗತಿಗಳು ಮತ್ತು ಮನೋರಂಜನೆಗೆ ಸಂಬಂಧಿಸಿದ ವಿನೋದಾವಳಿ ಸಂಗತಿಗಳು ಹೇಗೆ ಚಿತ್ರಣಗೊಂಡಿವೆ, ಕವಿಗಳು ಅವುಗಳನ್ನು ನಿರೂಪಿಸಿರುವ ಬಗೆಯನ್ನು ಇಲ್ಲಿ ಚರ್ಚಿಸಲಾಗಿದೆ. ಸಂಸ್ಕೃತಿ ಮನುಷ್ಯನ ಅವಿಭಾಜ್ಯ ಅಂಗ, ಮಾನವನ ಸಾಮಾಜಿಕ ಬದುಕು ಮಹತ್ವವಾದುದು. ಅದು ಈ ಪುರಾಣಗಳ ರಚನಾ ಕಾಲದಲ್ಲಿ ಹೇಗಿತ್ತು ಎಂಬುದನ್ನು ಸಾಮಾಜಿಕ ಸಂಗತಿಗಳನ್ನು ವಿವರಿಸಲಾಗಿದೆ. ಧಾರ್ಮಿಕ ಸಂಗತಿಗಳಲ್ಲಿ ಧರ್ಮ-ಧರ್ಮಗಳ ನಡುವೆ ನಡೆಯುತ್ತಿದ್ದ ಸಂಘರ್ಷಗಳು ಮತ್ತು ಅಂದಿನ ಸಮಾಜ ಹೇಗೆ ತಮ್ಮನ್ನು ಭಕ್ತಿಯಲ್ಲಿ ತೊಡಗಿಸಿಕೊಂಡಿತ್ತು ಎಂಬ ಅಂಶಗಳು ಇಲ್ಲಿ ವಿವರಿಸಲ್ಪಟ್ಟಿದೆ. ರಾಜಕೀಯವಾಗಿ ಅಂದಿನ ರಾಜನೀತಿಗಳು,

ಮತ್ತು ರಾಜನ ಮೌಲ್ಯಗಳನ್ನು ಹೇಳುವುದರ ಮೂಲಕ ನ್ಯಾಯ, ನೀತಿ ಮುಂತಾದ ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ. ಆರ್ಥಿಕ ಅಂಶಗಳಾದ ಅಂದಿನ ಕೃಷಿ ಪದ್ಧತಿ ಮತ್ತು ಪಶುಪಾಲನೆಯ ಸಂಸ್ಕೃತಿಯನ್ನು ವಿವರಿಸಲಾಗಿದೆ.

ಅಧ್ಯಾಯ ಆರು ಮಹಾತ್ಮ್ಯೆಗಳನ್ನು ಕುರಿತ ಭಾಷಿಕವಾದ ಅಧ್ಯಯನವಾಗಿದೆ. ಇದರಲ್ಲಿ ಕಾವ್ಯ ಸೌಂದರ್ಯವನ್ನು ಕುರಿತಂತೆ ಎಲ್ಲಾ ಮಹಾತ್ಮ್ಯೆಗಳು ಒಂದೇ ರೀತಿಯ ಭಾಷಿಕ ಪ್ರಕಾರವಾಗಿ ರಚನೆಯಾಗಿಲ್ಲ. ಚಂಪೂ, ಷಟ್ಪದಿ, ರಗಳೆ, ಸಾಂಗತ್ಯ, ಚೌಪದಿ ಮತ್ತು ಗದ್ಯದಲ್ಲಿ ರಚನೆ ಮಾಡಲಾಗಿದೆ. ಅದರಲ್ಲೂ ದೇಸಿಯ ಛಂದೋಬಂಧವಾದ ಭಾಮಿನಿ ಷಟ್ಪದಿಯಲ್ಲಿ ಅತೀ ಹೆಚ್ಚು ಕೃತಿಗಳನ್ನು ವರ್ಣಿಸಲಾಗಿದೆ. ಅದರಲ್ಲಿ ಅಷ್ಟಾದಶ ವರ್ಣನೆಗಳಲ್ಲಿ ಕೆಲವೊಂದನ್ನು ಬಳಸಿದ ಕವಿಗಳು ಅವುಗಳ ನಿರೂಪಣೆಯ ವಿಧಾನಗಳನ್ನು ಹೇಗೆ ಮಾಡಿದ್ದಾರೆ ಎನ್ನುವುದನ್ನು ಉದಾಹರಣೆಗಳ ಸಹಿತವಾಗಿ ವಿವರಿಸಲಾಗಿದೆ. ಒಟ್ಟಾರೆಯಾಗಿ ಮಹಾತ್ಮ್ಯೆಗಳ ಕಾವ್ಯ ಸೌಂದರ್ಯ ಮತ್ತು ಭಾಷಿಕ ಶೈಲಿಯನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಅಧ್ಯಾಯ ಏಳು ಕೊನೆಯ ಸಮಾರೋಪವಾಗಿದ್ದು, ಈ ಅಧ್ಯಾಯದಲ್ಲಿ ಒಟ್ಟಾರೆಯಾಗಿ ಈ ಮಹಾಪ್ರಬಂಧಕ್ಕೆ ರೂಪಿಸಿಕೊಂಡ ಮೇಲಿನ ಅಧ್ಯಾಯಗಳಿಂದ ಕಂಡುಕೊಂಡ ಹೊಸ ಅಂಶಗಳನ್ನು ಪ್ರಸ್ತುತಪಡಿಸುವುದರ ಜೊತೆಗೆ ಪ್ರಮುಖ ಫಲಿತಗಳನ್ನು ನೀಡಲಾಗಿದೆ.

**ಅಧ್ಯಯನದ ಸಮೀಕ್ಷೆ**

ಕನ್ನಡದಲ್ಲಿ ಬಂದ ಮಹಾತ್ಮ್ಯೆಗಳಿಗೆ ಸಂಬಂಧಿಸಿದಂತೆ ಇದುವರೆಗೂ ಯಾವುದೇ ಅಧ್ಯಯನವಾಗಿಲ್ಲ. ಗ್ರಂಥಸಂಪಾದನೆಯ ಪ್ರಸ್ತಾವನೆ ರೂಪದಲ್ಲಿ, ವಿಮರ್ಶೆಯ ರೂಪದಲ್ಲಿ, ಲೇಖನಗಳ ರೂಪದಲ್ಲಿ ಹಾಗೂ ಮಹಾತ್ಮ್ಯೆಗಳಿಗೆ ಸಂಬಂಧಪಟ್ಟಂತಹ ಅಥವಾ ಹೋಲಿಕೆಯಾಗುವಂತಹ ಕೆಲವು ಪಿಎಚ್.ಡಿ. ಮಹಾಪ್ರಬಂಧಗಳನ್ನು ಅಧ್ಯಯನಕ್ಕೆ ಅಳವಡಿಸಿಕೊಂಡು ಅವುಗಳ ಸಂಕ್ಷಿಪ್ತ ಸ್ವರೂಪವನ್ನು ಇಲ್ಲಿ ಕೊಡಲಾಗಿದೆ.

**'ಕನ್ನಡ ವಿಶ್ವಕೋಶ (ಸಂ-೧೩)',** ಇದು ಕುವೆಂಪು ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ ಪ್ರಸಾರಾಂಗದಿಂದ ೧೯೯೮ರಲ್ಲಿ ಪ್ರಕಟವಾಗಿದೆ. ಇದರಲ್ಲಿ ಮಹಾತ್ಮ್ಯೆಗಳೆಂದರೆ ಕ್ಷೇತ್ರ ಸಂದರ್ಶನ, ಪವಿತ್ರ ನದಿಸ್ನಾನ, ಪುಣ್ಯಶ್ಲೋಕದ ಜೀವನಾಧ್ಯಯನ ಮುಂತಾದವುಗಳ ಮೌಲ್ಯಗಳನ್ನು ಶ್ರುತಪಡಿಸುವ ಕೃತಿಗಳೇ ಮಹಾತ್ಮ್ಯೆಗಳೆಂದಿದೆ. ಪಾಪಕಲುಷಿತ ಜನರು ಪಾಪ ಮುಕ್ತರಾಗಲು ವ್ರತಾಚರಣೆ, ತೀರ್ಥಸ್ನಾನ, ಕ್ಷೇತ್ರ ಸಂದರ್ಶನ,

ದೇವತಾ ಪೂಜೆ ಇದನ್ನು ಮಾಡಬೇಕು ಎಂಬ ಧರ್ಮ ಸೂಕ್ಷ್ಮವಿದೆ. ಈ ಕಾರ್ಯಗಳಲ್ಲಿ ಪ್ರವೃತ್ತಿ ಉಂಟಾಗಲು ಇವುಗಳ ಶ್ರೇಷ್ಠತೆಯನ್ನು, ಗುಣಕೀರ್ತನೆಯ ಫಲಗಳನ್ನೂ ತಿಳಿಸುವ ಅನೇಕ ಕೃತಿಗಳಿವೆ. ಇವೇ ಮಹಾತ್ಮೆಗಳನ್ನು ಹೇಳುವ ಕೃತಿಗಳು. ಸಾಮಾನ್ಯವಾಗಿ ಇವು ಅಧಿಕವಾಗಿ ಕಂಡುಬರುವುದು ಸಂಸ್ಕೃತ ಪುರಾಣ ಗ್ರಂಥಗಳಲ್ಲಿ. ತೀರ್ಥ, ಕ್ಷೇತ್ರ, ಮಾಸವ್ರತಗಳಿಗೆ ಸಂಬಂಧಪಟ್ಟ ಅನೇಕ ಕೃತಿಗಳಿವೆ ಎಂಬ ಮಾಹಿತಿಯನ್ನು ಹೇಳುವುದರ ಜೊತೆಗೆ ಮಹಾತ್ಮೆಗಳು ಯಾವ ಸಂವಾದ ರೂಪದಲ್ಲಿ ಹುಟ್ಟಿಕೊಳ್ಳುತ್ತವೆ ಮತ್ತು ಆಯಾ ಕ್ಷೇತ್ರ, ತೀರ್ಥ, ವ್ರತಗಳಿಗೆ ಸಂಬಂಧಪಟ್ಟ ಕಥನಾಕವೇ ಇರುತ್ತದೆ ಎಂದು ಹೇಳುತ್ತಾ ೧೬ನೇ ಶತಮಾನದಲ್ಲಿ ಅತೀ ಹೆಚ್ಚು ಮಹಾತ್ಮೆಗಳು ರಚನೆಯಾದವು. (ಅರಸರ ಕಾಲಘಟ್ಟದಲ್ಲಿ) ಅವುಗಳ ಕವಿ, ಕಾಲ, ಗ್ರಂಥಗಳ ವಿಶೇಷತೆಯ ಪಟ್ಟಿಯನ್ನು ಕೊಡಲಾಗಿದೆ. ಇದು ಈ ಅಧ್ಯಯನಕ್ಕೆ ಪ್ರಮುಖವಾಗಿ ಕೃತಿಗಳ ಪಟ್ಟಿಯನ್ನು ಮತ್ತು ಕೆಲವು ಮಹತ್ವವಾದ ಸಂಗತಿಗಳನ್ನು ಈ ಕೃತಿಯು ಒದಗಿಸುತ್ತದೆ.

ಡಾ.ಕೆ. ರವೀಂದ್ರನಾಥ ಅವರು **'ಕನ್ನಡ ದಾಖಲು ಸಾಹಿತ್ಯ'** ಎಂಬ ಕೃತಿಯನ್ನು ೨೦೦೦ರಲ್ಲಿ ಪ್ರಕಟಿಸಿದ್ದಾರೆ. ೨೦೧೪ರ ಹೊತ್ತಿಗೆ ಮೂರು ಮುದ್ರಣ ಕಂಡಿದೆ. ಪ್ರಸ್ತುತ ಕೃತಿಯಲ್ಲಿ ದಾಖಲು ಸಾಹಿತ್ಯ ಅರ್ಥ, ಉಗಮ, ಸ್ವರೂಪ ಮತ್ತು ದಾಖಲು ಸಾಹಿತ್ಯದ ಪ್ರಕಾರಗಳನ್ನು ಗುರುತಿಸಲಾಗಿದೆ. ಅದರಲ್ಲಿ ಸ್ಥಳ ಪುರಾಣ/ಮಹಾತ್ಮೆಗಳು ಎಂಬ ಒಂದು ಪ್ರಕಾರವನ್ನು ಅರ್ಥ, ಉಗಮ, ಸ್ವರೂಪದೊಂದಿಗೆ, ಮಹಾತ್ಮೆಯ ಪ್ರಕಾರಗಳಿಂದ ವ್ಯಕ್ತಿಕೇಂದ್ರಿತ ಮಹಾತ್ಮೆಗಳು, ತತ್ವಕೇಂದ್ರಿತ ಮಹಾತ್ಮೆಗಳು, ಸ್ಥಳಕೇಂದ್ರಿತ ಮಹಾತ್ಮೆಗಳನ್ನು ಸ್ವರೂಪವನ್ನು ಮತ್ತು ಯಾವ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುತ್ತವೆ ಎನ್ನುವುದನ್ನು ಹೇಳುವುದರ ಮೂಲಕ ಪ್ರಮುಖ ಸ್ಥಳ ಪುರಾಣದ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಮಹಾತ್ಮೆಗಳನ್ನು ಗುರುತಿಸಿ ವಿವರಿಸಿದ್ದಾರೆ. ಇದು ಈ ಅಧ್ಯಯನಕ್ಕೆ ಪ್ರಮುಖ ಆಕರವಾಗಿದೆ.

ಹು.ಕಾ. ಜಯದೇವ್ ಅವರು **'ಶಾಸನ ಮತ್ತು ಗದ್ಯ'** ಎಂಬ ಕೃತಿಯನ್ನು ೧೯೭೫ರಲ್ಲಿ ಪ್ರಕಟಿಸಿದ್ದಾರೆ. ೨೦೧೫ರ ಹೊತ್ತಿಗೆ ೮ನೇ ಮುದ್ರಣವನ್ನು ಈ ಕೃತಿಯು ಕಂಡಿದೆ. ಪ್ರಸ್ತುತ ಈ ಕೃತಿಯಲ್ಲಿ ಗದ್ಯ ಸಾಹಿತ್ಯವನ್ನು ಚರ್ಚಿಸುತ್ತಾ 'ಗದ್ಯ ಕಥೆಗಳು' ಎಂಬ ವಿಷಯವನ್ನು ಚರ್ಚಿಸುವಾಗ ಮಹಾತ್ಮೆಗಳ ಪ್ರಸ್ತಾಪ ಬರುತ್ತದೆ. ಇದರಲ್ಲಿ ಮಹಾತ್ಮೆಗಳು ಎಲ್ಲಾ ಛಂದೋರೂಪಗಳಲ್ಲೂ ಇವೆ. ಆದರೆ ಗದ್ಯಗಳಲ್ಲಿ ಮಹಾತ್ಮೆಗಳದ್ದೇ ಮೇಲುಗೈ ಎಂಬ ಹೇಳಿಕೆ ಸಿಗುತ್ತದೆ. ಹಾಗೆ ಮಹಾತ್ಮೆಗಳನ್ನು ಅತೀ ಹೆಚ್ಚು ಬರೆದವರಲ್ಲಿ ವೈದ್ಧಿಕರು. ವೈದ್ಧಿಕರದ್ದೇ ಹೆಗ್ಗಳಿಕೆಯಾಗಿದೆ ಎಂದು ಹೇಳುತ್ತಾ, ಮಹಾತ್ಮೆಗಳಿಗೂ ನೋಂಪಿಯ

ಕಥೆಗಳಿಗೂ ಕೆಲವು ವ್ಯತ್ಯಾಸವನ್ನು ಗುರುತಿಸುತ್ತಾರೆ. ಅದೆಂದರೆ, ನೋಂಪಿಯಾ ಕಥೆಗಳಲ್ಲಿ ಕಥಾಂಶ ಕಡಿಮೆ ಇಲ್ಲವೆಂದರೂ ಆದಿತು. ಆಚಾರ-ವಿಚಾರಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡಲಾಗುತ್ತದೆ. ಆದರೆ ಮಹಾತ್ಮೆಗಳಲ್ಲಿ ಕಥಾಂಶ ಹೆಚ್ಚಾಗಿರುತ್ತದೆ. ನೋಂಪಿಯ ಕಥೆಗಳ ಪ್ರಾಚೀನತೆಯನ್ನು ಹತ್ತು ಹನ್ನೆರಡನೆಯ ಶತಮಾನದಿಂದ ಗುರುತಿಸಲಾಗುತ್ತದೆ. ಮಹಾತ್ಮೆಗಳಿಗೆ ಅಷ್ಟೊಂದು ಪ್ರಾಚೀನತೆಯಿಲ್ಲ. ರಾಘವಾಂಕನು ಬರೆದಿರುವ 'ಹರಿಹರ ಮಹತ್ವ'ವನ್ನು ನಾವು ಮಹಾತ್ಮೆ ಎಂದು ಕರೆಯಬಹುದಾದರೆ ಅದು ಕನ್ನಡದ ಮೊದಲಿನ ಮಹಾತ್ಮೆಯಾಗುತ್ತದೆ. ಬಹುಶಃ ಷಟ್ಪದೀ ರೂಪದಲ್ಲಿರಬಹುದಾದ ಅದು ನಮಗೆ ದೊರೆತಿಲ್ಲ ಇದನ್ನು ಬಿಟ್ಟರೆ ನಮಗೆ ಮಹಾತ್ಮೆಗಳು ಕಂಡುಬರುವುದು ಹದಿನೇಳನೆಯ ಶತಮಾನದಿಂದೀಚೆಗೆ (ಕ್ರಿ.ಶ. ೧೬೫೦) ಮೈಸೂರು ಒಡೆಯರ ಕಾಲದಲ್ಲಿ. ಅನಂತರ ಸ್ವತಃ ಅರಸರೇ ಮಹಾತ್ಮೆಗಳನ್ನು ರಚಿಸಿರುವುದಾಗಿ ಚಿಕ್ಕುಪಾಧ್ಯಾಯ, ಕಳಲೇ ನಂಜರಾಜ ಮತ್ತು ಮುಮ್ಮಡಿ ಕೃಷ್ಣರಾಜರು ಕ್ರಮವಾಗಿ ಅತಿ ಹೆಚ್ಚಿನ ಸಂಖ್ಯೆಯ ಮಹಾತ್ಮೆಗಳನ್ನು ಬರೆದಿದ್ದಾರೆ. ಈ ಮಹಾತ್ಮೆಗಳ ದೇವರ ಹೆಸರಿನಲ್ಲಿರುವ ಸಂಖ್ಯೆ ಕಡಿಮೆ. ಶನಿದೇವರ ಮಹಾತ್ಮೆ, ಶ್ರೀರಂಗ ಮಹಾತ್ಮೆ ಮೊದಲಾದವು ದೇವರ ಮಹಾತ್ಮೆ ಆದರೆ ಆ ದೇವರುಗಳು ನೆಲೆಸಿರುವ ಸ್ಥಳಗಳ ಮಹಾತ್ಮೆಗಳಾಗಿವೆ. ಅದರಲ್ಲೂ ಬೆಟ್ಟಗಳ ಮೇಲೆ ನೆಲೆಸಿರುವ ದೇವರೆಂದರೆ ಜನಗಳಿಗೆ ಅಪಾರ ಭಕ್ತಿ, ಅಂತೆಯೇ ಮಹಾತ್ಮೆಗಳಿಗೂ ಕೂಡ ಕಮಲಾಚಲ, ಹಸ್ತಗಿರಿ, ವೆಂಕಟಗಿರಿ, ಶ್ರೀಶೈಲ, ಯದುಗಿರಿ ಮೊದಲಾದವು ಹುಟ್ಟಿವೆ. ಅದರಂತೆ ಊರಿನಲ್ಲಿ ಹುಟ್ಟಿರುವ ಮಹಾತ್ಮೆಗಳಾದ ಶ್ರೀರಂಗ ಮಹಾತ್ಮೆ, ಬಳ್ಳಿಗಾವಿ ಮಹಾತ್ಮೆಯನ್ನು ಗುರುತಿಸುತ್ತ ಪುಣ್ಯ ನದಿಗಳ ಮಹಾತ್ಮೆಯನ್ನು ಹಾಗೂ ಇತರೆ ಮಹಾತ್ಮೆಗಳನ್ನು ವಿವರಿಸುತ್ತಾ ಅವುಗಳ ಭಾಷೆಯ ಬಗ್ಗೆ ಹೇಳಲಾಗಿದೆ.

ರಘುಸುತ ಅವರ **'ಶ್ರೀ ವೈಷ್ಣವ ದರ್ಶನ ಮತ್ತು ಸಂಸ್ಕೃತಿ'** ಎಂಬ ಕೃತಿಯು ವೈಷ್ಣವ ಪ್ರಕಾಶನದಿಂದ ೧೯೮೦ರಲ್ಲಿ ಪ್ರಕಟವಾಗಿದೆ. ಪ್ರಸ್ತುತ ಈ ಕೃತಿಯಲ್ಲಿ ಶ್ರೀ ವೈಷ್ಣವ ದರ್ಶನ ಕೃತಿಯಲ್ಲಿ ವೈಷ್ಣವ ಧರ್ಮದ ತತ್ವ, ಇತಿಹಾಸ, ಅರಸರ ಪ್ರೋತ್ಸಾಹ, ಮನ್ನಣೆ ಮತ್ತು ಯಾವ ಯಾವ ಅರಸರ ಆಳ್ವಿಕೆಯಲ್ಲಿ ಶ್ರೀ ವೈಷ್ಣವ ಧರ್ಮ ಬೆಳೆದು ಬಂದಿತು ಎನ್ನುವುದನ್ನು ವಿವರಿಸಿದ್ದಾರೆ. ಅದರಲ್ಲಿ ವಿಜಯನಗರ ಅರಸರು ವೈಷ್ಣವ ಭಕ್ತಿಯನ್ನೇ ಹೇಳಲಾಗಿದೆ. ಇಲ್ಲಿ ಮೊದಲು ಹೈಂದವ ಸಂಸ್ಕೃತಿ ಇತ್ತು. ಅದು ತುರುಷ್ಕರ ದಾಳಿಗಳಿಂದ ಸುಮಾರು ೨೦೦ ವರ್ಷಗಳ ಕಾಲ ಸಂರಕ್ಷಿಸಿದ ವಿಜಯನಗರ ಸಾಮ್ರಾಜ್ಯದ ಪ್ರಭಾವಗಳು ಹೈಂದವ ಸಂಸ್ಕೃತಿಯ ಪರಿವೀಕ್ಷಕರಾಗಿ ಭಾರತದ ಇತಿಹಾಸದಲ್ಲಿ ಚಿರಸ್ಥಾನವನ್ನು

ಹೊಂದಿದರು. ಹಿಂದೂ ಸಂಸ್ಕೃತಿಯನ್ನು ರಕ್ಷಿಸಿದರು. ಮುಸ್ಲಿಂ ದಾಳಿಕೋರರಿಂದ ನಾಶವಾದ ಭಗ್ನಾವಶೇಷಗಳಾದ ಶ್ರೀ ವೈಷ್ಣವ ದೇವಾಲಯಗಳು, ಮಠಗಳು, ಸಾಂಸ್ಕೃತಿಕ ಕೇಂದ್ರಗಳು ಇವರ ಕಾಲದಲ್ಲಿ ಪುನರುಜ್ಜೀವನಗೊಂಡವು. ಹಿಂದೂ ಧರ್ಮದ ಸಂಸ್ಕೃತಿಯ ಪುನರುತ್ಥಾನವು ಶ್ರೀ ರಂಗನಾಥ ದೇವಾಲಯದಿಂದ ಪ್ರಾರಂಭವಾಯಿತೆಂದು ಎಂದು ಹೇಳುತ್ತಾ; ಇಲ್ಲಿ ಕ್ರಿ.ಶ. ೧೩೭೦ರಲ್ಲಿ ಶ್ರೀರಂಗದ ದೇವಾಲಯವನ್ನು ಮೊದಲಿನ ರೂಪಕ್ಕೆ ತಂದು ಮಲ್ಲಿಕಾಫರ್‌ನ ಕಾಲದಲ್ಲಿ ತಿರುಪತಿ–ತಿರುಮಲೆಗಳಲ್ಲಿದ್ದ ಶ್ರೀರಂಗನಾಥರ ವಿಗ್ರಹಗಳನ್ನು ತಂದು ಪುನಃ ಪ್ರತಿಷ್ಠಾಪಿಸಿ, ಆ ಕ್ಷೇತ್ರಕ್ಕೆ ಮೊದಲಿನ ಆದ್ಯತೆಗಳನ್ನು ಕೊಟ್ಟರು. ಹೀಗೆ ವೈಷ್ಣವ ಧರ್ಮಕ್ಕೆ ಪ್ರೋತ್ಸಾಹ ನೀಡಿದ ರಾಜರು ಅವರ ಕಾಲದಲ್ಲಿ ರಚನೆಯಾದ ಸ್ಥಳ ಮಹಾತ್ಮೆಗಳನ್ನು ಮತ್ತು ಸ್ಥಳ ಕ್ಷೇತ್ರಗಳ ಉದ್ಧಾರ, ದಾನ, ಧರ್ಮ ಮಾಡಿದ ಉಲ್ಲೇಖಗಳನ್ನು ಒಳಗೊಂಡಿದೆ.

ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಅವರ **'ಧರ್ಮ ಸಂರಕ್ಷಣೆ'** ಎಂಬ ಕೃತಿಯು ೧೯೩೧ರಲ್ಲಿ ಪ್ರಕಟವಾಗಿದೆ. ಈ ಕೃತಿಯ ೬ನೇ ಪರಿಚ್ಛೇದದಲ್ಲಿ ಕ್ಷೇತ್ರಗಳ ಕಥೆಗಳು, ಕ್ಷೇತ್ರಗಳ ಸಂಪ್ರದಾಯಗಳು ಮತ್ತು ಕ್ಷೇತ್ರ ಮಹಾತ್ಮೆಗಳು, ಧರ್ಮರಾಷ್ಟ್ರೀಯ ಉದ್ಯಮ ಎಂಬ ವಿಷಯ ಬಗ್ಗೆ ಚರ್ಚಿತವಾಗಿದೆ.

ಇದರಲ್ಲಿ ಮೊದಲನೆಯದಾಗಿ ಪುರಾಣಗಳು ದೇವರನ್ನು ಕುರಿತು ಕಥೆಗಳು ನಿರ್ಮಿಸಿದಂತೆ ನಮ್ಮ ಪುಣ್ಯಕ್ಷೇತ್ರಗಳ ಇತಿಹಾಸಗಳೂ ಅನೇಕ ನಂಬಿಕೆಗಳನ್ನು ನಿರ್ಮಿಸುತ್ತವೆ ಎನ್ನುವ ಮೂಲಕ ಪ್ರಮುಖ ಕ್ಷೇತ್ರಗಳಾದ ತಿರುಪತಿ, ಶ್ರೀರಂಗ ಕ್ಷೇತ್ರ ಮತ್ತು ಗೋಕರ್ಣ ಕ್ಷೇತ್ರಗಳನ್ನು ಹೇಳುವಾಗ "ಜಾಣರಾದ ಭಕ್ತರು ಹೇಗೆ ಕ್ಷೇತ್ರ ಕ್ಷೇತ್ರಕ್ಕೂ ಒಂದರಂತೆ ಕಟ್ಟಿದ ಕಥೆಗಳು ಕೇಳುವುದಕ್ಕೆ ಚೆನ್ನಾಗಿವೆ. ಆದ್ದರಿಂದ ಒಳ್ಳೇ ಸಾಹಿತ್ಯ ಹೌದು. ಇವನ್ನು ಹೀಗೆಂದು ನಂಬುದಕ್ಕೆ ಸರಿ, ದಿಟದಲ್ಲಿ ನಡೆದ ಸಂಗತಿಗಳ ಇತಿಹಾಸ ಎಂದು ತಿಳಿಯುವುದು ಸರಿಯಲ್ಲ"[೩] ಎನ್ನುತ್ತಾರೆ.

ಅದೇ ರೀತಿಯಾಗಿ ಕ್ಷೇತ್ರ ಸಂಪ್ರದಾಯವನ್ನು ಹೇಳುವಾಗ "ಒಂದೊಂದು ಕ್ಷೇತ್ರದಲ್ಲಿ ಸಂಪ್ರದಾಯ ಸೇವೆಯ ಒಂದು ಕ್ರಮವನ್ನು ರೂಪಿಸುತ್ತದೆ"[೪] ಇದು ಕ್ಷೇತ್ರದಲ್ಲಿ ಸರಿ ಅನಿಸಿದರೂ ವಸ್ತು ವಿಷಯ ಬೇರೆಯೇ ಇರುತ್ತದೆ. ಎಲ್ಲಾ ಒಂದೇ ಎಂದು ನಿರ್ಧರಿಸಲಾಗುವುದಿಲ್ಲ. ಅನಂತರ ಕ್ಷೇತ್ರಗಳ ಮಹಾತ್ಮೆಗಳನ್ನು ಚರ್ಚಿಸುತ್ತಾ, ಈ ಕ್ಷೇತ್ರ ಮಹಾತ್ಮೆಗಳು ನೀತಿ ಧರ್ಮವನ್ನು ಬೋಧಿಸುವಂತವುವಾಗಿದೆ. ಪ್ರತಿಯೊಂದು ಕ್ಷೇತ್ರದ

ಸುತ್ತ, ಅದರ ಹಿರಿಮೆ, ಘನತೆ, ಪವಾಡ, ಲೀಲೆಗಳು ಹುಟ್ಟಿಕೊಂಡು ಆ ಕ್ಷೇತ್ರಕ್ಕೆ ಒಂದು ಚಾರಿತ್ರಿಕ ಐತಿಹ್ಯಗಳಿಂದ ಪುರಾಣದ ಮೆರಗನ್ನು ತುಂಬುವ ಹಲವಾರು ಕಥೆಗಳನ್ನು ವಿವರಿಸಿದ್ದಾರೆ.

**ಲೇಖನಗಳು**

'ಸ್ಥಳ ಮಹಾತ್ಮ್ಯೆಗಳು' ಟಿ.ವಿ.ವೆಂಕಟಾಚಲ ಶಾಸ್ತ್ರಿಯವರೇ ರಚಿಸಿದ **'ಕನ್ನಡ ಅಭಿಜಾತ ಸಾಹಿತ್ಯ'** ಅಧ್ಯಯನದ ಅವಕಾಶಗಳು, ಆಹ್ವಾನಗಳು ಎಂಬ ಕೃತಿಯಲ್ಲಿ ೨೦೦೯ರಲ್ಲಿ ಪ್ರಕಟವಾಗಿದೆ. ಈ ಲೇಖನದಲ್ಲಿ ಸ್ಥಳ ಮಹಾತ್ಮ್ಯೆಗಳ ಬಗ್ಗೆ ಉಲ್ಲೇಖ ಮಾಡಲಾಗಿದೆ. ಅದೇನೆಂದರೆ

ಸ್ಥಳ ಮಹಾತ್ಮ್ಯೆಗಳನ್ನು ಅಧ್ಯಯನ ಮಾಡಲು ಇದೊಂದು ಆಕರ್ಷಕ ಕ್ಷೇತ್ರ ಎಂದು ಹೇಳುತ್ತಾರೆ. ಹಾಗೆ ಇದುವರೆಗೂ ಈ ಕ್ಷೇತ್ರ ಸಾಹಿತ್ಯದ ಬಗ್ಗೆ ಅಂತಹ ಕೆಲಸವೇನೂ ನೆಡೆದಿಲ್ಲ. ಆಯಾ ಸ್ಥಳಕ್ಕೆ ಸೇರಿದ ಇಲ್ಲವೇ ಸ್ಥಳದ ದೈವಕ್ಕೆ ಸಂಬಂಧಿಸಿರುತ್ತದೆ. ಇವು ೧೯ನೇ ಶತಮಾನದಿಂದ ಇಂತಹ ಕೃತಿಗಳ ರಚನೆಯಾಗಿರುವುದು ಗಮನಾರ್ಹ ಸಂಗತಿಯಾಗಿದೆ ಎಂದು ಹೇಳುತ್ತಾ, ಕೆಲವು ಪ್ರಮುಖ ಮಹಾತ್ಮ್ಯೆಗಳನ್ನು ಉಲ್ಲೇಖ ಮಾಡುತ್ತಾ, ಇವುಗಳಲ್ಲಿ ಸಮಾನ ಮತ್ತು ಸಂವಿಧಾನ ವರ್ಣನ ಕ್ರಮಗಳನ್ನು ಹಿಡಿದು ಕೃತಿಗಳನ್ನು ಒಗ್ಗೂಡಿಸಿಕೊಂಡು ಅಧ್ಯಯನ ಮಾಡಿದರೆ ವಿಶೇಷ ಸೌಲಭ್ಯವಿರುತ್ತದೆ. ಅದೇನೆಂದರೆ ಆಯಾ ಸ್ಥಳದ ಐತಿಹಾಸಿಕತೆಯನ್ನು ಮಹಾತ್ಮ್ಯೆಗಳು ಹೆಚ್ಚು ಸಾರ್ವಜನಿಕ ಆಸಕ್ತಿಗೆ ಅವಕಾಶ ಮಾಡುತ್ತವೆ; ಹಾಗೆ ಇಂತಹ ಸ್ಥಳಗಳು ಪ್ರವಾಸಿ ಕೇಂದ್ರಗಳಾಗಿ ಕೂಡಾ ಬೆಳೆಯುತ್ತವೆ ಎಂದು ಅಭಿವ್ಯಕ್ತಿಪಡಿಸಿದ್ದಾರೆ.

ಹಾಗೆ ಈ ಲೇಖನದಲ್ಲಿ ಅಪ್ರಕಟಿತವಾದವನ್ನು ಮೊದಲು ಪ್ರಕಟ ಮಾಡುವ ಕೆಲಸ ನಡೆಯಬೇಕು. ಅದರಲ್ಲಿ ಕಳಲೆ ನಂಜರಾಜ ಮತ್ತು ಮುಮ್ಮಡಿ ಕೃಷ್ಣರಾಜರ ಮಹಾತ್ಮ್ಯೆ ಕೃತಿಗಳನ್ನು ಕುರಿತು ಕೆಲಸ ಮಾಡಲು ಸಲಹೆ ಸೂಚನೆಯನ್ನು ನೀಡಿದ್ದಾರೆ.

**ಚಿಕ್ಕುಪಾಧ್ಯಾಯ ವಿರಚಿತ 'ಶ್ರೀರಂಗ ಮಹಾತ್ಮ್ಯಂ',** ಎಂ.ಪಿ.ಮಂಜಪ್ಪಶೆಟ್ಟಿ ಅವರ ಈ ಲೇಖನ ಪ್ರಾಚೀನ ಕಾವ್ಯ ಪರಾಮರ್ಶೆ ಎಂಬ ಕೃತಿಯಲ್ಲಿ ೨೦೧೫ರಲ್ಲಿ ಪ್ರಕಟವಾಗಿದೆ. ಇದರಲ್ಲಿ ಶ್ರೀರಂಗ ಮಹಾತ್ಮ್ಯೆ ಕರ್ತೃವಾದ ಚಿಕ್ಕುಪಾಧ್ಯಾಯನ ವಿಚಾರ ಮತ್ತು ಕಾವ್ಯದ ವಿಚಾರವನ್ನು ಚರ್ಚಿಸಲಾಗಿದೆ. ಇದು ಕೃತಿಯಲ್ಲೇ ಸಿಗುತ್ತದೆ. ಮತ್ತು ಚಿಕ್ಕುಪಾಧ್ಯಾಯ ರಚಿಸಿದ ಎಲ್ಲಾ ಕೃತಿಗಳ ಮಾಹಿತಿಯನ್ನು ನೀಡಿದ್ದಾರೆ. ಹಾಗೆ 'ಶ್ರೀರಂಗ ಮಹಾತ್ಮ್ಯಂ'

ಕೃತಿಯು ಯಾವ ಭಾಷೆಯಲ್ಲಿ ರಚನೆಯಾಗಿದೆ, ಎಷ್ಟು ಪರಿಚ್ಛೇದಗಳಿವೆ, ಮತ್ತೆ ಈ ಕೃತಿಗೆ ಬ್ರಹ್ಮಾಂಡ ಪುರಾಣ ಆಕರವೆಂದು ತಿಳಿಸಿದ್ದಾರೆ. ಅನಂತರ ಕೃತಿಯ ಕಥಾವಸ್ತು ಶ್ರೀರಂಗನಾಸ್ತುತಿಯಿಂದ ಪ್ರಾರಂಭವಾಗಿ ಅನಂತರ ವರದರಾಜು, ಲಕ್ಷ್ಮೀ, ಹನ್ನೆರಡು ಮಂದಿ ಆಳ್ವಾರರು, ಭಾಷ್ಯಾಕಾರ ಇವರನ್ನು ಸ್ತುತಿಸಿ ಚಿಕ್ಕದೇವರಾಜನ ವಂಶಾವಳಿಯನ್ನು ಹೇಳಿದ್ದಾರೆ.

**'ತಿಮ್ಮಕವಿಯ ಕೃತಿಗಳು'** ಎಂ.ಪಿ.ಮಂಜಪ್ಪಶೆಟ್ಟಿ ಅವರ ಈ ಲೇಖನ ಪ್ರಾಚೀನ ಕಾವ್ಯ ಪರಾಮರ್ಶೆ ಎಂಬ ಕೃತಿಯಲ್ಲಿ ೨೦೧೫ರಲ್ಲಿ ಪ್ರಕಟವಾಗಿದೆ. ಪ್ರಸ್ತುತ ಈ ಲೇಖನದಲ್ಲಿ ಮೈಸೂರು ರಾಜ್ಯದ ಪ್ರಖ್ಯಾತ ರಾಜರಲ್ಲಿ ಒಬ್ಬರಾದ ಶ್ರೀ ಚಿಕ್ಕದೇವರಾಜ ಒಡೆಯರ ಪ್ರಮುಖ ಆಶ್ರಿತ ಕವಿಗಳಲ್ಲಿ ಕವಿ ತಿಮ್ಮ ಒಬ್ಬನಾಗಿದ್ದಾನೆ. ಇವನು ಹಲವಾರು ಕೃತಿಗಳನ್ನು ಬರೆದಿದ್ದಾನೆ. ಅದರಲ್ಲಿ ಮೂರು ಮಹಾತ್ಮೆ ಕೃತಿಗಳು ಈ ಅಧ್ಯಯನಕ್ಕೆ ಪೂರಕವಾದವುಗಳಾಗಿವೆ. ಅವುಗಳನ್ನು ಡಾ.ಎಂ.ಪಿ. ಮಂಜಪ್ಪ ಶೆಟ್ಟಿಯವರು ಸಂಪಾದಿಸಿದ್ದಾರೆ. ಅವುಗಳೆಂದರೆ ಯಾದವಗಿರಿ ಮಹಾತ್ಮೆ, ವೆಂಕಟಗಿರಿ ಮಹಾತ್ಮೆ, ಪಶ್ಚಿಮರಂಗ ಮಹಾತ್ಮೆ ಕವಿ ಹೇಳಿರುವ ಮೂರು ಕೃತಿಗಳಲ್ಲಿ ತಿಮ್ಮಕವಿಯ ಮೂಲ ಇತಿವೃತ್ತಿ ಮತ್ತು ವಂಶಾವಳಿಯು ಕವಿ ಕಾಲದ ವಿಚಾರವನ್ನು ಚರ್ಚಿಸಲಾಗಿದೆ. ನಂತರ ಇವುಗಳ ಚಾರಿತ್ರಿಕ ಅಂಶಗಳನ್ನು ಮತ್ತು ಭೌಗೋಳಿಕ ಅಂಶಗಳನ್ನು ಸಂಪಾದಕರು ಈ ಲೇಖನದಲ್ಲಿ ಸಂಪೂರ್ಣವಾದ ಮಾಹಿತಿಯನ್ನು ಕೊಟ್ಟಿದ್ದಾರೆ. ಅನಂತರ ಒಂದೇ ಕ್ಷೇತ್ರದ ಬಗ್ಗೆ ಹುಟ್ಟಿಕೊಂಡಿರುವ ಹಲವಾರು ಕೃತಿಗಳ ಮಾಹಿತಿ ನೀಡುತ್ತಾ ಕಾವ್ಯದ ಬಗ್ಗೆ ವಿಮರ್ಶಾತ್ಮಕವಾಗಿ ಚರ್ಚಿಸಿದ್ದಾರೆ.

**'ಚೆಲುವಾಂಬೆಯ ಕೃತಿಗಳು'** ಎಂ.ಪಿ.ಮಂಜಪ್ಪಶೆಟ್ಟಿ ಅವರ ಈ ಲೇಖನ ಪ್ರಾಚೀನ ಕಾವ್ಯ ಪರಾಮರ್ಶೆ ಎಂಬ ಕೃತಿಯಲ್ಲಿ ೨೦೧೫ರಲ್ಲಿ ಪ್ರಕಟವಾಗಿದೆ. ಈ ಲೇಖನವು ಮೈಸೂರು ಒಡೆಯರ ಆಸ್ಥಾನಕ್ಕೆ ಸೇರಿದ ಚೆಲುವಾಂಬೆಯ ಎರಡು ಮಹಾತ್ಮೆ ಕೃತಿಗಳನ್ನು ರಚಿಸಿದ್ದಾರೆ. 'ವೆಂಕಟಾಚಲ ಮಹಾತ್ಮೆ ಲಾಲಿಪದ' ಇದು ಮಾತ್ರಾಗಣ ಚೌಪದಿಯಲ್ಲಿ ರಚಿತವಾಗಿದೆ. ಇದರಲ್ಲಿ ಒಟ್ಟು ೨೦೩ ಲಾಲಿಪದಗಳಿದ್ದು, ವೆಂಕಟಗಿರಿ ಮತ್ತು ವೆಂಕಟೇಶನ ಮಹಿಮೆ ಇವುಗಳನ್ನು ವರ್ಣಿಸುವ ಕೃತಿಯಾಗಿದೆ. ಇದೊಂದು ಮಹಾತ್ಮೆ ಕಾವ್ಯಗಳಲ್ಲೇ ಹೊಸ ಬಗೆಯ ಕಾವ್ಯ ಎನ್ನಬಹುದು. ಕೃತಿಯ ಪ್ರಾರಂಭದಿಂದ ಹಿಡಿದು ಕೃತಿಯ ಕೊನೆಯವರೆಗೆ 'ಜೋ ಜೋ' ಎಂದು ಆರಂಭವಾಗುವ ಪಲ್ಲವಿ ಇದೆ. ಅನಂತರ ಪದ್ಯದ ಕೊನೆಯ ಭಾಗದಲ್ಲಿ 'ಲಾಲಿ ಲಾಲಿ' ಎಂಬ ಪಲ್ಲವಿ ಬರುತ್ತದೆ. ಇದೊಂದು ರೀತಿಯ ನೀಳ್ಗವಿತೆ ಎಂದು ಸಂಪಾದಕರು ಗುರುತಿಸಿದ್ದಾರೆ.

ಇವಳ ಇನ್ನೊಂದು ಕೃತಿ **'ತುಲಾಕಾವೇರಿ ಮಹಾತ್ಮ್ಯೆ'** ಇದೊಂದು ಗದ್ಯ ಗ್ರಂಥ. ಆಗ್ನೇಯ ಪುರಾಣದಲ್ಲಿ ಉಕ್ತವಾಗಿರುವ ತುಲಾಕಾವೇರಿ ಮಹಾತ್ಮ್ಯೆಗೆ ಬರೆದ ಕನ್ನಡ ವ್ಯಾಖ್ಯಾನ. ಇದಕ್ಕೆ 'ಚೆಲುವಾಂಬಿಕಾ ವಾಣೀವಿಲಾಸ' ಎಂಬ ಇನ್ನೊಂದು ಹೆಸರಿನಿಂದಲೂ ಕರೆಯುತ್ತಾರೆ. ಇದರಲ್ಲಿ ೩೦ ಅಧ್ಯಾಯಗಳಿವೆ. ಕೃತಿಯ ಹೆಸರೇ ಸೂಚಿಸುವಂತೆ ಕಾವೇರಿಯ ಮಹತ್ವವನ್ನು ಸಾರುವಂತದ್ದಾಗಿದೆ. ಆದರೆ ಕೃತಿಯು ಚೆಲುವಾಂಬೆಯ ರಚನೆಯಲ್ಲ ಇದನ್ನು ರಚಿಸಿದವರು ಮಾದ್ಗಲಗೋತ್ರದ ವೆಂಕಟಾರ್ಯನ ಮಗ ಶ್ರೀನಿವಾಸ ಎಂದು ವಿದ್ವಾಂಸರ ಅಭಿಪ್ರಾಯಗಳನ್ನು ಗುರುತಿಸಿ ಕಾವ್ಯಸಾರದ ಬಗ್ಗೆ ಚರ್ಚಿಸಲಾಗಿದೆ.

ಕವಿರಂಗ ವಿರಚಿತ **'ಕಾವೇರಿ ಮಹಾತ್ಮ್ಯೆ'** ಎಂಬ ಲೇಖನವು ಎಂ.ಪಿ.ಮಂಜಪ್ಪಶೆಟ್ಟಿ ಅವರ ಈ ಲೇಖನ ಪ್ರಾಚೀನ ಕಾವ್ಯ ಪರಾಮರ್ಶೆ ಎಂಬ ಕೃತಿಯಲ್ಲಿ ೨೦೧೫ರಲ್ಲಿ ಪ್ರಕಟವಾಗಿದೆ. ಈ ಲೇಖನದಲ್ಲಿ ದಕ್ಷಿಣ ಭಾರತದ ಪ್ರಮುಖ ನದಿಗಳಲ್ಲಿ ಕಾವೇರಿ ಕರ್ನಾಟಕದ ಪ್ರಮುಖ ನದಿ. ಇದರಲ್ಲಿ ಕವಿ ಕಾವೇರಿಯ ಉಗಮ ಸ್ಥಾನವಾದ ತಲಕಾವೇರಿ, ಕಾವೇರಿಯ ಮಹಿಮೆ, ಅದರ ಭೌಗೋಳಿಕ ಹಿನ್ನೆಲೆ, ಅದು ಹರಿದೆಡೆಗಳಲ್ಲಿ ಸೃಷ್ಟಿಯಾಗಿರುವ ತೀರ್ಥಕ್ಷೇತ್ರಗಳ ಮಹಿಮೆ, ಸ್ಥಳ ಪುರಾಣಗಳನ್ನು ಸಾಂಪ್ರದಾಯಿಕವಾಗಿಯೇ ಚಿತ್ರಿಸಲಾಗಿದೆ. ಈ ಕೃತಿಗೆ ಸಂಸ್ಕೃತವೇ ಮೂಲ ಮತ್ತು ಪ್ರೇರಕ. ಕವಿರಂಗನು 'ಕಾವೇರಿ ಮಹಾತ್ಮ್ಯೆಯನ್ನು' ಸಂಸ್ಕೃತದ ಸ್ಕಂದ ಪುರಾಣದಿಂದ ಆರಿಸಿಕೊಂಡು, ಕನ್ನಡಕ್ಕೆ ಭಾಷಾಂತರಿಸಿದ್ದಾನೆ.

ಕವಿರಂಗನಿಗೆ ತನ್ನ ಈ ಕಾವ್ಯವನ್ನು ಒಂದು ಮಹಾಕಾವ್ಯವನ್ನಾಗಿ ಮಾಡಬೇಕೆಂದು ಉದ್ದೇಶವಿದ್ದಿರಬಹುದು. ಹಾಗಾಗಿಯೇ ಅವನು ಒಂದೆಡೆ ತನ್ನ ಕಾವ್ಯವನ್ನು ಪ್ರಬಂಧವೆಂದು ಗುರುತಿಸುತ್ತಾನೆ ಎಂದು ಹೇಳುತ್ತಾ ಈ ಕಾವ್ಯದಲ್ಲಿ ಅಷ್ಟಾದಶ ವರ್ಣನೆಗಳಾದ ಸಮುದ್ರ, ಮೇರು, ಪರ್ವತ, ಮೃಗಾಲಯ ವಿಹಾರ, ಸೂಳೆಗೇರಿ ಮುಂತಾದ ವರ್ಣನೆಗಳು ಇಲ್ಲಿ ಪ್ರಾಸಂಗಿಕವಾಗಿ ಬಂದಿರುವುದನ್ನು ಗುರುತಿಸಲಾಗಿದೆ.

**'ಕನ್ನಡ ಗ್ರಂಥಸಂಪಾದನೆಗೆ ಡಾ.ಎಂ.ಪಿ. ಮಂಜಪ್ಪಶೆಟ್ಟರ ಕೊಡುಗೆ'** ಎಂಬ ಲೇಖನವನ್ನು ಎಸ್.ಕೆ. ರಾಮಶೇಷನ್, ಮೈಸೂರು ಇವರು 'ಮಸಗಲಿ' ಎಂಬ ಮಂಜಪ್ಪಶೆಟ್ಟಿ ಮಸಗಲಿ ಅವರ ಅಭಿನಂದನಾ ಗ್ರಂಥದಲ್ಲಿ ೨೦೦೯ರಲ್ಲಿ ಪ್ರಕಟವಾಗಿದೆ. ಇದರಲ್ಲಿ ಮಂಜಪ್ಪ ಶೆಟ್ಟಿಯವರು ಸಂಪಾದಿಸಿರುವ ಪಟ್ಟಿಗಳನ್ನು ಕೊಡುತ್ತಾ, ಆ ಎಲ್ಲಾ ಕೃತಿಗಳ ಮಾಹಿತಿಯನ್ನು ವಿಶ್ಲೇಷಿಸಿ ಅದರಲ್ಲಿ ಬರುವ ಯಾದವಗಿರಿ ಮಹಾತ್ಮ್ಯೆ, ವೆಂಕಟಗಿರಿ ಮಹಾತ್ಮ್ಯೆ, ಪಶ್ಚಿಮರಂಗ ಕ್ಷೇತ್ರ ಮಹಾತ್ಮ್ಯೆ, ಚಿಕ್ಕದೇವರಾಜ ವಂಶಾವಳಿ, ಶ್ರೀರಂಗ ಮಹಾತ್ಮ್ಯೆ, ಚೆಲುವಾಂಬೆಯ ಕೃತಿಗಳನ್ನು ಉಲ್ಲೇಖಿಸಿದ್ದಾರೆ. ಇವು ಕನ್ನಡದ ಮಹಾತ್ಮ್ಯೆಗಳಲ್ಲಿ ಪ್ರಮುಖವಾದವು. ಈ

ಕಾವ್ಯಗಳು ಯಾವ ಕಾಲಘಟ್ಟದಲ್ಲಿ ರಚನೆಯಾಗಿವೆ, ಮತ್ತು ಎಷ್ಟು ಆಶ್ವಾಸಗಳನ್ನು ಹೊಂದಿವೆ ಎಂದು ಹೇಳುತ್ತ ಕಾವ್ಯ ಪ್ರಕಾರವನ್ನು ಗುರುತಿಸಲಾಗಿದೆ. ಆನಂತರ ಗ್ರಂಥ ಸಂಪಾದನೆಯನ್ನು ಯಾವ ರೀತಿ ಮಾಡಲಾಗಿದೆ ಎಂಬ ವಿಷಯವನ್ನು ಚರ್ಚಿಸಲಾಗಿದೆ.

**'ಕಾವೇರಿ ಮಹಾತ್ಮೆ'** ಎಂಬ ಈ ಲೇಖನವು ಡಾ. ಮೈಲಹಳ್ಳಿರೇಮಾ, ಮೈಸೂರು ಇವರದ್ದಾಗಿದೆ. ಇದು 'ಮಸಗಲಿ' ಎಂಬ ಮಂಜಪ್ಪಶೆಟ್ಟಿ ಮಸಗಲಿ ಅವರ ಅಭಿನಂದನಾ ಗ್ರಂಥದಲ್ಲಿ ೨೦೦೯ರಲ್ಲಿ ಪ್ರಕಟವಾಗಿದೆ. ಇವರ ಈ ಲೇಖನದಲ್ಲಿ "ಮಹಾತ್ಮ್ಯೆ ಎಂದರೆ ವ್ಯಕ್ತಿ, ವಸ್ತು ಅಥವಾ ಸ್ಥಳದ ಮಹಿಮೆಯನ್ನು ವರ್ಣಿಸುವುದೇ ಮಹಾತ್ಮ್ಯೆ ಅಥವಾ ಮಹಾತ್ಮ್ಯೆ ಗ್ರಂಥಗಳು"[೫] ಇವು ಸಂಸ್ಕೃತ ಮತ್ತು ಕನ್ನಡದಲ್ಲಿ ವಿಪುಲವಾಗಿ ಬೆಳೆದುಬಂದಿವೆ. ಅದರಲ್ಲೂ ನಡುಗನ್ನಡ ಕಾಲದಲ್ಲಿ ಈ ಸಾಹಿತ್ಯದ ರಚನೆಯನ್ನು ಅತಿ ಹೆಚ್ಚಾಗಿ ಕಾಣುತ್ತೇವೆ. ಇವುಗಳ ಪಾಲಿಗೆ ಕವಿ ರಂಗನ ಕಾವೇರಿ ಮಹಾತ್ಮ್ಯೆಯು ಸೇರುತ್ತದೆ ಎಂದು ಗುರುತಿಸಿದ್ದಾರೆ.

ಅನಂತರ ಕವಿಯ ಕಾಲ, ವಿಚಾರ, ಕಾವ್ಯದ ಪ್ರಕಾರ ಮತ್ತು ಈ ಕೃತಿಗೆ ಆಕರವಾದುದು ಸಂಸ್ಕೃತದ ಸ್ಕಂದ ಪುರಾಣ ಕವಿ ಇದನ್ನು ಕನ್ನಡಕ್ಕೆ ನೇರವಾಗಿ ಕನ್ನಡಿಸಿರುವುದಾಗಿ ಹೇಳಿದ್ದಾನೆ.

**'ಶಾಸ್ತ್ರೀಯ ಸಂಪಾದನೆ'** ಎಂಬ ಲೇಖನವು ಡಾ.ರಾ.ಗೌ. ಮೈಸೂರು ಇವರದು. ಇದು 'ಮಸಗಲಿ' ಎಂಬ ಮಂಜಪ್ಪಶೆಟ್ಟಿ ಮಸಗಲಿ ಅವರ ಅಭಿನಂದನಾ ಗ್ರಂಥದಲ್ಲಿ ೨೦೦೯ರಲ್ಲಿ ಪ್ರಕಟವಾಗಿದೆ. ಈ ಲೇಖನದಲ್ಲಿ ಒಡೆಯರ ಕಾಲದ ಸಾಹಿತ್ಯವನ್ನು ಹೇಳುವಾಗ ಡಾ.ರಾ.ಗೌ ಅವರು "ಕನ್ನಡ ಸಾಹಿತ್ಯದಲ್ಲಿ ಒಡೆಯರ ಕಾಲದ ಸಾಹಿತ್ಯದ್ದೇ ಒಂದು ಪ್ರತ್ಯೇಕ ಇತಿಹಾಸ. ಚಾರಿತ್ರಿಕ ಮತ್ತು ಮಹಾತ್ಮ್ಯೆ ಗ್ರಂಥಗಳ ಹೆಚ್ಚಳವೇ ಇಂತಹ ವೈಶಿಷ್ಟ್ಯಕ್ಕೆ ಕಾರಣ."[೬] ಮೈಸೂರ ಅರಸರ ಪ್ರೋತ್ಸಾಹದಿಂದಾಗಿ ಮಹಾತ್ಮ್ಯೆ ಗ್ರಂಥಗಳ ರಚನೆಯ ಮನ್ವಂತರವೇ ಆರಂಭವಾಯಿತು ಎಂದು ಮತ್ತು ಮಹಾತ್ಮ್ಯೆ ಗ್ರಂಥಗಳು ನಿರಂತರವಾಗಿ ರಚನೆಯಾದವು. ಇವು ಗಾತ್ರ ಮತ್ತು ಪಾತ್ರಗಳೆರಡರಲ್ಲೂ ಸಮೃದ್ಧ ಸಾಹಿತ್ಯವಾಗಿ ನಿರ್ಮಾಣವಾಯಿತು. ಇಂತಹ ಸಮೃದ್ಧಿಗೆ ಸಂಸ್ಕೃತದ ಸ್ಕಂದಪುರಾಣ ಮತ್ತು ಆಗ್ನೇಯ ಪುರಾಣಗಳಲ್ಲಿ ವೈವಿಧ್ಯಪೂರ್ಣ ವಸ್ತು ದೊರೆತದ್ದು ಒಂದು ಕಾರಣವಿರಬೇಕೆಂದು ಹೇಳಿದ್ದಾರೆ.

ಆನಂತರ ಕಾವೇರಿ ಮಹಾತ್ಮ್ಯೆಯ ವಿಷಯವನ್ನು ಚರ್ಚಿಸುವಾಗ "ಕಾವೇರಿಯ ಕಥೆಗಿರುವ ಪೌರಾಣಿಕ ಮತ್ತು ಭೌಗೋಳಿಕ ಹಿನ್ನೆಲೆಯೇ ಇದರ ವಸ್ತು. ಇತಿಹಾಸ, ಐತಿಹ್ಯ ಮತ್ತು ಪುರಾಣ ಕಥೆಗಳ ಸಂಗಮ 'ಕಾವೇರಿ ಮಹಾತ್ಮ್ಯೆ'ಯಾಗಿದೆ. ಹಲವಾರು ಕಥೆಗಳನ್ನು ಜೋಡಿಸುವುದರ ಮೂಲಕ ಕಾವ್ಯ ಸ್ವಾರಸ್ಯವಾಗಿದೆ ಎಂದಿದ್ದಾರೆ. ಅಲ್ಲದೆ

ಇಂತಹ ಕೃತಿಗಳು 'ಸಾಮಾಜಿಕ ಅಧ್ಯಯನಕ್ಕೂ ಆ ಮೂಲಕ ಸಾಂಸ್ಕೃತಿಕ ಇತಿಹಾಸದ ರಚನೆಗೂ ಕೃತಿ ನೆರವು ನೀಡುವುದರ ಮೂಲಕ, ಕವಿಯ ಕಾಲಮಾನದ ಜನರ ಸ್ಥಿತಿಗಳನ್ನೂ ತಿಳಿಯಲು ಅವಶ್ಯವಾಗಿದೆ ಎನ್ನುವುದು ಇಲ್ಲಿ ಸತ್ಯವೆಂದು ತೋರುತ್ತದೆ. ಕಾವೇರಿ ಮಹಾತ್ಮೆಯು ಏಕಮಾತ್ರ ಹಸ್ತಪ್ರತಿಯಿಂದ ಸಂಪಾದಿಸಲಾಗಿದೆ ಎಂದು ಗ್ರಂಥ ಸಂಪಾದನೆ ಬಗ್ಗೆ ಚರ್ಚಿಸಲಾಗಿದೆ.

**'ಯಾದವಗಿರಿ ಮಹಾತ್ಮ್ಯಂ'** ಎಂಬ ಈ ಲೇಖನವು ಎಸ್ ವಿದ್ಯಾಶಂಕರ್, ಬೆಂಗಳೂರು ಇವರದ್ದು. ಇದು 'ಮಸಗಲಿ' ಎಂಬ ಮಂಜಪ್ಪಶೆಟ್ಟಿ ಮಸಗಲಿ ಅವರ ಅಭಿನಂದನಾ ಗ್ರಂಥದಲ್ಲಿ ೨೦೦೯ರಲ್ಲಿ ಪ್ರಕಟವಾಗಿದೆ. ಈ ಲೇಖನದಲ್ಲಿ ಚಿಕ್ಕದೇವರಾಜನ ಅಪ್ಪಣೆಯಂತೆ ಅವನ ಮಂತ್ರಿ ಚಿಕ್ಕುಪಾಧ್ಯಾಯನ ಪ್ರೇರಣೆಯಿಂದ ಈ ಕಾವ್ಯವನ್ನು ರಚಿಸಿದನೆಂದು ಈ ಕಾವ್ಯಕ್ಕೆ ನಾರದೀಯ ಪುರಾಣದ ಜ್ಞಾನಖಂಡವು ನೆರವು ನೀಡಿದೆ. ಈ ಕೃತಿಯ ಉದ್ದೇಶ ಮೇಲುಕೋಟೆಯ ಚೆಲುವ ನಾರಾಯಣನ ಮಹಿಮೆಯನ್ನು ವರ್ಣಿಸುವುದೇ ಕೃತಿಯ ಪ್ರಧಾನ ಉದ್ದೇಶವಾಗಿದೆ. 'ಮೊದಲು ಕೃತಿಗೆ ಹೊರತಾದ ವರ್ಣನೆಗಳನ್ನು ನಾಲ್ಕು ಆಶ್ವಾಸಗಳಲ್ಲಿ ತಂದಿರುವನು. ಆಶ್ರಯದಾತನನ್ನು ಮೆಚ್ಚಿಸಲೆಂದು ಸಂಪ್ರದಾಯದ ವರ್ಣನಾ ಪ್ರತಿಭೆಯನ್ನು ಕಥೆಗೆ ಹೊರತಾಗಿ ಪ್ರಾರಂಭದ ಭಾಗಗಳು ಬಂದಂತಿವೆ. ಅವೆಂದರೆ ಮೂರನೇ ಆಶ್ವಾಸದ ಪ್ರಾರಂಭದಲ್ಲಿ ಬರುವ ಕಾವ್ಯವಾರು ಗದ್ಯವು ಈ ಮಾತನ್ನು ಪುಷ್ಟೀಕರಿಸುತ್ತಿದೆ ಎಂದು ಹೇಳುವುದರ ಮೂಲಕ ರಾತ್ರಿ ವಿಹಾರದ ವರ್ಣನೆ ಬಂದಿದ್ದು. ಇಲ್ಲಿ ಸಂಪ್ರದಾಯಾನುಸಾರಿಯಾದ ವೇಶ್ಯವಾಟಿಕೆಯ ಚಿತ್ರಗಳೇ ಮೂಡಿವೆ. ಕವಿ ತನ್ನ ಕಾವ್ಯ ಪ್ರೌಢಿಮೆಯನ್ನು ತೋರಿಸಲು ಶೃಂಗಾರ ಸನ್ನಿವೇಶಗಳನ್ನು ಮನೋರಮಾವಾಗಿ ವರ್ಣಿಸುವಲ್ಲಿ ಸಂಸ್ಕೃತ ವಲಯದ ವೃತ್ತಗಳು ಮತ್ತು ಸಂಸ್ಕೃತಾಭಿಮಾನವೇ ಎದ್ದು ಕಾಣುತ್ತಿದೆ ಎನ್ನುವ ಮಾತನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಆದ್ದರಿಂದಲೇ ಕವಿಯು ಕಾವ್ಯದ ಪ್ರಾರಂಭದಲ್ಲಿ ಕಾಳಿದಾಸ, ವಾಲ್ಮೀಕಿ, ವ್ಯಾಸ, ಬಾಣ ಇವರನ್ನು ನೆನೆಯುವನೇ ಹೊರತು ಕನ್ನಡದ ಕವಿಗಳನ್ನು ಮರೆತು ಸ್ಮರಿಸುವುದಿಲ್ಲವೆಂಬುದು ಇಲ್ಲಿ ವಿಪರ್ಯಾಸವಾಗಿದೆ. ಇವನ ಕಾವ್ಯ ಪ್ರಾಪ್ತವಾದ ಶೈಲಿ, ಸಂಸ್ಕೃತ ಪದ್ಯಗಳ ಬಲವಾದ ವ್ಯಾಮೋಹವನ್ನು ನಿವಾರಿಸಿಕೊಳ್ಳಲು ಇಲ್ಲವೆ; ಅದನ್ನು ಒಂದು ಹದಕ್ಕೆ ಒಳಪಡಿಸಲು ಇವನಿಂದ ಸಾಧ್ಯವೇ ಆಗಿಲ್ಲ ಎಂದು ಹೇಳುತ್ತ, ಗ್ರಂಥಸಂಪಾದನೆಯ ಬಗ್ಗೆ ಹೇಳುತ್ತಾರೆ.

**'ನಾಲ್ಕು ಮಹಾತ್ಮೆಗಳು ಮತ್ತು ಒಂದು ವಂಶಾವಳಿ'** ಎಂಬ ಲೇಖನವು ಎಂ.ವಿ.ವರದರಾಜನ್ ಅವರದು. 'ಮಸಗಲಿ' ಎಂಬ ಮಂಜಪ್ಪಶೆಟ್ಟಿ ಮಸಗಲಿ ಅವರ

ಅಭಿನಂದನಾ ಗ್ರಂಥದಲ್ಲಿ ೨೦೦೯ರಲ್ಲಿ ಪ್ರಕಟವಾಗಿದೆ. ಈ ಲೇಖನದಲ್ಲಿ ಯಾದವಗಿರಿ ಮಹಾತ್ಮೆಯು ಕರ್ನಾಟಕ ರಾಜ್ಯ, ಮಂಡ್ಯ ಜಿಲ್ಲೆ, ಪಾಂಡವಪುರ ತಾಲ್ಲೂಕಿನಲ್ಲಿರುವ ಮೇಲುಕೋಟೆ ಚೆಲುವರಾಯನ ಸಮಗ್ರ ವೃತ್ತಾಂತವನ್ನು ಒಳಗೊಂಡಿರುತ್ತದೆ. ಹಾಗೆ ಸುಮಾರು ಸಾವಿರ ವರ್ಷಗಳಷ್ಟು ಮೇಲಾದ ಹಿರಿದಾದ ಪ್ರಾಚೀನತೆಯನ್ನು ಮೇಲುಕೋಟೆ ಪಡೆದಿರುತ್ತದೆ.

ಹೀಗಾಗಿ ಈ ಪವಿತ್ರ ಸ್ಥಳದ ಬಗ್ಗೆ ಪುರಾಣ, ಇತಿಹಾಸ, ಸ್ಥಳ ಮಹಿಮೆ ಹುಟ್ಟಿಕೊಳ್ಳುವುದು ಸಹಜವೇ ಆಗಿರುತ್ತದೆ ಎಂದು ಹೇಳುತ್ತಾ ಈ ಮಹಾತ್ಮೆಗಳಲ್ಲಿ ಭಕ್ತಿಯ ಪರವಶತೆಯಿಂದ ಕೂಡಿದ ಕವಿತಾ ಮನೋಧರ್ಮವನ್ನು ಹೆಚ್ಚಳವಾಗಿ ಕಾಣಬಹುದು ಎಂದು ಗುರುತಿಸಿದ್ದಾರೆ. ನಂತರ ಶ್ರೀರಂಗ ಮಹಾತ್ಮೆ, ವೆಂಕಟಗಿರಿಯ ಮಹಾತ್ಮೆ, ಪಶ್ಚಿಮರಂಗ ಮಹಾತ್ಮೆಗಳನ್ನು ಮಂಜಪ್ಪ ಶೆಟ್ಟಿ ಅವರು ಸಂಪಾದಿಸಿರುವ ಕ್ರಮವನ್ನು ಕುರಿತು ಚರ್ಚಿಸಿದ್ದಾರೆ.

ವಿದ್ಯಾಶಂಕರ್ ಎಸ್, **'ವೀರಶೈವ ಪುರಾಣಗಳು ಒಂದು ಅಧ್ಯಯನ'**, ಎಂಬ ಕೃತಿಯು ೨೦೦೬ರಲ್ಲಿ ಮುದ್ರಣಗೊಂಡಿದೆ. ಈ ಕೃತಿಯಲ್ಲಿ 'ವೈದ್ಧಿಕ ಪುರಾಣ', 'ಜೈನ ಪುರಾಣ', 'ಶೈವ ಪುರಾಣ' ಮತ್ತು 'ಪೆರಿಯ ಪುರಾಣಗಳ ಸಮಗ್ರ ಅಧ್ಯಯನ'ವನ್ನು ಕೈಗೊಂಡಿದ್ದಾರೆ. ಈ ಪುರಾಣಗಳ ಹಿನ್ನೆಲೆ, ಅವು ಬೆಳೆದುಬಂದ ಬಗೆ ಮುಂತಾದ ಅಂಶಗಳನ್ನು ಚರ್ಚಿಸುವುದರ ಜೊತೆಗೆ ಪುರಾಣ ಕಾವ್ಯಗಳ ವರ್ಣನೆಗಳು, ಅಲಂಕಾರ, ಛಂದಸ್ಸು, ಕಥನ ಕಲೆ, ಅವತಾರ ಕಲ್ಪನೆಗಳು, ತತ್ವಧರ್ಮ, ನೀತಿ ಹಾಗೆ ಕಾವ್ಯ ಸೌಂದರ್ಯ ಮುಂತಾದ ಅಂಶಗಳ ಕುರಿತು ವಿವರಣಾತ್ಮಕವಾಗಿ ಚರ್ಚಿಸಿದ್ದಾರೆ. ಇದೇ ಹಿನ್ನೆಲೆಯಲ್ಲಿ ರಚನೆಯಾಗಿರುವ ಮಹಾತ್ಮೆಗಳು ಶೈವ-ವೈಷ್ಣವ ಪುರಾಣಗಳ ವಸ್ತುಗಳನ್ನುಳ್ಳ ಕೃತಿಗಳಾಗಿವೆ. ಕಥನ ಕಲೆ, ಅವತಾರ ಕಲ್ಪನೆಗಳು, ತತ್ವಧರ್ಮ, ನೀತಿ ಕಾವ್ಯ ಸೌಂದರ್ಯದ ಮುಂತಾದ ಅಂಶಗಳು ಪುರಾಣದ ಜಾಡಿನಲ್ಲೇ ಮಹಾತ್ಮೆಗಳು ಕೂಡಾ ರಚನೆಯಾಗಿವೆ. ಆದ್ದರಿಂದ ಈ ಕೃತಿಯನ್ನು ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ.

ಪೂಜಾರ ವ್ಹಿ.ಜಿ., **'ವೀರಶೈವ ಸಾಹಿತ್ಯದಲ್ಲಿ ಪವಾಡಗಳು'**, ಎಂಬ ಕೃತಿಯು ೧೯೯೧ರಲ್ಲಿ ಮೊದಲ ಮುದ್ರಣಗೊಂಡಿದೆ. ೨೦೧೧ರಲ್ಲಿ ಮತ್ತೊಂದು ಮುದ್ರಣ ಕಂಡಿದೆ. ಈ ಕೃತಿಯಲ್ಲಿ ವೀರಶೈವ ಧರ್ಮದ ಹಿನ್ನೆಲೆಯಲ್ಲಿ ರಚನೆಯಾದ ಪವಾಡಗಳ ಅರ್ಥ, ಸ್ವರೂಪ ಮತ್ತು ಪವಾಡಗಳನ್ನು ಯೋಗಾಶಾಸ್ತ್ರಜ್ಞರ ದೃಷ್ಟಿಯಲ್ಲಿ, ಧಾರ್ಮಿಕ ಮಹಾಪುರುಷರ ದೃಷ್ಟಿಯಲ್ಲಿ, ಶಿವಶರಣರ ದೃಷ್ಟಿಯಲ್ಲಿ ಹಠಯೋಗಿಗಳ ಪವಾಡಗಳು ಹೇಗೆ ಸೃಷ್ಟಿಯಾಗಿವೆ ಮತ್ತು ಪವಾಡ ಕಥೆಗಳನ್ನು ವರ್ಣಿಸಿದ ತತ್ವ ಮಹಿಮೆಯ ಉದ್ದೇಶಗಳನ್ನು ಹಾಗೂ ಇಂತಹ

ಪವಾಡ ಕಥೆಗಳಿಗೆ ಪ್ರೇರಣೆ ಆಧಾರಗಳನ್ನು ಚರ್ಚಿಸುವುದರೊಂದಿಗೆ, ಪವಾಡ ಕಥೆಗಳ ಬೆಳವಣಿಗೆ ಮತ್ತು ಪವಾಡ ಕಥೆಗಳ ಸ್ವರೂಪವನ್ನು ಅಧ್ಯಯನದಲ್ಲಿ ಕಟ್ಟಿಕೊಡಲಾಗಿದೆ. ಈ ಕೃತಿಯನ್ನು ಅಧ್ಯಯನದ ಹೆಚ್ಚಿನ ಮಾಹಿತಿಗಾಗಿ ಅಳವಡಿಸಿಕೊಳ್ಳಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಬಂದಿರುವ ವ್ಯಕ್ತಿ ಮಹಿಮೆ, ಅದ್ಭುತ ಶಕ್ತಿ ಮತ್ತು ತತ್ವ ಆಚರಣೆಗಳು ಅಲ್ಪಸ್ವಲ್ಪ ಮಹಾತ್ಮೆ ಪ್ರಕಾರಗಳಲ್ಲಿ ವ್ಯಕ್ತಿ ಮಹಿಮೆ ಮತ್ತು ತತ್ವಗಳ ಮಹಿಮೆಗಳಿಗೆ ಪೂರಕವಾದ ವಿಷಯವಾಗಿದ್ದರಿಂದ ಈ ಕೃತಿಯನ್ನು ಅಧ್ಯಯನಕ್ಕೆ ಬಳಸಿಕೊಂಡಿದ್ದೇನೆ.

ಲಕ್ಷ್ಮೀದೇವಿ ಎಲ್, **'ಅವಿಭಜಿತ ಕೋಲಾರ ಜಿಲ್ಲೆಯ ಐತಿಹ್ಯಗಳು'**, ಎಂಬ ಕೃತಿಯು ೨೦೧೧ರಲ್ಲಿ ಪ್ರಕಟವಾಗಿದೆ. ಈ ಕೃತಿಯಲ್ಲಿ ಐತಿಹ್ಯ ಅರ್ಥ ನಿರೂಪಣೆ ಸ್ವರೂಪ ಮತ್ತು ಅವುಗಳ ವರ್ಗೀಕರಣ ಮಾಡಿಕೊಂಡು ಐತಿಹ್ಯಗಳ ವಸ್ತು, ಮಹತ್ವ, ವದಂತಿ, ದಂತಕಥೆ, ಐತಿಹ್ಯ ಪುರಾಣದ ಮೂಲಕ ಪ್ರಾದೇಶಿಕ ಕೋಲಾರ ಜಿಲ್ಲೆಗಷ್ಟೇ ಸೀಮಿತ ಮಾಡಿಕೊಂಡು ಪ್ರಚಲಿತವಿರುವ ನೂರಾರು ಐತಿಹ್ಯಗಳನ್ನು ಅಧ್ಯಯನ ಮಾಡಿದ್ದಾರೆ. ಇದರಲ್ಲಿ ಸ್ಥಳೈತಿಹ್ಯಗಳು, ಸ್ಥಳ ಪುರಾಣಗಳು ಎಂಬಂತ ಮೂರನೇ ಅಧ್ಯಾಯದಲ್ಲಿ ಸ್ಥಳಕ್ಕೆ ಸಂಬಂಧಿಸಿದ ಪುರಾಣ, ಇತಿಹಾಸ, ಐತಿಹ್ಯ, ಮಹಾಕಾವ್ಯಕ್ಕೆ ಸಂಬಂಧಿಸಿದ ಸ್ಥಳ ಪುರಾಣಗಳು ವಿಧಿ ಆಚರಣೆಗಳನ್ನು ತುಂಬಾ ಸೃಜನಾತ್ಮಕವಾಗಿ, ಶಾಸ್ತ್ರೀಯವಾಗಿ ಶಿಷ್ಟಪದ ಸಾಹಿತ್ಯ ಮತ್ತು ಜನಪದ ಸಾಹಿತ್ಯಗಳೆರಡನ್ನೂ ಸಂಪೂರ್ಣ ಆವರಿಸಿಕೊಂಡಿರುವ ಇತಿಹಾಸ, ಪುರಾಣ, ಐತಿಹ್ಯ, ದಂತಕತೆ, ವದಂತಿ, ಎಂಬಿತ್ಯಾದಿಯೆಲ್ಲವನ್ನು ಪರಸ್ಪರ ಬೇರ್ಪಡಿಸಲಾಗದಷ್ಟು ಗಾಢ ಅಥವಾ ಅಂತರ್‌ಸಂಬಂಧ ಹೊಂದಿರುವುದು ಸ್ಪಷ್ಟ. ಯಾವುದರಿಂದ ಯಾವುದನ್ನು ಬೇರ್ಪಡಿಸಿ ಪರಿಶೀಲಸಬೇಕೆಂಬುದೇ ತಿಳಿಯದಷ್ಟು ಗೊಂದಲವನ್ನು ಉಂಟುಮಾಡುತ್ತದೆ. ಅದರಲ್ಲಿ ಐತಿಹ್ಯ ಯಾವುದು ಇತಿಹಾಸ ಯಾವುದೋ ಎಂದು ತೋಚದಾಗುತ್ತದೆ. ವಸ್ತುನಿಷ್ಠತೆ, ವೈಧಾನಿಕತೆ, ವೈಜ್ಞಾನಿಕತೆ ಇತ್ಯಾದಿಯೆಲ್ಲವೂ ಪ್ರಶ್ನಾರ್ಹವೆನಿಸುವುದು ಸಹಜ. ಇದಕ್ಕೆ ಸಾಪೇಕ್ಷ ಸ್ವರೂಪದ ಸತ್ಯಕ್ಕೆ ಇತಿಹಾಸವನ್ನು ಸಂವಾದಿಯಾಗಿಸುವ ಇಂಥದೇ ಇನ್ನೊಂದು ಬಗೆಯ ಭ್ರಾಂತಿ! ಏನೇ ಇರಲಿ ಮಾನವ ಬದುಕಿನ ಒಟ್ಟು ಅನುಭವಗಳ ಸಾರ-ಸಂಗ್ರಹದಂತಿರುವ ಸ್ಥಳ ಐತಿಹ್ಯಗಳನ್ನು ನಿರ್ಲಕ್ಷಿಸುವುದು ಅಸಾಧ್ಯ. ಬೆಳಕು-ಕತ್ತಲೆಗಳಂತೆ ಇತಿಹಾಸ-ಐತಿಹ್ಯಗಳ ಸಂಬಂಧವನ್ನು ವಿಶ್ಲೇಷಿಸುವ ಈ ಕೃತಿಯಂತೆ ಮಹಾತ್ಮೆಗಳಲ್ಲಿಯೂ ಕೆಲವು ಸಂದರ್ಭದಲ್ಲಿ ಇದೇ ಭ್ರಾಂತಿಯು ಮೂಡುತ್ತದೆ. ಮಹಾತ್ಮೆಗಳಿಗಿಂತ ಸ್ವಲ್ಪ ಭಿನ್ನವಾಗಿ ಚರಿತ್ರೆಯ ಮುಖ್ಯವಾಗುತ್ತವೆ. ಸ್ಥಳ ಮಹಾತ್ಮೆಗಳಲ್ಲಿ ಪುರಾಣವೇ ಮುಖ್ಯವಾಗಿ ಪ್ರಮುಖವಾಗುತ್ತದೆ.

ಡಾ. ವಿರೂಪಾಕ್ಷಿ ಪೂಜಾರಹಳ್ಳಿ ಅವರ **'ಕೃಷ್ಣದೇವರಾಯನ ತೀರ್ಥಯಾತ್ರೆಗಳು'** ಎಂಬ ಕೃತಿಯನ್ನು ೨೦೧೫ರಲ್ಲಿ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟಿಸಲಾಗಿದೆ. ಈ ಕೃತಿಯಲ್ಲಿ ತೀರ್ಥಯಾತ್ರೆಯ ಪರಿಕಲ್ಪನೆ ಹುಟ್ಟು, ವಿಧಾನ, ಬೆಳವಣಿಗೆಯನ್ನು ಅವುಗಳನ್ನು ತಾತ್ವಿಕವಾಗಿ ಕಟ್ಟಿಕೊಡಲಾಗಿದೆ. ಧಾರ್ಮಿಕ, ಸಾಂಸ್ಕೃತಿಕ ನೆಲೆಗಳಲ್ಲಿ ಉಗಮಗೊಂಡ ಯಾತ್ರಾಸ್ಥಳ ಅಥವಾ ತೀರ್ಥಕ್ಷೇತ್ರ, ಪುಣ್ಯಕ್ಷೇತ್ರಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸುವುದರ ಮೂಲಕ, ಇವುಗಳ ಚಾರಿತ್ರಿಕ ಮಹತ್ವವನ್ನು ಪರಿಚಯಿಸಲಾಗಿದೆ. ಹಾಗೆ ಈವರೆಗೆ ತೀರ್ಥಯಾತ್ರೆಗಳನ್ನು ಕೈಗೊಂಡ ಅರಸರ ಅವಲೋಕನ ಮತ್ತು ವಿಜಯನಗರ ಕಾಲದ ತೀರ್ಥಯಾತ್ರೆ ಮತ್ತು ಪ್ರವಾಸ ಯಾತ್ರೆಗಳ ವಿವರದೊಂದಿಗೆ ಕೃಷ್ಣದೇವರಾಯನು ಕೈಗೊಂಡ ಎಲ್ಲಾ ತೀರ್ಥಕ್ಷೇತ್ರಗಳ ಬಗ್ಗೆ ಸವಿವರವಾದ ಮಾಹಿತಿ ದೊರೆಯುತ್ತದೆ. ಆದರೆ ಈ ಕೃತಿಯನ್ನು ಈ ಅಧ್ಯಯನಕ್ಕೆ ಬಳಸಿಕೊಳ್ಳಲು ಪ್ರಮುಖವಾದ ಕಾರಣವೆಂದರೆ ಇಡೀ ಮಹಾತ್ಮೆ ಕೃತಿಗಳು ತೀರ್ಥಕ್ಷೇತ್ರಗಳನ್ನು ಪರಿಚಯಿಸುವ ಮಾಹಿತಿಕೋಶಗಳಂತಿದೆ. ಆದ್ದರಿಂದ ಈ ಕೃತಿಯನ್ನು ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ.

ಹೀಗೆ ಮಹಾತ್ಮೆ ಮತ್ತು ಪುರಾಣ, ಐತಿಹ್ಯಗಳ ಕುರಿತಂತೆ ಅಲ್ಲಲ್ಲಿ ಚರ್ಚಿಸಿದ್ದಾರೆಯೇ ವಿನಃ ಒಂದು ಸಮಗ್ರವಾದ ಅಧ್ಯಯನ ಇದುವರೆಗೂ ನಡೆದಿರುವುದಿಲ್ಲ. ಆದ್ದರಿಂದ 'ಕನ್ನಡದಲ್ಲಿ ಮಹಾತ್ಮೆಗಳು: ಸಾಂಸ್ಕೃತಿಕ ಅಧ್ಯಯನ' ಎಂಬ ಚೌಕಟ್ಟಿನಲ್ಲಿ ಅಧ್ಯಯನ ಮಾಡುವ ಅಗತ್ಯವನ್ನು ಮನಗಂಡು ಅಧ್ಯಯನ ಕೈಗೊಳ್ಳಲಾಗಿದೆ. ಇದರಿಂದ ಅಂದಿನ ಕಾಲದ ಭಾಷೆ, ಸಂಸ್ಕೃತಿ ಕಾವ್ಯಗಳ ಮಹತ್ವವನ್ನು ತಿಳಿಯುವಲ್ಲಿ ಉಪಯುಕ್ತವಾಗಿದೆ.

**ಅಡಿಟಿಪ್ಪಣಿಗಳು**

೧. ಹಿರೇಮಠ ಆರ್.ಸಿ., **ಬಸವ ಪುರಾಣ,** ಪು.ಸಂ–೫

೨. ಶಿವರುದ್ರಪ್ಪ ಜಿ.ಎಸ್., **ಕನ್ನಡ ಸಾಹಿತ್ಯ ಸಮೀಕ್ಷೆ,** ಪು.ಸಂ–೪೪

೩. ಮಾಸ್ತಿ ವೆಂಕಟೇಶ ಅಯ್ಯಂಗಾರ್, **ಧರ್ಮ ಸಂರಕ್ಷಣೆ,** ಪು.ಸಂ–೫

೪. **ಅದೇ ಪುಸ್ತಕ,** ಪು.ಸಂ–೫೦

೫. **'ಮಸಗಲಿ'** ಮಂಜಪ್ಪಶೆಟ್ಟಿ ಮಸಗಲಿ ಅವರ ಅಭಿನಂದನ ಗ್ರಂಥ, ಪು.ಸಂ–೬೭೯

೬. **ಅದೇ ಪುಸ್ತಕ,** ಪು.ಸಂ–೬೮೧

ಅಧ್ಯಾಯ : ಎರಡು

# ಮಹಾತ್ಮ್ಯೆಗಳ ಅರ್ಥ, ಉಗಮ ಮತ್ತು ಸ್ವರೂಪ

೨.೧ ಮಹಾತ್ಮ್ಯೆಗಳ ಅರ್ಥ ಮತ್ತು ಉಗಮ

೨.೨ ಮಹಾತ್ಮ್ಯೆಗಳ ಬೆಳವಣಿಗೆಯ ಕಾಲ

೨.೩ ಮಹಾತ್ಮ್ಯೆಗಳ ಸ್ವರೂಪ

ಅಧ್ಯಾಯ : ಎರಡು

# ಮಹಾತ್ಮೆಗಳ ಅರ್ಥ, ಉಗಮ ಮತ್ತು ಸ್ವರೂಪ

ಭಾರತೀಯರ ಜನಜೀವನದ ಮೇಲೆ ಧರ್ಮ ಮತ್ತು ಆಧ್ಯಾತ್ಮಿಕ ಚಿಂತನೆಯು ಬೀರಿದ ಪ್ರಭಾವ ಮತ್ತು ಪ್ರೇರಣೆಯು ಬಹುದೊಡ್ಡದು. 'ಧರ್ಮೋ ರಕ್ಷತಿ ರಕ್ಷಿತಃ' ಎಂಬ ಮೂಲಮಂತ್ರವನ್ನು ಅವರ ಬದುಕಿನಲ್ಲಿ ತಿಳುವಳಿಕೆಯ ತಳಹದಿಯನ್ನಾಗಿ ಒಪ್ಪಿಕೊಂಡು ಬಂದಿದ್ದಾರೆ. ಜೀವನದ ಪ್ರತಿಯೊಂದು ಕ್ರಿಯಾಕಲಾಪಗಳು ಸಹ ಧರ್ಮದಿಂದಲೇ ನಿರ್ಧಾರವಾಗುತ್ತವೆ ಎನ್ನುವುದು ಬಹುಜನರ ಸಮ್ಮತವಾದ ಮಾತಾಗಿದೆ. ಜನರ ಬದುಕಿನ ಪ್ರತಿಯೊಂದು ಘಟನೆಗಳಿಗೂ, ಆಗು–ಹೋಗುಗಳಿಗೂ ಇದುವೇ ಕಾರಣ ಎನ್ನುವುದಾಗಿ ನಂಬಿಕೊಂಡು ಬಂದಿದ್ದಾರೆ. ಹೀಗೆ ವರ್ಷಾನುವರ್ಷಗಳಿಂದಲೂ ಧಾರ್ಮಿಕತೆಯ ಭಾಗವಾಗಿ ತಮ್ಮ ದಿನನಿತ್ಯದ ಕೆಲಸ–ಕಾರ್ಯಗಳನ್ನು ಸಮರ್ಪಕವಾಗಿ ನಡೆಸಿಕೊಂಡು ಬಂದಿದ್ದಾರೆ. ಇಂದಿನ ಆಧುನಿಕ ಜನರ ಬದುಕು ವೈಜ್ಞಾನಿಕ ತಳಹದಿಯ ಮೇಲೆ ನಿಂತಿದ್ದರೂ ಕೂಡ ಧರ್ಮ ಮತ್ತು ಆಧ್ಯಾತ್ಮಿಕ ಚಿಂತನೆಯತ್ತ ಒಲವು ಹೆಚ್ಚಿನ ಪ್ರಮಾಣದಲ್ಲಿದೆ. ನಿತ್ಯದ ಬದುಕಿನ ಜೊತೆಗೆ ತಳುಕು ಹಾಕಿಕೊಂಡಿರುವ ಈ ಎರಡೂ ವಿಚಾರಗಳು ಜನರ ಆಚಾರ–ವಿಚಾರ, ಉಡುಗೆ–ತೊಡುಗೆ, ಆಹಾರ, ಸಂಪ್ರದಾಯ, ನಂಬಿಕೆ ಅಷ್ಟೇ ಅಲ್ಲದೆ ಅದು ಸುಖ–ದುಃಖ ಮತ್ತು ಜ್ಞಾನದಂತಹ ವಿಷಯಗಳಲ್ಲೂ ತನ್ನ ಪ್ರಭಾವವನ್ನು ಬೀರಿದೆ. ಅಂದರೆ ಜನರ ಬದುಕಿನೊಳಗೆ ಆಳವಾದ ಬೇರನ್ನು ರೂಪಿಸಿಕೊಂಡು ಧರ್ಮ ಮತ್ತು ಆಧ್ಯಾತ್ಮಗಳೆರಡರ ನಡುವೆಯೂ ಅವಿನಾಭಾವ ಸಂಬಂಧವನ್ನು ಬೆಸೆದಿದೆ. ಧರ್ಮ ಎನ್ನುವುದು ಕನ್ನಡ ಸಾಹಿತ್ಯದಲ್ಲಿಯೂ ಸಹ ಆಳವಾದ ವ್ಯಾಪಕತೆಯನ್ನು ಪಡೆದುಕೊಂಡಿರುವುದು ಸಾಹಿತ್ಯ ಚರಿತ್ರೆಯನ್ನು ಗಮನಿಸಿದಾಗ ತಿಳಿದುಬರುತ್ತದೆ. ಪಂಪನಿಂದ ಹಿಡಿದು ಇಂದಿನವರೆಗೂ ಸಾಹಿತ್ಯದಲ್ಲಿ ಧರ್ಮದ ಬಗೆಗೆ ಇರುವ ತರ್ಕಗಳನ್ನು ಪರಸ್ಪರ ಒಪ್ಪಿತ ಅಥವಾ ತಿರಸ್ಕೃತ, ಓಲೈಸುವ ಇಲ್ಲವೇ ಟೀಕಿಸುವ

ನಿಟ್ಟಿನಲ್ಲಿ ಚರ್ಚೆಗಳಾಗಿರುವುದನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಈ ದೃಷ್ಟಿಕೋನದಿಂದ ಅವಲೋಕಿಸಿದಾಗ ಕನ್ನಡದ ವಿದ್ವಾಂಸರು ಸಾಹಿತ್ಯ ಚರಿತ್ರೆಯನ್ನು ಧರ್ಮದ ಹಿನ್ನೆಲೆಯಲ್ಲಿ ವಿಂಗಡಿಸಿಕೊಂಡಿರುವುದನ್ನು ನೋಡಿದರೆ, ಧರ್ಮವನ್ನು ಕನ್ನಡ ಸಾಹಿತ್ಯ ಲೋಕವು ಯಾವ ನೆಲೆಯಲ್ಲಿ ತನ್ನೊಳಗೆ ಸ್ವೀಕರಿಸಿಕೊಂಡಿದೆ ಎನ್ನುವುದನ್ನು ಅರಿಯಲು ಸಾಧ್ಯ.

ಕರ್ನಾಟಕದ ಸಾಂಸ್ಕೃತಿಕ ಸಂದರ್ಭದಲ್ಲಿ ೧೬-೧೭ನೇ ಶತಮಾನದ ಕಾಲವನ್ನು ಧಾರ್ಮಿಕ ಸಾಹಿತ್ಯದ ಪರಾಕಾಷ್ಟೆಯ ಕಾಲವೆಂದೇ ಹೇಳಲಾಗುತ್ತದೆ. ಮಹಾತ್ಮೆ, ಪುರಾಣ, ಐತಿಹ್ಯ ಮುಂತಾದ ಅನೇಕ ಪ್ರಕಾರಗಳು ಹುಟ್ಟಿಕೊಂಡದ್ದು ಅಲ್ಲದೇ ಹೆಚ್ಚಿನದಾಗಿ ಧಾರ್ಮಿಕ ವಿಚಾರಗಳನ್ನು ಸಾಹಿತ್ಯ ಕ್ಷೇತ್ರದಲ್ಲಿ ರಚಿಸಲಾಯಿತು. ಇದರಲ್ಲಿ ಮುಖ್ಯವಾಗಿ ಪುರಾಣವನ್ನು ಕುರಿತ ಸಾಹಿತ್ಯವು ಒಂದು. ಪುರಾಣದಲ್ಲಿ ವಿಶ್ವದ ಸೃಷ್ಟಿಯ ಬಗ್ಗೆ, ದೇವಾನುದೇವತೆಗಳ ಬಗ್ಗೆ, ವೀರಪುರುಷರ ಬಗ್ಗೆ ಐತಿಹ್ಯಗಳನ್ನು ಕಟ್ಟಿಕೊಡುವ ಮೂಲಕ ಭಾರತೀಯರು ತಮ್ಮ ನಂಬಿಕೆ, ಆಚರಣೆ, ಆದರ್ಶ ಮತ್ತು ಸಂಪ್ರದಾಯಗಳನ್ನು ತಮ್ಮದೇ ಆದ ನೆಲೆಯಲ್ಲಿ ಅಭಿವ್ಯಕ್ತಿಗೊಳಿಸಿದ್ದಾರೆ.

ಆರಂಭದಲ್ಲಿ ಪುರಾಣ ಹುಟ್ಟಿದ್ದೇ ವೈದ್ಧಿಕ ಯುಗದಲ್ಲಿ ಎಂದು ತಿಳಿದುಬರುತ್ತದೆ. ಗ್ರೀಕ್ ಭಾಷೆಯಲ್ಲಿಯೂ ಕೂಡ ವಿಪುಲವಾಗಿ ಪುರಾಣಗಳು ಸಾಹಿತ್ಯಿಕವಾಗಿ ಬೆಳೆದುಬಂದಿವೆ. ಜಗತ್ತಿನಲ್ಲಿರುವ ಎಲ್ಲಾ ದೇಶಿ ಸಾಹಿತ್ಯಗಳಲ್ಲಿಯೂ ಸಹ ಈ ರೀತಿಯ ಪುರಾಣಗಳ ಕಲ್ಪನೆ ಬೆಳೆದುಬಂದಿರುವುದನ್ನು ಕಾಣಬಹುದು.

ಭಾರತದಲ್ಲಿ ಶಿಷ್ಟ ಸಾಹಿತ್ಯದ ಒಂದು ರೂಪವಾಗಿ ಸಂಸ್ಕೃತ ಭಾಷೆಯಲ್ಲಿ ಪುರಾಣಗಳು ಮೊದಲು ರೂಪುಗೊಂಡವು. ವೈದ್ಧಿಕರಲ್ಲಿ ಭಕ್ತಿಯೇ ಪುರಾಣ ಸಾಹಿತ್ಯವಾಗಿ ಬೆಳೆದುಬಂದಿದೆ. ಇಂತಹ ಪುರಾಣ ಸಾಹಿತ್ಯವು ಕೇವಲ ಪಂಡಿತ-ಪಾಮರರಲ್ಲಿ ಮಾತ್ರವೇ ಇದ್ದಿತು. ಇದಕ್ಕೆ ಮುಖ್ಯ ಕಾರಣವೆಂದರೆ ಅಂದಿನ ಕಾಲದಲ್ಲಿ ಪುರಾಣವನ್ನು ವೈದ್ಧಿಕ ಧರ್ಮದವರು ಮಾತ್ರ ತಿಳಿದವರಾಗಿದ್ದರು. ಇವು ಸಂಸ್ಕೃತಭೂಯಿಷ್ಠತೆಯಿಂದ ಕೂಡಿದ ಕೃತಿಗಳಾಗಿದ್ದು ಮಠ-ಮಾನ್ಯಗಳಲ್ಲಿ ವೈದ್ಧಿಕರ ಮಕ್ಕಳಿಗೆ ಮಾತ್ರ ಪ್ರವಚನಗೊಳ್ಳುತ್ತಿದ್ದವು. ಸಂಸ್ಕೃತ ಭಾಷೆಯನ್ನು ಬಲ್ಲ ಇಂತಹ ಕೃತಿಗಳ ಪರಿಚಯ ಜನಸಾಮಾನ್ಯರಿಗೆ ಎಟುಕದವಾಗಿದ್ದವು. ಹೀಗೆ ಕೇವಲ ಸಂಸ್ಕೃತಭೂಯಿಷ್ಠವಾಗಿದ್ದ ಕೃತಿಗಳನ್ನು ಮುಂದಿನ ಕಾಲಘಟ್ಟದಲ್ಲಿ ಆಳ್ವಿಕೆ ನಡೆಸಿದಂತಹ ರಾಜ-ಮಹಾರಾಜರುಗಳು ಅವರ ರಾಜ್ಯದಲ್ಲಿದ್ದ ಅರಾಜಕತೆ, ಅಧರ್ಮ, ಅನೈತಿಕತೆಗಳಿಂದ ಇಡೀ ರಾಜ್ಯವೇ ಪತನಗೊಳ್ಳುವ ಹಂತದಲ್ಲಿದ್ದಾಗ ಆಸ್ಥಾನದ ಕವಿಗಳಿಗೆ,

ಮಠಾಧೀಶರುಗಳಿಗೆ ರಾಜನು ಆಶ್ರಯವನ್ನು ನೀಡಿ, ಧರ್ಮ ಪತನದ ಸ್ಥಿತಿಯನ್ನು ತಪ್ಪಿಸುವ ಸಲುವಾಗಿ ತಮ್ಮ ಧರ್ಮದ ತತ್ವಗಳನ್ನು ಪ್ರಚಾರ ಮಾಡಿ ಜನರಲ್ಲಿ ಧಾರ್ಮಿಕ ಭಾವನೆಗಳನ್ನು, ಸದ್ಭಾವನೆಗಳನ್ನು ಮೂಡಿಸಲು ಹಾಗೂ ನೈತಿಕತೆಯಿಂದ ಸಮಾಜದಲ್ಲಿ ಮುನ್ನೆಡೆಯುವಂತೆ ಮಾಡಲು ಆಯಾ ಪ್ರಾಂತೀಯ ಭಾಷೆಯಲ್ಲಿ ಪುರಾಣ ಕೃತಿಗಳನ್ನು ರಚಿಸಲು ಮುಂದಾದರು. ಇಂತಹ ಕೃತಿಗಳು ೧೬-೧೭ ನೇ ಶತಮಾನದಲ್ಲಿ ಪುರಾಣದ ವಸ್ತುವಿಗೆ ಸ್ಥಳೀಯ ರಾಜನ ಅಥವಾ ಅರಮನೆಯ ಚರಿತ್ರೆಯನ್ನು ಸಮ್ಮಿಲನಗೊಳಿಸಿ ಧಾರ್ಮಿಕ ತತ್ವಗಳನ್ನು ತಮ್ಮ ಕಾವ್ಯ-ಕೃತಿಗಳಲ್ಲಿ ಒಡಮೂಡಿಸಿದರು.

ಈ ರೀತಿಯಾಗಿ ಹುಟ್ಟಿಕೊಂಡ ಪುರಾಣಗಳೇ ಕಾಲಾನಂತರದಲ್ಲಿ ಮಹಾತ್ಮೆಗಳಾಗಿ ಹೊರಹೊಮ್ಮಿವೆ. ಮಹಾತ್ಮೆ ಎಂದರೆ "ಹಿರಿದಾದ, ಘನತೆಯನ್ನು ಪಡೆದ ವಸ್ತುವನ್ನು ಕುರಿತು ಹಾಡುವುದು, ಕೀರ್ತಿಸುವುದು ಎಂದರ್ಥ ಬರುತ್ತದೆ." ಪುರಾಣ ಎಂದರೆ ತ್ರಿಮೂರ್ತಿ ದೇವರುಗಳ ಮತ್ತು ಅಸುರ, ವರುಣ, ಅಗ್ನಿ, ವಾಯು, ಅದಿತಿ, ಆದಿತ್ಯ ಮುಂತಾದ ದೇವತೆಗಳ ಸುತ್ತ ಹೆಣೆದಿರುವ ಸಾಹಿತ್ಯವನ್ನು ಮೂಲವಾಗಿಟ್ಟುಕೊಂಡು ಪುರಾಣಗಳು ಹುಟ್ಟಿಕೊಂಡಿವೆ. ಹಾಗೆಯೇ ಇತಿಹಾಸ ಪ್ರಸಿದ್ಧವಾದ ದೇವರುಗಳನ್ನು ಇಟ್ಟುಕೊಂಡು ಪುರಾಣದೊಂದಿಗೆ ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡುವುದೇ ಮಹಾತ್ಮೆಯಾಗಿದೆ. ಇಂತಹ ಮಹಾತ್ಮೆಗಳಲ್ಲಿ ಪುರಾಣಗಳ ಸ್ಥಳ ಐತಿಹ್ಯ, ಪವಾಡ, ಲೀಲೆಗಳ ಜೊತೆಗೆ ದೇವಾನುದೇವತೆಗಳನ್ನು ಔನತ್ಯೀಕರಿಸಿ ಕೀರ್ತಿಸಲಾಗಿದೆ.

ಮಹಾತ್ಮೆ ಎಂದರೆ ಕ್ಷೇತ್ರ ಸಂದರ್ಶನ, ಪವಿತ್ರ ನದಿಸ್ನಾನ, ಪುಣ್ಯಶ್ಲೋಕದ ಜೀವನಾಧ್ಯಯನ ಮುಂತಾದವುಗಳ ಮೌಲ್ಯಗಳನ್ನು ಶ್ರುತಪಡಿಸುವುದರ ಜೊತೆಗೆ ಪಾಪ ಕಳಂಕಿತ ಜನರು ಪಾಪ ಮುಕ್ತರಾಗಲು ವ್ರತಾಚರಣೆ, ತೀರ್ಥಸ್ನಾನ, ಕ್ಷೇತ್ರ ಸಂದರ್ಶನ, ದೇವತಾ ಪೂಜೆ ಮುಂತಾದ ಆಚರಣೆಗಳ ಧರ್ಮಸೂಕ್ಷ್ಮತೆಯನ್ನು ಹೊಂದಿದ ಈ ಕಾರ್ಯಗಳ ಶ್ರೇಷ್ಠತೆಯನ್ನೂ, ಗುಣಕೀರ್ತನವನ್ನು, ಫಲಗಳನ್ನು ತಿಳಿಸುವಂತಹುವುಗಳೇ ಮಹಾತ್ಮೆಗಳಾಗಿವೆ. ಸಾಮಾನ್ಯವಾಗಿ ಇಂತಹ ವಿಚಾರಗಳು ಅತ್ಯಧಿಕವಾಗಿ ಕಾಣಸಿಗುವಂಥದ್ದು ಸಂಸ್ಕೃತದ ಪುರಾಣ ಗ್ರಂಥಗಳಲ್ಲಿಯೇ. ಶಿವ-ಪಾರ್ವತಿ, ಶಂಕರ-ನಾರದ, ನಾರದ-ಭೃಗು, ಪೃಥು-ನಾರದ, ಸೂತ ಮುನಿಗಳು ಮತ್ತು ಋಷಿಗಳು ಮೊದಲಾದವರ ಸಂವಾದದ ರೂಪದಲ್ಲಿ ಕಂಡುಬರುತ್ತದೆ. ಇವನ್ನೇ ಆಯಾ ಕ್ಷೇತ್ರ, ತೀರ್ಥಕ್ಷೇತ್ರದ ಹಿನ್ನೆಲೆಯಲ್ಲಿ ಸ್ಥಳೀಯ ಐತಿಹ್ಯ, ಪುರಾಣ, ಮಹಾತ್ಮೆಗಳನ್ನು ಅರ್ಥೈಸಿಕೊಳ್ಳಲು ಸಾಧ್ಯವಾಗುತ್ತದೆ. ಪ್ರತಿಯೊಂದು ಮಹಾತ್ಮೆಯಲ್ಲೂ ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದ

ಪುರಾಣ, ಐತಿಹ್ಯವನ್ನೊಳಗೊಂಡಂತೆ ಅದಕ್ಕೆ ಸಂಬಂಧಪಟ್ಟ ಕಥೆಗಳಿರುತ್ತವೆ. ಮಹಾತ್ಮೆಯನ್ನು ವಾಚನ ಮಾಡಿದರೆ ಪಾಪನಿವಾರಣೆಯೂ, ಮುಕ್ತಿಯೂ ದೊರೆಯುತ್ತದೆಂದು ಕೃತಿಯ ಕೊನೆಯಲ್ಲಿ ಫಲಶ್ರುತಿಯೂ ಕೂಡಾ ಸಿಗುತ್ತದೆ ಎಂದು ಉಲ್ಲೇಖಗೊಂಡಿದೆ.

ಕನ್ನಡ ಸಾಹಿತ್ಯದಲ್ಲಿ ಇಂತಹ ಮಹಾತ್ಮೆಗಳು ಸಾಂಪ್ರದಾಯಿಕ ಪುರಾಣ ಕಥೆಗಳನ್ನು ಆಧರಿಸಿರುವುದರ ಜೊತೆಗೆ ಅದು ಅಂದಿನ ಕಾಲದ ಸಮಕಾಲೀನ ಸ್ಥಳೀಯ ಚರಿತ್ರೆಯೊಂದಿಗೆ ತಾತ್ವಿಕವಾದ ಧಾರ್ಮಿಕ ಮಹತ್ವವನ್ನು, ಆಧ್ಯಾತ್ಮಿಕ ಮೌಲ್ಯಗಳನ್ನು ಔನತ್ಯೀಕರಿಸಿ ಹೇಳುವಂತಹದ್ದು ಅಥವಾ ಕೀರ್ತಿಸುವ ಸಲುವಾಗಿಯೇ ಸಾಹಿತ್ಯದ ರೂಪದಲ್ಲಿ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡಿವೆ. ಮಹಾತ್ಮೆಗಳು ಇತಿಹಾಸದ ವಸ್ತುವಿನೊಂದಿಗೆ ಪ್ರಾರಂಭವಾದರೂ ಅಲ್ಲಿ ಸ್ಥಳೀಯ ಚರಿತ್ರೆ ಗೌಣವಾಗಿ ಪುರಾಣ, ಐತಿಹ್ಯ, ಪವಾಡ, ಲೀಲೆ ಮುಂತಾದ ಧಾರ್ಮಿಕ ಅಂಶಗಳೇ ಹೆಚ್ಚಾಗಿರುತ್ತವೆ. ಭಾರತದ ಅಥವಾ ಕನ್ನಡದಲ್ಲಿ ಇತಿಹಾಸವನ್ನು ಕುರಿತಂತೆ ಚಾರಿತ್ರಿಕ ಕೃತಿಗಳು ರಚನೆಯಾಗಿರುವುದು ತುಂಬಾ ವಿರಳ. ಕನ್ನಡ ಸಾಹಿತ್ಯದಲ್ಲಿ ಚರಿತ್ರೆಯನ್ನು ಸಾಹಿತ್ಯ ಕೃತಿಗಳ ಮೂಲಕ ಕವಿಗಳು ಕಟ್ಟಿಕೊಟ್ಟಿರುವುದನ್ನು ಮುಖ್ಯವಾಗಿ ಇಲ್ಲಿ ಗಮನಿಸಬೇಕಾಗುತ್ತದೆ.

### ೨.೧ ಮಹಾತ್ಮೆಗಳ ಅರ್ಥ ಮತ್ತು ಉಗಮ

ಮಹಾತ್ಮೆ ಎಂದರೆ "ಕೀರ್ತಿ, ಘನತೆ, ಹಿರಿಮೆ"[೧] ಎಂಬ ಸಾಮಾನ್ಯಾರ್ಥಗಳು ದೊರೆಯುತ್ತವೆ. ಸ್ಥೂಲವಾಗಿ ವಿಸ್ತರಿಸುವುದಾದರೆ ಒಂದು ಸ್ಥಳದ ಜೊತೆಗೆ ಪುರಾಣದ ಕಲ್ಪಿತ ಚರಿತ್ರೆಯನ್ನು ಒಳಗೊಂಡಿರುವುದರ ಜೊತೆಗೆ ದೈವಿಕ ಪರಿಕಲ್ಪನೆಗೆ ಸಂಬಂಧಿಸಿದ ಲೀಲೆ, ಗುಣಕೀರ್ತನೆ ಮಾಡುವುದನ್ನು ಮಹಾತ್ಮೆ ಎಂದು ಕರೆಯಬಹುದು. ಇದರಂತೆ 'ಅರಸರ ಚರಿತ್ರೆಗಳು' ಎಂಬ ಕೃತಿಯಲ್ಲಿ "ವೃತ್ತಾಂತ ಎಂಬ ಪದವನ್ನು ಸ್ಥಳ ಪುರಾಣಕ್ಕೆ ಮತ್ತು ಸ್ಥಳೀಯ ಚರಿತ್ರೆಗೆ ಬಳಸಿಕೊಳ್ಳಲಾಗಿದೆ. ಅಲ್ಲದೇ ಹಿಂದೆ ಸ್ಥಳ ಪುರಾಣ ಮತ್ತು ವ್ಯಕ್ತಿ ಚರಿತ್ರೆಗೆ ವೃತ್ತಾಂತ ಎಂದು ಕರೆದಿರುವಂತೆ ಕಂಡುಬರುತ್ತದೆ."[೨] ಅದು ನಂತರದಲ್ಲಿ ವೃತ್ತಾಂತ, ಸ್ಥಳ ಚರಿತ್ರೆ, ಸ್ಥಳ ಪುರಾಣವಾಗಿ ಕಾಲಾನಂತರದಲ್ಲಿ ಮಹಾತ್ಮೆ ಎಂಬ ಸ್ಥಿತ್ಯಂತರದ ರೂಪವನ್ನು ಪಡೆದುಕೊಂಡಿದೆ.

ಮಹಾತ್ಮೆಯನ್ನು ಕುರಿತಂತೆ ಬಳಕೆಯಾಗಿರುವ ವ್ಯಾಖ್ಯಾನಗಳನ್ನು ಹೀಗೆ ಗುರುತಿಸಬಹುದು.

೦೧. ಪ್ರಾಚೀನ ಕಾವ್ಯಗಳಲ್ಲಿ :

- "ಜನಿಕ ಪ್ರಗಲ್ಬದೊಳ್ ಮಾಂತನದೊಳ್ ಮಾಹಾತ್ಮ್ಯದೊಳ್..... ಶ್ರೀ ಶಂಘನಂ"
- "ಶ್ರೀ ಮತ್ಯಾರ್ಯಯುಂ ಸಮ್ಯತ್ತ್ವ ಮಹಾತ್ಮ್ಯೆದಿಂ ಸ್ತ್ರೀರೂಪಮಂ ಪತ್ತುವಿದ್ದು.... ದಿವಿಜನಾದಂ"
- "ನಿನ್ನಾ ಮಹಾತ್ಮ್ಯೆವು ವಿಸ್ತಾರವಾದ ದ್ಯುಲೋಕಕ್ಕಿಂತಲೂ ಅಧಿಕವಾಗಿ ಬೆಳೆದಿದೆ"
- "ಹಿರಿಮೆಯುಳ್ಳವನು; ಮಹಿಮಾಶಾಲಿ ನೀನೆಂದ ಮಾತ ಬಾಹಿರ ಮಾಡಬಾರದು ಕರೆಸೆಂದನು ಮಾಹಾತ್ಮ್ಯನಲ್ಪಕೋವೆಗನು"
- "ಶ್ರೀ ಮಹಾದೇವ ಶ್ರೀ ಪರ್ವತ ಮಹಾತ್ಮ್ಯೆಯ ಕಥಾಮೃತಮುಮಂ ಪೇಳ್ದನೆಂದಖಿಲ ಶಕ್ತಿಲಲಾಮ ಪಾರ್ವತಿಗೆ"[೩]

೦೨. ವಿದ್ವಾಂಸರ ದೃಷ್ಟಿಯಲ್ಲಿ :

- "ಒಂದು ಧಾರ್ಮಿಕ ಕ್ಷೇತ್ರಕ್ಕೆ ಸಂಬಂಧಪಟ್ಟ, ಕ್ಷೇತ್ರ ಸಂದರ್ಶನ, ಪುಣ್ಯಶ್ಲೋಕದಿಂದ ಮೌಲ್ಯಗಳನ್ನು ಹೇಳುವಂತಹುದ್ದೇ ಮಹಾತ್ಮ್ಯೆ" – ಡಾ. ವೈ.ಸಿ.ಭಾನುಮತಿ
- "ಜನಸಾಮ್ಯಾನರಿಗೆ ನಿಲುಕದೆ ಇರುವುದನ್ನು ಸ್ಥಾಪಿಸುವುದೇ ಮಹಾತ್ಮ್ಯೆ" – ಡಾ. ಜಿ.ಜಿ.ಮಂಜುನಾಥನ್
- "ಮಹಾತ್ಮ್ಯೆಗಳು ಸ್ಥಳಗಳನ್ನು ಕುರಿತದ್ದಾಗಿರುತ್ತವೆ. ಹೀಗಾಗಿ ನಿರ್ದಿಷ್ಟ ಸ್ಥಳವೊಂದಕ್ಕೆ ಸಂಬಂಧಪಟ್ಟ ಪುರಾಣಗಳೇ ಮಹಾತ್ಮ್ಯೆಗಳು"[೪] – ಡಾ. ಕೆ.ರವೀಂದ್ರನಾಥ

೧೬–೧೭ನೇ ಶತಮಾನಕ್ಕೂ ಹಿಂದೆ ಯಾವುದೇ ಮಹಾತ್ಮ್ಯೆಯನ್ನು ಕುರಿತಂತೆ ಸ್ವತಂತ್ರವಾಗಿ ರಚನೆಯಾದ ಒಂದು ಗ್ರಂಥಗಳು ಇದ್ದಂತೆ ಕಂಡುಬರುವುದಿಲ್ಲ. ಆದರೆ ಕೆಲವು ಕೃತಿಗಳ ಮಧ್ಯದಲ್ಲಿ ಮಂತ್ರ ಮಹಾತ್ಮ್ಯ, ಪ್ರಸಾದ ಮಹಾತ್ಮ್ಯ, ವಿಭೂತಿ ಮಹಾತ್ಮ್ಯ ಎಂಬ ಹೆಸರಿನಲ್ಲಿ ದೊರಕಿದ ಕೆಲವೊಂದು ಗ್ರಂಥದ ಭಾಗಗಳು ಮಾತ್ರ ಇರುವುದನ್ನು ಕಾಣಬಹುದಾಗಿದೆ. ಮೈಸೂರು ಅರಸರ ಕಾಲದಲ್ಲಿ ಮಹಾತ್ಮ್ಯೆ ಗ್ರಂಥಗಳು ಹೆಚ್ಚಾಗಿ ರಚಿತವಾಗಿವೆ. ಅದರಲ್ಲೂ ಮುಖ್ಯವಾಗಿ ಚಿಕ್ಕದೇವರಾಯ ಮತ್ತು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ರಚನೆಗೊಂಡಂತಹ ಮೇಲುಕೋಟೆ, ಕಂಚಿ, ಶ್ರೀರಂಗ ಕ್ಷೇತ್ರಗಳು ಮತ್ತು ಕಾವೇರಿ ನದಿಯ ಮಹಾತ್ಮ್ಯೆಯಂತಹ ಕೃತಿಗಳೇ ಅಧಿಕವಾಗಿ ಕಂಡುಬರುತ್ತವೆ. ಇನ್ನೂ ಕೆಲವರು ಸಂಸ್ಕೃತದಲ್ಲಿರುವ ಮಹಾತ್ಮ್ಯೆ ಗ್ರಂಥಗಳಿಗೆ ಕನ್ನಡದಲ್ಲಿ

ಟೀಕನ್ನು ಬರೆದಿದ್ದಾರೆ. ಮತ್ತೆ ಕೆಲವರು ಈ ಸಂಸ್ಕೃತ ಗ್ರಂಥಗಳನ್ನೇ ಆಧರಿಸಿ ಸ್ವತಂತ್ರವಾದ ಮಹಾತ್ಮ್ಯೆ ಕೃತಿಗಳನ್ನು ರಚಿಸಿದ್ದಾರೆ. ಈ ರೀತಿಯ ಸ್ವತಂತ್ರ ಕೃತಿಗಳನ್ನು ನೋಡುವುದಾದರೆ ಕಾವೇರಿ ಮಹಾತ್ಮ್ಯೆ, ಯಾದವಗಿರಿ ಮಹಾತ್ಮ್ಯೆ, ಶ್ರೀರಂಗ ಮಹಾತ್ಮ್ಯೆ, ವೆಂಕಟಗಿರಿ ಮಹಾತ್ಮ್ಯೆ, ಪಶ್ಚಿಮರಂಗ ಮಹಾತ್ಮ್ಯೆ, ಚುಂಚನಕಟ್ಟೆ ಮಹಾತ್ಮ್ಯೆ, ಪಂಪ ಮಹಾತ್ಮ್ಯೆ, ನಂದಿ ಮಹಾತ್ಮ್ಯೆ, ದೇವಿ ಮಹಾತ್ಮ್ಯೆ, ಚೆಲುವಾಂಬೆಯ ಕೃತಿಗಳು ಮುಖ್ಯವಾದವು.

ಈ ಮೇಲೆ ತಿಳಿಸಿದಂತಹ ಮಹಾತ್ಮ್ಯೆಗಳು ಪ್ರಮುಖವಾಗಿ ಸ್ಥಳಗಳನ್ನು ಕುರಿತದ್ದಾಗಿವೆ. ಹೀಗೆ ನಿರ್ದಿಷ್ಟ ಸ್ಥಳವೊಂದಕ್ಕೆ ಸಂಬಂಧಪಟ್ಟ ಪುರಾಣಗಳೇ ಮಹಾತ್ಮ್ಯೆಗಳು. ಇತಿಹಾಸ ಪ್ರಸಿದ್ಧ ಕ್ಷೇತ್ರಕ್ಕೆ ಸಂಬಂಧಪಟ್ಟ ವೈಶಿಷ್ಟ್ಯವನ್ನು ಪವಾಡ, ಲೀಲೆಗಳ ಮೂಲಕ ಜನಸಾಮಾನ್ಯರಲ್ಲಿ ಪ್ರೀತಿ, ಶ್ರದ್ಧೆ, ನಂಬಿಕೆ, ಧಾರ್ಮಿಕ ಸಂಪ್ರದಾಯಗಳನ್ನು ಅವರ ಮನಮುಟ್ಟುವಂತೆ ಮಹಾತ್ಮ್ಯೆಗಳಲ್ಲಿ ಚಿತ್ರಿಸಲಾಗಿದೆ. ಕನ್ನಡ ಸಾಹಿತ್ಯದಲ್ಲಿ ಬಹುಮುಖ್ಯ ಭಾಗವಾಗಿ ಬೆಳೆದುಬಂದಿರುವ ಮಹಾತ್ಮ್ಯೆಗಳು ೧೬–೧೭ನೇ ಶತಮಾನದಲ್ಲಿ ಹೆಚ್ಚಾಗಿ ರಚನೆಯಾಗಿರುವುದನ್ನು ಕಾಣಬಹುದು. ಸ್ಥಳಪುರಾಣ ಅಥವಾ ಕ್ಷೇತ್ರ ಮಹಾತ್ಮ್ಯೆಗಳನ್ನು ಹೇಳುವುದರ ಮೂಲಕ ರಾಜರ ವಂಶಾವಳಿ, ಅವರ ಧರ್ಮದ ತತ್ವವನ್ನು ಅಂದಿನ ಸ್ಥಳೀಯ ದೇವತೆ, ದೇವರು, ನದಿ, ಬೆಟ್ಟ–ಗುಡ್ಡಗಳಿಗೆ ಪುರಾಣದೊಂದಿಗೆ ಇತಿಹಾಸವನ್ನು ಕಲ್ಪಿಸಿ ಲೀಲೆ, ಪವಾಡಗಳ ಮೂಲಕ ಅವುಗಳ ಘನತೆಯನ್ನು ಕೀರ್ತಿಸುವುದೇ ಮಹಾತ್ಮ್ಯೆಗಳ ಮುಖ್ಯ ಉದ್ದೇಶವಾಗಿ ಕಂಡುಬರುತ್ತದೆ.

೧೫–೧೬ನೇ ಶತಮಾನದ ನಂತರದಲ್ಲಿ "ಅನೇಕ ಸ್ವತಂತ್ರ ಇತಿಹಾಸ ಕಾವ್ಯಗಳಲ್ಲಿ ಮಹಾತ್ಮ್ಯೆಗಳು ಹೆಚ್ಚಾಗಿ ಕಂಡುಬಂದವು. ಅಲ್ಲದೇ ಆಯಾ ಧರ್ಮಿಯರು ತಮ್ಮ ಧರ್ಮದ ಕ್ಷೇತ್ರ ವರ್ಣನೆಗಾಗಿ ಮಹಾತ್ಮ್ಯೆಗಳನ್ನು ರಚಿಸಿರುವುದು ಕಂಡುಬರುತ್ತದೆ. ಉದಾಹರಣೆಗೆ ಗೋಪಕವಿಯ 'ನಂದಿ ಮಹಾತ್ಮ್ಯೆ'ಯನ್ನು ಕೂಷ್ಮಾಂಡ ಗಣನಾಥನು ನಂದಿಗೆ ತಾನು ತಪಸ್ಸು ಮಾಡಿದ ಶ್ರೀಶೈಲ, ಕೇದಾರ, ವಾರಣಾಸಿ(ಕಾಶಿ), ಮೊದಲಾದ ಶೈವ ಕ್ಷೇತ್ರಗಳ ಮಹತ್ವವನ್ನು ವಿವರಿಸಿದರೆ, ಚಿಕ್ಕುಪಾಧ್ಯಾಯನ 'ಶ್ರೀರಂಗ ಮಹಾತ್ಮ್ಯೆ', 'ಪಶ್ಚಿಮರಂಗ ಮಹಾತ್ಮ್ಯೆ', 'ವೆಂಕಟಗಿರಿ ಮಹಾತ್ಮ್ಯೆ'ಯನ್ನು ಕುರಿತು ಹೇಳುತ್ತಾನೆ. ಒಟ್ಟಿನಲ್ಲಿ ಮೈಸೂರು ಅರಸರ ಕಾಲಘಟ್ಟವು ಸ್ಥಳಪುರಾಣ ಮತ್ತು ಮಹಾತ್ಮ್ಯೆಗಳಿಗೆ 'ಸುಗ್ಗಿಯ ಕಾಲ' ಎಂದು ಹೇಳಿದರೆ ತಪ್ಪಾಗಲಾರದು"[೫] ಎಂಬ ಮಾತು ಸತ್ಯವೆನಿಸುತ್ತದೆ. ಕಾರಣ ಈ ಕಾಲದಲ್ಲಿ ಮಹಾತ್ಮ್ಯೆ ಗ್ರಂಥಗಳು ಯಥೇಚ್ಛ ಪ್ರಮಾಣದಲ್ಲಿ ರಚನೆಯಾದದ್ದನ್ನು ಕಾಣಬಹುದು.

ಈ ಮೇಲಿನ ಉದಾಹರಣೆಯನ್ನು ಗಮನಿಸಿದಾಗ ಆಯಾ ಯುಗದಲ್ಲಿನ ಸಾಂಸ್ಕೃತಿಕ ಪರಿಸ್ಥಿತಿಯ ಒತ್ತಡಕ್ಕೆ ಅನುಗುಣವಾಗಿ ಸಾಹಿತ್ಯ ಕೃತಿಯೊಂದು ರಚನೆಯಾಗುತ್ತವೆ ಎಂಬ ಹೇಳಿಕೆಯನ್ನು ಪೂರ್ಣವಾಗಿ ಒಪ್ಪುವುದು ಕಷ್ಟಸಾಧ್ಯ. ಕವಿಯ ವೈಯಕ್ತಿಕ ಕಾಳಜಿಗಿಂತ ಆಸ್ಥಾನದ ಆಶ್ರಯದಾತರ ಮನೋಧರ್ಮ, ಅಭಿಲಾಷೆ ಇನ್ನಿತರ ಕಾರಣಗಳಿಗಾಗಿ ಕೃತಿಗಳು ರಚನೆಯಾಗಿರಬಹುದಾದ ಸಾಧ್ಯತೆಗಳು ಹೆಚ್ಚಾಗಿರುತ್ತದೆ. ಆದ್ದರಿಂದ ಸಾಂಗತ್ಯ, ಷಟ್ಪದಿ ಕೃತಿಗಳನ್ನು ಅವಲೋಕಿಸಿದಾಗ ಸೌಲಭ್ಯದ ದೃಷ್ಟಿಯಿಂದ ಒಂದು ನಿರ್ದಿಷ್ಟ ಕ್ರಮಕ್ಕೆ ಅಳವಡಿಸಿಕೊಳ್ಳಲಾಗಿದೆ ಎನಿಸುತ್ತದೆ. ಅದೇ ರೀತಿಯಾಗಿ ಜೈನ ಸಾಹಿತ್ಯವನ್ನು ಸೂಕ್ಷ್ಮವಾಗಿ ಗಮನಿಸಿದರೆ ಅಲ್ಲಿ ಧಾರ್ಮಿಕ ತಳಹದಿಗೆ ಹೊಂದಿಕೆಯಾಗುವಂತಹ ಛಂದಸ್ಸನ್ನು ಬಳಕೆ ಮಾಡಿಕೊಂಡಿರುವುದು ಕಂಡುಬರುತ್ತದೆ.

ಹಾಗೆಯೇ ಮಹಾತ್ಮೆ ಗ್ರಂಥಗಳು ಸಹ ಧರ್ಮದ ಕಾರಣಕ್ಕಾಗಿ ಇದೇ ಹಾದಿಯನ್ನು ಅನುಸರಿಸಿದಂತೆ ಭಾಸವಾಗುತ್ತದೆ. ವಾಸ್ತವವಾಗಿ ಹಲವಾರು ಸಾಂಗತ್ಯ, ಷಟ್ಪದಿ ಛಂದಸ್ಸನ್ನು ಒಳಗೊಂಡಿರುವ ಕೃತಿಗಳೇ ಧಾರ್ಮಿಕ ಅಂಶಗಳನ್ನು ಪ್ರಚುರಪಡಿಸುವ ದೃಷ್ಟಿಕೋನವನ್ನು ಹೊಂದಿದ ಕೃತಿಗಳಾಗಿ ಕಂಡುಬರುತ್ತವೆ. ಅದು ಬಹುಪಾಲು ಕಾವ್ಯಗಳಲ್ಲಿ ಕಾವ್ಯದ ಸಾಹಿತ್ಯಿಕ, ಸಾಮಾಜಿಕ ಅಂಶಗಳನ್ನು ಹಿಂದೆ ಮಾಡಿ ಧಾರ್ಮಿಕ ಅಂಶಗಳನ್ನೇ ಮುಂದು ಮಾಡಿದಂತೆ ಕಾಣುತ್ತದೆ. ಕಥೆಯ ಅಂಶ ವಿರಳವಾಗಿ ಕಾವ್ಯಾಂಶವೇ ಮೇಲಾದಂತಿದೆ. ಇಂತಹ ಹಲವಾರು ಮಹಾತ್ಮೆ ಕೃತಿಗಳು ಗಂಭೀರವಾದ ಕಾಳಜಿಗಳಿಲ್ಲದೇ ಸತ್ವಹೀನವಾಗಿ ರಾಶಿ–ರಾಶಿಯಾಗಿ ರಚನೆಯಾಗಿವೆ. ಈ ಅಂಶವನ್ನು ಸ್ಥೂಲವಾಗಿ ವಿವರಿಸುವುದಾದರೆ ಎಲ್ಲಾ ವೈಷ್ಣವ, ಶೈವ ಹಾಗೂ ವೀರಶೈವ ಕಾವ್ಯಗಳು ಧಾರ್ಮಿಕ ಅಂಶಗಳಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಲಾಗಿದೆ. ಈ ಹೇಳಿಕೆಗೆ ಯಾವೊಂದು ಧರ್ಮವು ಸಹ ಹೊರತಾಗಿಲ್ಲ. ಆಯಾ ಮತಧರ್ಮದ ಮಹಿಮೆ, ಮಹತ್ವಗಳು ಮನ್ನಣೆ ಪಡೆದುಕೊಂಡು ಕೃತಿಗಳು ರಚನೆಯಾಗಿವೆ. ಕನ್ನಡ ಸಾಹಿತ್ಯದಲ್ಲಿ ಅಷ್ಟೇ ಅಲ್ಲದೇ ಇಡೀ ಭಾರತೀಯ ಸಾಹಿತ್ಯದಲ್ಲಿ ಕೂಡ ಇಂತಹ ರಚನೆಗಳನ್ನು ಗುರುತಿಸಬಹುದು. ಸಹಜವಾಗಿಯೇ ಸಾಂಗತ್ಯ ಹಾಗೂ ಷಟ್ಪದಿ ಸಾಹಿತ್ಯ ಪ್ರಕಾರಗಳಲ್ಲಿ ಈ ಧಾರ್ಮಿಕ ಹಿನ್ನೆಲೆಯುಳ್ಳ ಸಾಹಿತ್ಯವು ಆಧ್ಯಾತ್ಮಿಕ ನೆಲೆಯಲ್ಲಿ ಅರಳಿದೆ.

ಮಹಾತ್ಮೆಯ ಕೃತಿಗಳಿಗೆ ಜೈನ ಸಾಹಿತ್ಯದ ಕಾವ್ಯಪರಂಪರೆಯು ಮಾದರಿಯಾಗಿದೆ. ನಿರೂಪಣಾ ಶೈಲಿ, ನೀತಿಯನ್ನು ಹೇಳುವಂತಹ ಕಥಾಹಂದರ, ವರ್ಣನಾತ್ಮಕವಾಗಿ ಕಥೆಯೊಳಗೆ ಕಥೆಗಳನ್ನು ನಿರೂಪಿಸುವ ಚೌಕಟ್ಟನ್ನು ಗಮನಿಸಿದರೆ, ಇದು ಜೈನ ಮಾದರಿಯ

ಕಾವ್ಯಪದ್ಧತಿಯ ಅನುಕರಣೆ ಎನ್ನಬಹುದು. ಕಥೆಯ ವಸ್ತು-ವಿಷಯವನ್ನು ಆಯಾ ಧಾರ್ಮಿಕತೆಗೆ ಅನುಗುಣವಾಗಿ ಹೊಂದಿಕೆಯಾಗುವಂತೆ ಅನುಸರಿಸಿಕೊಂಡು ಈ ನೆಲೆಯ ಚೌಕಟ್ಟನ್ನು ಬಳಸಿಕೊಂಡಿದ್ದಾರೆ. ಕಾವ್ಯದ ಆರಂಭದಲ್ಲಿ ಜೈನ ಕವಿಗಳು ಪಂಚಮೇಷ್ಠಿಗಳು, ಪೂರ್ವ ಜೈನಾಚಾರ್ಯರು, ಪೂರ್ವ ಕವಿಗಳನ್ನು ಸ್ಮರಿಸಿದರೆ; ಶೈವರು ತ್ರಿಷಷ್ಠಿ ಮಹಾಪುರುಷರು, ಪಂಚಾಚಾರ್ಯರು, ಗುರುವೃಂದದವರು, ವಂಶಾವಳಿ, ಪೂರ್ವ ಕವಿಗಳಿಗೆ ನಮಿಸಿದ್ದಾರೆ. ವೈಷ್ಣವರು ಲೋಕದ ಸೃಷ್ಟಿ, ಆಳ್ವಾರರುಗಳ ಹಿನ್ನೆಲೆ, ಗುರು, ಮಠ, ಸ್ವಾಮಿಗಳನ್ನು ನೆನೆಯುತ್ತಾ ವಂಶಾವಳಿಯ ಮೂಲಕ ಅವರ ಧರ್ಮವನ್ನು ಕೃತಿಯಲ್ಲಿ ಒಡಮೂಡಿಸಿದ್ದಾರೆ. ಈ ನೆಲೆಯಲ್ಲಿ ಸೂಕ್ಷ್ಮವಾಗಿ ಗಮನಿಸಿದಾಗ ಜೈನ ಮೇಲ್ಪಂಕ್ತಿಯಾದಿಯಾಗಿ ಶೈವ, ವೈಷ್ಣವ, ವೀರಶೈವ ಕವಿಗಳು ತಮ್ಮ ಸಾಹಿತ್ಯ ರಚನೆಯಲ್ಲಿ ತಮ್ಮ ತಮ್ಮ ಧಾರ್ಮಿಕ ಹಿತಾಸಕ್ತಿಗಳನ್ನೇ ಕೇಂದ್ರವಾಗಿರಿಸಿದ್ದಾರೆ.

ಸಂಸ್ಕೃತದಿಂದ ಕೂಡಿದ ಪುರಾಣ ವಸ್ತುವನ್ನು ಕಾವ್ಯಕ್ಕೆ ಹೊಂದಿಕೆಯಾಗುವಂತೆ ಬಳಸಿಕೊಂಡರೂ ಸಹ ಭಾಷೆಯಲ್ಲಿ ಕನ್ನಡವನ್ನು ಹೆಚ್ಚಾಗಿ ಬಳಸಿಕೊಂಡು ಸಂಸ್ಕೃತವನ್ನು ಅಲ್ಲಲ್ಲಿ ತಂದಿದ್ದಾರೆ. ಇಂತಹ ಕಾವ್ಯದ ರಚನೆಕಾರರನ್ನು ಬ್ರಾಹ್ಮಣರು ಎಂಬ ವಿಶೇಷಣವನ್ನಿತ್ತು ವಿಭಜನೆ ಮಾಡುವುದಕ್ಕಿಂತ ವೈದ್ಧಿಕ ಕವಿಗಳು, ಶೈವ ಕವಿಗಳು ಎಂಬ ನಾಮ ನಿರೂಪಣೆಯಿಂದ ಕರೆಯುವುದು ಅರ್ಥಪೂರ್ಣವಾದೀತು ಎಂದೆನಿಸುತ್ತದೆ. ವೈದ್ಧಿಕರಲ್ಲಿಯೇ ದ್ವೈತ, ಅದ್ವೈತ, ವಿಶಿಷ್ಟಾದ್ವೈತರನ್ನು ಕಂಡರೆ, ವೀರಶೈವರಲ್ಲಿ ಶೈವ, ವೀರಶೈವರು ಎಂಬ ಪ್ರಮುಖ ಪಂಗಡಗಳನ್ನು ಕಾಣಬಹುದಾಗಿದೆ. ಅದರಲ್ಲೂ ವೈಷ್ಣವ ಸಾಹಿತ್ಯಕ್ಕೆ ಕನ್ನಡದಲ್ಲಿ ಒಂದು ಸರಿಯಾದ ನೆಲೆಯನ್ನು ದೊರಕಿಸಿಕೊಟ್ಟವರಲ್ಲಿ ಚಿಕ್ಕುಪಾಧ್ಯಾಯ ಅಗ್ರಗಣ್ಯ ವ್ಯಕ್ತಿಯಾಗಿ ನಿಲ್ಲುತ್ತಾನೆ.

ಇವನ ಕಾಲಘಟ್ಟದಲ್ಲೇ ಹಲವಾರು ಮಹಾತ್ಮ್ಯೆ ಕೃತಿಗಳು ಹುಟ್ಟಿಕೊಂಡವು. ಧರ್ಮವೇ ಮೇಲಾಗಿ ಚರಿತ್ರೆಯೇ ಗೌಣವಾಗಿರುವ ಅನೇಕ ಕಾವ್ಯಗಳಿವೆ. ಅಂತಹ ಕಾವ್ಯಗಳು ಜನಪದ ಸಾಹಿತ್ಯವನ್ನು ಅರಗಿಸಿಕೊಂಡು ಜನತೆಯ ರೂಢಿಯಲ್ಲಿರುವ ಆಚಾರ-ವಿಚಾರ, ನಂಬಿಕೆ, ಸಂಪ್ರದಾಯ, ಐತಿಹ್ಯ, ಸ್ಥಳಪುರಾಣಗಳಿಂದ ಕೂಡಿದ ವಸ್ತುವಾಗಿದೆ. ಹಾಗೆಯೇ ಇತರೆ ಕೃತಿಗಳಲ್ಲಿ ಕಂಡುಬರುವಂತೆ ಈ ಕೃತಿಗಳಲ್ಲಿಯೂ ಸಹ ರಮ್ಯತೆ ಕಲಾವಂತಿಕೆ ಹಾಗೂ ರಸವಂತಿಕೆಯ ಸ್ಪರ್ಶವನ್ನು ಕಳೆದುಕೊಂಡಂತೆ ಕಾಣುತ್ತವೆ. ಆದ್ದರಿಂದಲೇ ಕನ್ನಡ ಸಾಹಿತ್ಯದಲ್ಲಿ ಇವುಗಳಿಗೆ ಮಾನ್ಯತೆ ಕಡಿಮೆ ಎಂದು ಹೇಳಿದರೆ ತಪ್ಪಾಗಲಾರದು.

ಛಂದಸ್ಸಿನಿಂದ ಕೂಡಿದ ಈ ಕೃತಿಗಳು ಭಕ್ತಿಯ ಪ್ರಮುಖ ಸ್ಥಾಯಿಭಾವದಂತೆ ಕಾಣುತ್ತವೆ. ಇಲ್ಲಿ ಸ್ವಧರ್ಮ ನಿಷ್ಠೆಯೇ ಬಹುಮುಖ್ಯವಾಗಿ ಎದ್ದುಕಾಣುತ್ತದೆ. ಧಾರ್ಮಿಕ ಭಾವನೆಯನ್ನು ಹೊಂದಿರುವ ಕವಿಗಳು ಚಿತ್ರಿಸಿರುವ ಕಾವ್ಯದ ವಸ್ತುವನ್ನು ಅರ್ಥ ಮಾಡಿಕೊಳ್ಳಲು ಕಷ್ಟಸಾಧ್ಯ. ಇಂತಹ ಸಾಧು-ಸಂತ ಕವಿಗಳು, ಮಠಾಧಿಪತಿಗಳು ಕಣ್ಣಿಗೆ ಬೀಳುವಷ್ಟು ಹೇರಳವಾಗಿ ಧಾರ್ಮಿಕ ಚಿಂತನೆಗಳನ್ನು ರಚಿಸಿದರೆ ವಿನಃ, ಮಾನವನ ಇಹದ ಬದುಕನ್ನು ಅನುಸಂಧಾನ ಮಾಡುವ ಸಾಹಿತ್ಯ ರಚನೆಯ ಗೋಜಿಗೆ ಯಾವುದೇ ಕಾರಣಕ್ಕೂ ಸಹ ಹೋಗಲಿಲ್ಲ. 'ಇವರು ಕಾವ್ಯವೆಂಬುದು ಶಾಸ್ತ್ರವಲ್ಲ, ಉಪದೇಶ ಪುರಾಣವಲ್ಲ ಎಂಬುದನ್ನು ಮರೆತದ್ದು ಇದಕ್ಕೆ ಮುಖ್ಯ ಕಾರಣ ಎನ್ನಬಹುದು.' ಸೌಂದರ್ಯ, ಆನಂದ, ರಸಾನುಭವಗಳನ್ನು ಕಾವ್ಯದಲ್ಲಿ ಅಭಿವ್ಯಕ್ತಿಸುವ ಕವಿಗಳು ಈ ಅಂಶಗಳು ಕಡಿಮೆಯಾದಾಗ ಧರ್ಮವನ್ನು ಕಾವ್ಯದೊಳಗೆ ನೀತಿ, ಶಾಸ್ತ್ರಗಳ ಮೂಲಕ ಅಭಿವ್ಯಕ್ತಿಸಲು ಬಳಕೆ ಮಾಡಿಕೊಂಡಿದ್ದಾರೆ. ಅನೇಕ ಕವಿಗಳು ಪಾಂಡಿತ್ಯ ಭಾಷೆಯ ಮೇಲಿನ ಹಿಡಿತ ಸಾಧಿಸಿದ್ದಾರೆಯೇ ಹೊರತು ಸಜೀವ ಭಾಷೆಯಾದ ಜನರ ಆಡುನುಡಿಯನ್ನು ಕಡೆಗಣಿಸಿದಂತಿದೆ. ಇನ್ನೂ ಕೆಲವರು ಈ ಜನರ ಭಾಷೆಯನ್ನೇ ಸಜೀವವನ್ನಾಗಿಸಿ ಹೆಚ್ಚು ಜನರಿಗೆ ಕಾವ್ಯವೇ ಹತ್ತಿರವಾಗುವಂತೆ ಮಾಡಿದ್ದಾರೆ. ಮಹಾತ್ಮೆಯ ರಚನೆಯಲ್ಲಿ ಕವಿಗಳು ಹೆಚ್ಚಾಗಿ ನಡುಗನ್ನಡ ಭಾಷೆಯ ಜೊತೆಗೆ ಅಲ್ಲಲ್ಲಿ ಸಂಸ್ಕೃತ ಶ್ಲೋಕಗಳನ್ನು ಬಳಸಿ ಸರಳ ಕನ್ನಡವನ್ನು ಕಾವ್ಯದಲ್ಲಿ ತುಂಬಿಕೊಡಲು ಪ್ರಯತ್ನಿಸಿದ್ದಾರೆ. ಸಂಪ್ರದಾಯಕ್ಕೆ ಕವಿಗಳು ಹೆಚ್ಚಾಗಿ ಗಂಟುಬಿದ್ದಿದ್ದರು ಎನ್ನುವುದು ಮಹಾತ್ಮೆಗಳನ್ನು ಗಮನಿಸಿದಾಗ ಕಂಡುಬರುತ್ತದೆ.

ಇದನ್ನು ಅವರ ಕಾವ್ಯದ ಆರಂಭದ ಪ್ರಾರ್ಥನಾ ಪದ್ಯಗಳು, ಪೂರ್ವಾಚಾರರ ಸ್ಮರಣೆಯ ಜೊತೆಜೊತೆಗೆ ವಂಶಾವಳಿಯನ್ನು ಹೇಳುತ್ತಾ ಕಾವ್ಯ ಪ್ರಕಾರವನ್ನು ಕಟ್ಟಲು ಉಪಯೋಗಿಸಿದ ಪಕ್ವತೆ, ತಮ್ಮ ಕಾವ್ಯಕ್ಕೆ ಆರಿಸಿಕೊಂಡ ಕಾವ್ಯದ ವಸ್ತುವಿನ ಸಾರ್ವಕಾಲಿಕ ಶಕ್ತಿ, ವಸ್ತುವನ್ನು ನಿರ್ವಹಿಸಿರುವ ರೀತಿ ಮೊದಲಾದ ಸಂಗತಿಗಳಿಂದ ಮಹಾತ್ಮೆಗಳ ವಸ್ತು ಹಲವಾರು ಕೃತಿಕಾರರಲ್ಲಿ ಇತಿಹಾಸ ಪ್ರಜ್ಞೆ ಮತ್ತು ಅಂದಿನ ಕಾಲದ ಸಾಮಾಜಿಕ ಪ್ರಜ್ಞೆಯ ಪ್ರಭಾವದ ಹಿನ್ನೆಲೆಯಲ್ಲಿ ಮೂಡಿಬಂದಿವೆ. ಇದಕ್ಕೆ ಆಯಾ ಕಾಲದ ಸತ್ವಕ್ಕೆ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಬದ್ಧತೆಗೆ ತಕ್ಕಂತೆ ವಿದ್ವಾಂಸರು ಕೃತಿಗಳನ್ನು ರಚನೆ ಮಾಡಿರುತ್ತಾರೆ ಎನ್ನುವುದು ಆಧುನಿಕ ಕಾಲದ ಚಿಂತನೆ. ಆದರೆ ಅಂದಿನ ಕಾಲದ

ಕವಿಗಳು ಈ ಮಾತಿಗೆ ವಿರುದ್ಧವಾಗಿ ಕೃತಿರಚನೆ ಮಾಡಿದ್ದರು ಎಂದು ಇಲ್ಲಿ ಕಂಡುಬರುತ್ತದೆ. ತಮ್ಮ ಸುತ್ತಮುತ್ತಲಿನ ಚರಿತ್ರೆಯ ಜೊತೆಗೆ ಸಾವಿರಾರು ವರ್ಷಗಳ ಹಿಂದಿನ ವಸ್ತುವನ್ನು ಧಾರ್ಮಿಕ ಉದ್ದೇಶಕ್ಕಾಗಿ ಆಶ್ರಯಿಸಿರುವುದು ಕಂಡುಬರುತ್ತದೆ.

ಇಂತಹ ಮಹಾತ್ಮೆಗಳ ಉಗಮಕ್ಕೆ ಹಲವಾರು ಕಾರಣಗಳು ದೊರೆಯುತ್ತವೆ. ಹಿಂದಿನ ಸಾಹಿತ್ಯದ ಪ್ರೇರಣೆ, ಪ್ರಭಾವ, ಪ್ರೋತ್ಸಾಹ, ಧರ್ಮ ಪ್ರಚಾರಕ್ಕಾಗಿ ಸಾಹಿತ್ಯವನ್ನು ಮಾಧ್ಯಮವಾಗಿ ಬಳಸಿಕೊಂಡದ್ದನ್ನು ಜೈನ ಸಾಹಿತ್ಯದಿಂದ ಮುಖ್ಯವಾಗಿ ಗಮನಿಸಬಹುದು. ತಮ್ಮ ಧರ್ಮದ ತತ್ವವನ್ನು ಸಾಮಾನ್ಯ ಜನರಿಗೆ ತಿಳಿಸಲು ಮಾರ್ಗೀಯ ಶೈಲಿಯನ್ನು ಬಿಟ್ಟುಕೊಟ್ಟು ದೇಸಿಯ ಮಟ್ಟುಗಳ ಮೂಲಕ ಕಾವ್ಯ ಮತ್ತು ಕೃತಿಗಳನ್ನು ರಚನೆ ಮಾಡಿದರು. ಇದಕ್ಕೆ ಮಾರ್ಗ ಕೃತಿಗಳು ಸಹ ಹೊರತಾಗಿಲ್ಲ. ಹೇಗೆಂದರೆ ವಿದ್ವಾಂಸರು ರಚಿಸಿದ ಹಲವಾರು ಸಂಸ್ಕೃತ ಪುರಾಣಗಳಿಂದ ಆಯ್ದ ವಿಷಯಗಳನ್ನು ನಡುಗನ್ನಡದಲ್ಲಿ ಅಭಿವ್ಯಕ್ತಗೊಳಿಸಿರುವಂತೆ ಕಾಣುತ್ತದೆ. ಜನರನ್ನು ಮೆಚ್ಚಿಸಲು, ಪ್ರಾದೇಶಿಕವಾದ ಸ್ಥಳೀಯ ಇತಿಹಾಸವನ್ನು ಪುರಾಣದೊಂದಿಗೆ ಅನುಸಂಧಾನಗೊಳ್ಳುವಂತೆ ವರ್ಣನಾತ್ಮಕ ಕಲ್ಪನೆಗಳ ಮೂಲಕ ಮಹಾತ್ಮೆ ಕೃತಿಗಳನ್ನು ರಚಿಸಲಾಗಿದೆ. ಕೆಲವು ವಿಷಯಗಳನ್ನು ತಿಳಿಸುವಾಗ ಸಂಸ್ಕೃತ ಶ್ಲೋಕಗಳನ್ನು ಅಲ್ಲಲ್ಲಿ ಬಳಸಿಕೊಂಡಿದ್ದಾರೆ. ಈ ಎಲ್ಲಾ ಅಂಶಗಳನ್ನು ಅವಲೋಕಿಸಿದಾಗ ಜೈನ ಸಾಹಿತ್ಯವು ಮಹಾತ್ಮೆಗಳನ್ನು ರಚಿಸುವ ಕೃತಿಕಾರರಿಗೆ ಮತ್ತು ಮಹಾತ್ಮೆಯಂತಹ ಸಾಹಿತ್ಯವು ಕನ್ನಡದಲ್ಲಿ ಹುಟ್ಟಲಿಕ್ಕೆ ಮೂಲ ಪ್ರೇರಣೆಯಾಗಿರಬೇಕು.

ಹೀಗೆ ಮಹಾತ್ಮೆ ಕವಿಗಳು ಪುರಾಣದ ವಸ್ತುವನ್ನೇ ಹೊಸ ಆಶಯದೊಂದಿಗೆ ಸೃಜನಶೀಲತೆಯ ಕಾವ್ಯಾತ್ಮಕ ಅಂಶಗಳಿಂದ ಹೇಳಬಹುದಾಗಿದ್ದರೂ, ಅದನ್ನು ಬಿಟ್ಟು ಯಥಾವತ್ತಾಗಿ ತಮ್ಮ ಸ್ಥಳೀಯ ಚರಿತ್ರೆಯ ಅಂಶಗಳನ್ನು ಮಹಾತ್ಮೆಗಳಲ್ಲಿ ಸಂಮ್ಮಿಲನಗೊಳಿಸುವ ಪ್ರಯತ್ನವನ್ನು ಮಾಡಿದ್ದಾರೆ. ಈ ಕಾಲಕ್ಕಾಗಲೇ ಚಂಪೂ ಕಾವ್ಯಗಳ ಹಳಗನ್ನಡವು ಅಳಿದು ಹೋಗಿ ಜನಸಾಮಾನ್ಯರ ಆಡುನುಡಿಯು ಹೆಚ್ಚು ಪ್ರಚಲಿತಕ್ಕೆ ಬರುತ್ತಲಿತ್ತು. ಇಂತಹ ಸಂದರ್ಭದಲ್ಲಿ ತ್ರಿಪದಿ, ಸಾಂಗತ್ಯ, ರಗಳೆ ಹಾಗೂ ದೇಸಿಯ ಛಂದಸ್ಸಿನ ಮಟ್ಟುಗಳನ್ನು ಬಳಸಿಕೊಂಡು ಧಾರ್ಮಿಕ ತಳಹದಿಯ ಕಾವ್ಯಗಳಿಗೆ ಬುನಾದಿಯ ಮೂಲವಾದವು. ಮುಂದೆ ಷಟ್ಪದಿಯಂತಹ ಛಂದಸ್ಸಿನಲ್ಲಿಯೂ ಇದರ ಬಳಕೆಯನ್ನು ಕಾಣಬಹುದು. ಹಿಂದಿನ ಜೈನ ಸಾಹಿತ್ಯವು ತತ್ವ, ವೈರಾಗ್ಯವನ್ನು, ಇಹಲೋಕದ ಅನನ್ಯತೆಯನ್ನು ಒತ್ತಿ ಹೇಳುವ ಸಂದರ್ಭದಲ್ಲಿ ಹೊಸದಾದ ವೀರಶೈವ ಸಾಹಿತ್ಯವು

ಇಷ್ಟ ಲಿಂಗದ ಭಕ್ತಿಯನ್ನು ಮುಖ್ಯವಾಗಿ ಪ್ರತಿಪಾದಿಸಿತು. ಅದ್ವೈತ ಸಿದ್ಧಾಂತದ ಬ್ರಹ್ಮಾಚರಣೆಯನ್ನು ಬಿಟ್ಟು ಪ್ರಾರ್ಥನೆ ಮಾಡಿ ಅರ್ಚಿಸಬಹುದಾದ ಇಷ್ಟದೈವದ ಕಲ್ಪನೆಯನ್ನು ಸಾಮಾನ್ಯರಿಗೆ ಪರಿಚಯಿಸುವ ಕೆಲಸವನ್ನು ಮಾಡಿತು.

ಹಾಗೆಯೇ ತಮಿಳು ಶೈವಧರ್ಮ ಶಿವಭಕ್ತಿಯನ್ನು ಪ್ರತಿಪಾದಿಸಿ ಅದರ ಆಚರಣೆಗೆ ತೊಡಗಿದರೆ; ಮತ್ತೊಂದು ಹದಿನಾರನೆಯ ಶತಮಾನದ ಆದಿಯಲ್ಲಿ ರಾಮಾನುಜರು ಸಾರಿದ ವೈಷ್ಣವಧರ್ಮದ ಮೂಲಕ ಭಕ್ತಿಯನ್ನು ಸಾರತೊಡಗಿದರು. ಇದರ ಪರಿಣಾಮವಾಗಿ ಅವತಾರ ಪುರುಷರಾದ ರಾಮ, ಕೃಷ್ಣರಂತಹವರನ್ನು ಪರಮದೈವವೆಂದು ಭಾವಿಸಿ ವೈಷ್ಣವರು ಇವರಿಂದಲೇ ಸಂಕಲ್ಪ ಸೃಷ್ಟಿ ಎಂದು ಪರಿಗಣಿಸಿದರು. ಮಾನವನು ತನ್ನ ಮನೋಧರ್ಮಕ್ಕೆ ಅನುಗುಣವಾಗಿ ಮಾಡಬೇಕಾದ ಕರ್ತವ್ಯವು ಪ್ರಾರ್ಥನೆ, ಉಪವಾಸ, ವ್ರತ, ತೀರ್ಥಯಾತ್ರೆ ಹೀಗೆ ಹಲವು ಬಗೆಯ ಪೂಜೆಗಳಿಂದ ದೈವದ ಕೃಪೆಯನ್ನು ಪಡೆಯಲು ಸಾಧ್ಯವೆಂಬುದನ್ನು ಬಿತ್ತರಿಸಲು ಪ್ರಯತ್ನಿಸಿದರು. ಆ ಕಾರಣದಿಂದಾಗಿಯೇ ಧಾರ್ಮಿಕ ಕೇಂದ್ರಗಳಾದ ಪ್ರಸಿದ್ಧ ದೇವಾಲಯಗಳನ್ನು ಅವರ ಕೃತಿಯ ಕೇಂದ್ರ ವಸ್ತುಗಳನ್ನಾಗಿ ಆರಿಸಿಕೊಂಡರು. ಹೀಗೆ ಮೊದಲಿಗೆ ಸೃಷ್ಟಿಯಾದ ಸಾಹಿತ್ಯವೇ ಪುರಾಣ. ಇದರಲ್ಲಿ ದೈವಲೀಲೆಗಳನ್ನು ಹೇಳುತ್ತ ಭಕ್ತಿಯನ್ನು ಪಸರಿಸುವ ಕೀರ್ತನೆ, ಲೀಲೆ, ಪವಾಡಗಳನ್ನು ಹೇಳುವ ಮಾರ್ಗದಲ್ಲಿ ಪುರಾಣಗಳು ಹುಟ್ಟಿಕೊಂಡು ನಂತರದಲ್ಲಿ ಮುಂದುವರೆದ ಭಾಗವಾಗಿ ಅಥವಾ ಪ್ರೇರಣೆಯಂತೆ ಯಥಾರೂಪದಲ್ಲಿ ಕೂಡಿದ ಸ್ಥಳೀಯ ಚರಿತ್ರೆಯೊಂದಿಗೆ ಮಹಾತ್ಮ್ಯೆಗಳನ್ನು ಹೆಣೆದಿರುವುದು ಕಂಡುಬರುತ್ತದೆ. ಆ ನಂತರದಲ್ಲಿ ಕೃತಿ ರಚನೆಕಾರರು ಜನಮನ್ನಣೆಗಾಗಿ ವರ್ಣನಾತ್ಮಕತೆಯಿಂದ ಕೂಡಿದ ಧಾರ್ಮಿಕ ವಿಷಯಗಳನ್ನು ಕೃತಿಯಲ್ಲಿ ಮುಖ್ಯವಾಗಿ ಚಿತ್ರಿಸಿದರು. ಆ ಚಿಕ್ಕಮುಟ್ಟ ವಿಷಯಗಳೇ ಒಂದೊಂದು ವಿಶ್ವಕೋಶವಾಗಬಹುದಾದಷ್ಟು ಕೃತಿಗಳಾಗಿ ರಚನೆಯಾಗಿರುವುದನ್ನು ಕಾಣಬಹುದು. ಇಂತಹ ಕೃತಿಗಳ ಮುಖ್ಯವಾದ ವಸ್ತು ದೇವತಾ ಸ್ತೋತ್ರದಿಂದ ಕೂಡಿದ ಧಾರ್ಮಿಕ ವಿಚಾರಗಳ ಜೊತೆಗೆ ಚಾರಿತ್ರಿಕ ವಿಚಾರಗಳನ್ನು ಪ್ರಸ್ತುತಪಡಿಸುತ್ತವೆ.

ಆ ಕಾಲದಲ್ಲಿ ಭಕ್ತಿಯ ಮೂಲಕವಾಗಿ ತಮ್ಮ ಧರ್ಮ ಸಂರಕ್ಷಣೆ ಹಾಗೂ ಸಂಸ್ಕೃತಿಯನ್ನು ಉಳಿಸುವ ನಿಟ್ಟಿನಲ್ಲಿ ಧಾರ್ಮಿಕ ಪಠ್ಯಗಳು ಬಹಳ ತ್ವರಿತಗತಿಯಲ್ಲಿ ರೂಪುಗೊಂಡವು. ವೈವಿಧ್ಯಮಯವಾದ ಧರ್ಮ ಮತ್ತು ಆಚರಣೆಗಳ ಮಧ್ಯೆ ತಮ್ಮ ಧರ್ಮದ ತತ್ವ-ದರ್ಶನಗಳನ್ನು ಕಾಪಾಡಿಕೊಳ್ಳುವ ಸಂದರ್ಭದಲ್ಲಿ ಹಲವು ಸಾಮರಸ್ಯಗಳು ಒದಗಿಬಂದವು. ಈ ಸಾಮರಸ್ಯವು ಮಹಾತ್ಮ್ಯೆಯ ಕೃತಿಗಳಲ್ಲಿ ಮಾತ್ರ ಸಾಧ್ಯವೇ? ಬೇರೆ

ಇನ್ನಾವುದೇ ಕೃತಿಗಳಲ್ಲಿಯೂ ಕೂಡಾ ಸಾಧ್ಯವಿಲ್ಲವೇ? ಎಂಬ ಪ್ರಶ್ನೆ ಎದುರಾಗಬಹುದು. ವೈದ್ಧಿಕ, ಶೈವ ಧರ್ಮದ ಆಚರಣೆಗಳು ಮುಕ್ತವಾಗಿ ಸರ್ವ ಜನರ ಮನಮುಟ್ಟುವಂತೆ ಧಾರ್ಮಿಕ ಕಾರ್ಯಗಳನ್ನು ಮಾಡುವಲ್ಲಿ ಯಶಸ್ವಿಯಾಗಿದ್ದವು. ಅದರಲ್ಲಿ ಮುಖ್ಯವಾಗಿ ಗುರುತಿಸಬಹುದೆಂದರೆ ಆಡಳಿತ ಭಾಷೆಯಾದ ಸಂಸ್ಕೃತದಲ್ಲಿ ಕಾವ್ಯಗಳು ಹುಟ್ಟಿಕೊಳ್ಳುತ್ತಿದ್ದವು. ನಂತರದಲ್ಲಿ ಅವುಗಳನ್ನು ಅನುಸರಿಸಿ ದೇಸಿ ಭಾಷೆಯಲ್ಲಿ ಪುರಾಣವು ಬೆಳೆದುಬಂದವು. ೧೬-೧೭ನೇ ಶತಮಾನದ ಹೊತ್ತಿಗೆ ವೈಷ್ಣವ-ಶೈವರ ಆಡಳಿತದ ಅಂಗವಾಗಿ ದೇಸಿ ಭಾಷೆಯನ್ನು ಪುರಾಣ ಮತ್ತು ಮಹಾತ್ಮ್ಯೆಗಳ ಕೃತಿಗಳ ಮೂಲಕ ಮುನ್ನೆಲೆಗೆ ತಂದರು.

### ೨.೨ ಮಹಾತ್ಮ್ಯೆಗಳ ಬೆಳವಣಿಗೆ

ನಡುಗನ್ನಡ ಮತ್ತು ಹೊಸಗನ್ನಡದಲ್ಲಿ ಅತಿ ಹೆಚ್ಚು ಮಹಾತ್ಮ್ಯೆ ಕೃತಿಗಳು ಕನ್ನಡ ನಾಡಿನಲ್ಲಿ ಹುಟ್ಟಿಬೆಳೆದಿವೆ. ಅದರಲ್ಲಿ ವೈಷ್ಣವ, ಶೈವ, ವೀರಶೈವರ ಆಧ್ಯಾತ್ಮಿಕ, ತಾತ್ವಿಕ ವಿಚಾರಧಾರೆಗಳನ್ನು ಒಳಗೊಂಡಂತೆ ಪುರಾಣ ಸಾಹಿತ್ಯದ ಒಂದು ಭಾಗವಾಗಿ ೧೬-೧೭ನೇ ಶತಮಾನದಲ್ಲಿ ಮಹಾತ್ಮ್ಯೆಗಳ ಪರಂಪರೆಯು ಮೂಡಿಬಂದಿರುವುದನ್ನು ವಿಶೇಷವಾಗಿ ಕಾಣಬಹುದು. ಇಂತಹ ಮಹಾತ್ಮ್ಯೆಗಳು ಪುರಾಣ, ಚರಿತ್ರೆ, ಐತಿಹ್ಯಗಳಿಂದ ಕೂಡಿದೆ. ಕೃತಿಕಾರರ ಧಾರ್ಮಿಕ ಆರಾಧನೆ, ದೈವ ಲೀಲೆಗಳನ್ನು ಇಟ್ಟುಕೊಂಡು ಮಹಾತ್ಮ್ಯೆಗಳು ರಚನೆಯಾಗಿವೆ. ಕಾವ್ಯಗಳಲ್ಲಿ ಧಾರ್ಮಿಕ ಸಂಪ್ರದಾಯಕ್ಕೆ ಅಂಟಿಕೊಂಡಿರುವ ನಿರ್ದಿಷ್ಟವಾಗಿಲ್ಲದ ಲೀಲೆ, ಪವಾಡ, ಚರಿತ್ರೆಯನ್ನು ಒಳಗೊಂಡ ವಸ್ತುವನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಬ್ರಹ್ಮಾಂಡದ ಸೃಷ್ಟಿಯ ವಿಚಾರಗಳು, ಧರ್ಮಗಳ ಸ್ವರೂಪ ಇನ್ನೂ ಮುಂತಾದ ವಸ್ತುವನ್ನು ಧಾರ್ಮಿಕ ಹಿನ್ನೆಲೆಯಲ್ಲಿಯೇ ಆಯ್ಕೆ ಮಾಡಿಕೊಂಡಿದ್ದಾರೆ. ಹೀಗೆ ಮುಂದುವರೆದು ಇತಿಹಾಸ, ಧರ್ಮ, ನೀತಿಯಂತಹ ವಿಚಾರಧಾರೆಗಳನ್ನು ಮಹಾತ್ಮ್ಯೆಗಳಲ್ಲಿ ತಿಳಿಸಲಾಗಿದೆ.

ಮಹಾತ್ಮ್ಯೆ ಕೃತಿಗಳಲ್ಲಿ ಧಾರ್ಮಿಕ ಶ್ರದ್ಧೆಯನ್ನು ದೇವರು-ದೇವಾಲಯಗಳಲ್ಲಿ ಇರುವಂತೆಯೇ ತೀರ್ಥಕ್ಷೇತ್ರಗಳ ಕಲ್ಪನೆಯಲ್ಲಿಯೂ ತಂದಿದ್ದಾರೆ. ಇದು ಹಿಂದಿನಿಂದಲೂ ಬೆಳೆದುಬಂದಿದೆ. ಸದ್ಭಾವನೆಯಿಂದ ಪ್ರಾರಂಭವಾಗಿರುವ ಈ ಕೃತಿಗಳು ಮುಖ್ಯವಾಗಿ ಧಾರ್ಮಿಕವಾದ ಮನೋಭಾವನೆಯನ್ನು ತಮ್ಮ ಒಡಲಾಳದಲ್ಲಿ ಇಟ್ಟುಕೊಂಡು ಬೆಳೆದುಬಂದಿವೆ. ದಕ್ಷಿಣದವರಿಗೆ ಕಾಶಿ ಪವಿತ್ರ ಕ್ಷೇತ್ರವಾದರೆ, ಉತ್ತರದವರಿಗೆ ದಕ್ಷಿಣದ ತುದಿಯಲ್ಲಿರುವ ರಾಮೇಶ್ವರ ಪುಣ್ಯಸ್ಥಳ ಎಂಬ ಕಲ್ಪನೆಯಲ್ಲಿ ಇಡೀ ಭಾರತದ ಧಾರ್ಮಿಕ ಭಾವನೆ ಬೆಳೆಯುವುದಕ್ಕೆ ಸಹಾಯಕವಾಗಿರುವ ದೂರದೃಷ್ಟಿಯನ್ನು ಇಲ್ಲಿ ಕಾಣಬಹುದು. ಹೀಗೆ

ಜನರ ಜೀವನದಲ್ಲಿ ಧಾರ್ಮಿಕವಾದ ಉದಾತ್ತ ಆದರ್ಶಗಳು ನುಸುಳಿದಾಗ ಕರ್ನಾಟಕದಲ್ಲಿ ಬಸವಣ್ಣನವರ ವೀರಶೈವ ಧರ್ಮದ ತತ್ವದಿಂದ ವರ್ಣಗಳ ತಾರತಮ್ಯವಿಲ್ಲದೇ, ಎಲ್ಲರನ್ನೂ ಶರಣತತ್ವದೊಳಗೆ ತರುವ ಧಾರ್ಮಿಕ ಐಕ್ಯತೆಯನ್ನು ಜನರಲ್ಲಿ ಮೂಡಿಸುವ ಪ್ರಯತ್ನವನ್ನು ಮಾಡಿದರು. ಇದು ಕರ್ನಾಟಕದಲ್ಲಿ ಮಾತ್ರವಲ್ಲ, ಅಖಂಡ ಭರತಖಂಡದ ಇತಿಹಾಸದಲ್ಲಿಯೇ ಇದೊಂದು ಧಾರ್ಮಿಕವಾದ ಅನನ್ಯತೆಯನ್ನು ಮೂಡಿಸಿದ ಅದ್ವಿತೀಯ ಯುಗ. ಮುಂದೆ ಕನ್ನಡ ಸಾಹಿತ್ಯದಲ್ಲಿ ಶರಣ ಸಾಹಿತ್ಯದ ಕಾಲಘಟ್ಟವನ್ನು ನೋಡುವಾಗ ಸಾಮಾಜಿಕ ಕಾಳಜಿಯು ಕಂಡುಬಂದರೂ ಅಂತಿಮವಾಗಿ ಅದು ಧರ್ಮ, ತತ್ವ, ಪುಣ್ಯಪುರುಷರ ವಿವರವಾಗಿ ಅದು ಪುರಾಣದಂತೆ ಕಂಡುಬರುತ್ತದೆ.

೧೨ನೇ ಶತಮಾನ ಎಂದ ತಕ್ಷಣವೇ ನಮಗೆ ನೆನಪಿಗೆ ಬರುವಂತಹದ್ದು ಕಲ್ಯಾಣದಲ್ಲಿ ನಡೆದ ಧಾರ್ಮಿಕ ಕ್ರಾಂತಿ. ಅಲ್ಲದೇ ಇದರ ಪ್ರಭಾವದಿಂದ ಆಂಧ್ರಪ್ರದೇಶ, ಉತ್ತರ ಭಾಗ ಮೊದಲಾದ ಕಡೆಗಳಲ್ಲೂ ಹರಡಿದ ಚಳುವಳಿಯ ತೀವ್ರವಾದ ಪರಿಣಾಮಗಳು ದಕ್ಷಿಣದಲ್ಲಿ ಪ್ರಬಲವಾಗಿದ್ದ ಹೊಯ್ಸಳ ಸಾಮ್ರಾಜ್ಯ ಕರ್ನಾಟಕವನ್ನು ತನ್ನ ಪ್ರಭಾವಕ್ಕೆ ಒಳಗಾಗುವಂತೆ ಮಾಡಿಕೊಂಡಿತು. ಈ ವೇಳೆಗೆ ಹೊಯ್ಸಳರಲ್ಲಿ ವಿಷ್ಣುವರ್ಧನ ಹಾಗೂ ಇನ್ನಿತರ ಪ್ರಮುಖ ರಾಜರುಗಳು ಆಳ್ವಿಕೆಯನ್ನು ನಡೆಸಿದ್ದರು. ಧಾರ್ಮಿಕತೆಯ ಹಿನ್ನೆಲೆಯಿಂದ ಹೊಯ್ಸಳ ಸಾಮ್ರಾಜ್ಯದ ಕಾಲವು ಬಹಳ ಪ್ರಮುಖವಾದ ಕಾಲ ಎನ್ನಿಸುತ್ತದೆ. ಇಡೀ ಭರತ ಖಂಡದಲ್ಲಿಯೇ ಇಂತಹ ಕರ್ನಾಟಕದಲ್ಲಿ ಧಾರ್ಮಿಕ ಘಟನೆಗಳು ಈ ಕಾಲದಲ್ಲಿ ಸಂಭವಿಸಿದವು.

ಬಸವಣ್ಣ ಅವರ ಕಾರ್ಯಕ್ಷೇತ್ರ ಒಂದು ಕಡೆ ಶೈವ ಧರ್ಮದ ಮೇಲೆ ಪ್ರಭಾವವನ್ನು ಬೀರಿದರೆ, ಮತ್ತೊಂದು ಕಡೆ ಅದಕ್ಕಿಂತ ಪೂರ್ವದಲ್ಲಿ ತಮಿಳುನಾಡಿನಿಂದ ಕರ್ನಾಟಕಕ್ಕೆ ಬಂದಂತಹ ಶ್ರೀ ರಾಮಾನುಜಾಚಾರ್ಯರ ವೈಷ್ಣವ ಧರ್ಮದ ಪ್ರಭಾವ ಹೊಯ್ಸಳ ದೊರೆಯಾದ ವಿಷ್ಣುವರ್ಧನನ ಮೇಲೆ ಅಗಾಧವಾಗಿತ್ತು. ಇದರಿಂದ ವಿಷ್ಣುವರ್ಧನನು ವೈಷ್ಣವ ಧರ್ಮವನ್ನು ರಾಜಧರ್ಮವನ್ನಾಗಿ ಸ್ವೀಕರಿಸಿದನು. ಇದು ಜೈನ ಧರ್ಮಕ್ಕೆ ಪ್ರತಿಕೂಲವಾಗಿ ಪರಿಣಮಿಸಿದಂತೆ ಕಾಣುತ್ತದೆ. ಹೀಗೆ ಹೊಯ್ಸಳರ ಕಾಲದಲ್ಲಿ ಎಲ್ಲಾ ಧರ್ಮಗಳು ರಾಜಾಶ್ರಯವನ್ನು ಪಡೆದುಕೊಂಡು ಮುನ್ನೆಲೆಗೆ ಬಂದಿರುವುದನ್ನು ಇತಿಹಾಸದಿಂದ ಕಾಣಬಹುದು. ವಿಷ್ಣುವರ್ಧನನ ಮೇಲೆ ಅನೇಕ ಕತೆಗಳು, ಪವಾಡಗಳು ಇರುವುದನ್ನು ಗಮನಿಸಬಹುದು. ಇವನು ಜೈನ ಧರ್ಮದ ವಿರುದ್ಧ ತಿರುಗಿ ನಿಂತು ಬಸದಿಗಳನ್ನು ಕೆಡವಿಸಿ ಆ ಕಲ್ಲಿನಿಂದ ತೊಂಡನೂರು ಕೆರೆಯನ್ನು ಕಟ್ಟಿಸಿದನೆಂಬ

ಪ್ರತೀತಿ ಇದೆ. ನಂತರ ಶುಭಚಂದ್ರಚಾರ್ಯರೆಂಬ ಜೈನ ಸನ್ಯಾಸಿಯ 'ಮಹಿಮಾನ್ವಿಕ ಪವಾಡ'ದಿಂದ ಮತ್ತೆ ಈತನಿಗೆ ಒಳ್ಳೆಯ ಬುದ್ಧಿ ಬಂದಿತೆಂದು ಹೇಳುವ ಅನೇಕ ಪುರಾಣ ಕಥೆಗಳು ಇವೆ. ಹೀಗೆ ಧಾರ್ಮಿಕವಾದ ಕಲಹ, ರಾಜಕೀಯ ಸಂಘರ್ಷವನ್ನು ಹೊಯ್ಸಳರ ಕಾಲದಲ್ಲಿ ನೋಡಬಹುದು. ಈ ಎಲ್ಲಾ ಅಂಶಗಳು ೧೬-೧೭ನೇ ಶತಮಾನದ ಹೊತ್ತಿಗೆ ಅಗಾಧವಾದ ಪ್ರಭಾವವನ್ನು ಮತ್ತು ಪರಿಣಾಮವನ್ನು ಬೀರಿದ ಕಾರಣದಿಂದ ಅನೇಕ ಧರ್ಮಗಳು ತಮ್ಮ ಧಾರ್ಮಿಕ ಚಿಂತನೆಗಳು, ತತ್ವಗಳು, ಆಚರಣೆಗಳು ಹಾಗೂ ಸಮಾಜದಲ್ಲಿ ತಮ್ಮ ಅಸ್ತಿತ್ವವನ್ನು ಕಾಪಾಡಿಕೊಳ್ಳಲು ತಲೆಯೆತ್ತಿದ್ದನ್ನು ಇಲ್ಲಿ ಮುಖ್ಯವಾಗಿ ಗಮನಿಸಬೇಕಾಗುತ್ತದೆ.

ಇಂತಹ ಮತಗಳಲ್ಲಿ ಒಂದೊಂದರಲ್ಲಿಯೂ ಹಲವು ಉಪಭೇದಗಳಿರುವುದನ್ನು ಮುಖ್ಯವಾಗಿ ಕಾಣಬಹುದಾಗಿದೆ. ತಮಿಳಿನ ಶೈವ ಸಿದ್ಧಾಂತಗಳು ಹಾಗೆಯೇ ವೈಷ್ಣವರಲ್ಲಿ ರಾಮಾನುಜರ ಅನುಯಾಯಿಗಳು, ಮಾಧ್ವರು ಪ್ರಮುಖರಾಗಿದ್ದರು. ಇಷ್ಟೇ ಅಲ್ಲದೇ ವಿಜಯನಗರ ಕಾಲದಲ್ಲಿ ಜೈನ ಧರ್ಮವೂ ಸಹ ಅರಸರ ಪೋಷಣೆಯಲ್ಲಿ ಬೆಳೆದುಬಂದಿತ್ತು. ವಿಜಯನಗರದ ರಾಜರುಗಳು ಹಿಂದೂ ಧರ್ಮದ ಎಲ್ಲಾ ಶಾಖೆಗಳನ್ನು ತೆರೆದರೂ, ಜೈನ ಧರ್ಮೀಯರನ್ನು ಸಮಾನತೆಯ ಭಾವನೆಯಿಂದ ನಡೆಸಿಕೊಳ್ಳುತ್ತಲಿದ್ದರು. ೧೩೬೮ರಲ್ಲಿ ವೈಷ್ಣವರಿಗೂ, ಜೈನರಿಗೂ ಉಂಟಾದ ವಿವಾದವನ್ನು ಬುಕ್ಕರಾಯರು ಪರಿಹರಿಸಿ ಎರಡೂ ಧರ್ಮಗಳಲ್ಲಿ ಸ್ನೇಹ ಬೆಳೆಯುವಂತೆ ಮಾಡಿದ ಘಟನೆ ಶಾಸನೋಕ್ತವಾಗಿ ಪ್ರಸಿದ್ಧವಾಗಿದೆ. 'ದೇವನೊಬ್ಬ ನಾಮ ಹಲವು' ಎಂಬ ಆದರ್ಶವನ್ನು ಅವರು ನಿಷ್ಠವಾಗಿ ಪರಿಪಾಲಿಸಿದರು. ವಿಜಯನಗರದ ನಂತರದ ದಿನಗಳಲ್ಲಿ ಕ್ರಿಶ್ಚಿಯನ್ ಧರ್ಮವು ಹೆಚ್ಚಾಗಿ ಬೆಳವಣಿಗೆಯನ್ನು ಪಡೆದುಕೊಂಡಿತು. ಪ್ರಬಲ ವಿರೋಧಿಗಳಾಗಿದ್ದ ಮುಸ್ಲಿಂರ ಮೇಲೆಯೂ ಸಹ ಯಾವುದೇ ರೀತಿಯ ಧಾರ್ಮಿಕವಾದ ವಿರೋಧವು ಇವರ ಕಾಲದಲ್ಲಿ ಇರಲಿಲ್ಲ.

ವಿಜಯನಗರ ಅರಸರ ನಂತರದ ಕಾಲದಲ್ಲಿ ಧಾರ್ಮಿಕವಾಗಿ ಅನೇಕ ಬದಲಾವಣೆಗಳು ಉಂಟಾಗಿದ್ದನ್ನು ಕಾಣಬಹುದು. ಸಂಗಮ ವಂಶದವರು ಧಾರ್ಮಿಕವಾಗಿ ಶೈವಭಕ್ತಿಯನ್ನು ಅನುಸರಿಸಿದರೆ, ಅವರ ನಂತರ ಬಂದಂತಹ ರಾಜರುಗಳು ವೈಷ್ಣವ ಭಕ್ತಿಪರಂಪರೆಯನ್ನು ಅನುಸರಿಸಿದರು. ಈ ಪ್ರಕ್ರಿಯೆಯನ್ನು ಅಂದರೆ ಶೈವ ಧಾರ್ಮಿಕ ಆಚರಣೆಗಳಿಂದ ವೈಷ್ಣವ ಆಚರಣೆಗಳ ಕಡೆಗೆ ಒಲವನ್ನು ಹೊಂದಿರುವುದನ್ನು ಅವರ ಕಾಲದ ಮಹಾತ್ಮೆ ಕೃತಿಗಳ ಮೂಲಕ ಅರಿಯಬಹುದು. ಈ ಸಮಯಕ್ಕಾಗಲೇ ವಿಜಯನಗರ ಸಾಮ್ರಾಜ್ಯದ

ಧಾರ್ಮಿಕ ಕ್ಷೇತ್ರದಲ್ಲಿ ಮಹತ್ತರವಾದ ಬದಲಾವಣೆಯೊಂದು ಕಂಡುಬಂದಿತು. ಅದೇ ದಾಸಕೂಟದ ಉಗಮ. ೧೨ನೇ ಶತಮಾನದಲ್ಲಿ ಶರಣರು ಧರ್ಮದ ಉದಾತ್ತ ತತ್ವಗಳನ್ನು ಜನಸಾಮಾನ್ಯರಲ್ಲಿ ಭಿತ್ತಿದಂತೆ ೧೫-೧೬ಶತಮಾನದಲ್ಲಿ ವ್ಯಾಸರಾಯರ ನೇತೃತ್ವದಲ್ಲಿ ಪುರಂದರದಾಸರು, ಕನಕದಾಸರಂತಹ ಅನೇಕ ದಾಸರು ತಮ್ಮ ಕೀರ್ತನೆಗಳ ಮೂಲಕ ಧರ್ಮವನ್ನು ಜನರ ಮನೆ ಮತ್ತು ಮನಸ್ಸಿನಲ್ಲಿ ನೆಲೆಯೂರುವಂತೆ ಮಾಡಿದರು. ಮಧ್ವಾಚಾರ್ಯರು ಪ್ರತಿಪಾದಿಸಿದ ದ್ವೈತ ತತ್ವದ ಹಿನ್ನೆಲೆಯಲ್ಲಿಯೇ ಬಂದಂತಹ ಈ ಭಕ್ತಿ ಸಾಹಿತ್ಯ ಪರಂಪರೆಯು ಆಧ್ಯಾತ್ಮಿಕ ವಿಚಾರಧಾರೆಯಿಂದ ಅಪಾರ ಜನಮನ್ನಣೆಯನ್ನು ಪಡೆದುಕೊಂಡಿತು.

ವಿಜಯನಗರ ಕಾಲಕ್ಕಾಗಲೇ ಎಲ್ಲಾ ದೇವಾಲಯಗಳು ಮತ್ತು ಮಠಗಳು ಧರ್ಮ ಪ್ರಚಾರದಲ್ಲಿ ತೊಡಗಿಕೊಂಡಿದ್ದವು. ಅವುಗಳಿಂದ ಸಮಾಜದಲ್ಲಿ ಆಗುತ್ತಿದ್ದ ಸಾಂಸ್ಕೃತಿಕ ಪ್ರಭಾವದ ಒಳಿತಿನ ಜೊತೆಗೆ ಸಮಾಜವನ್ನು ಒಡೆದು ಆಳುವ ಸ್ವಾರ್ಥ ದೃಷ್ಟಿಕೋನವು ಅಷ್ಟೇ ಪ್ರಮಾಣದಲ್ಲಿ ಇತ್ತು. ದೇವರು-ಧರ್ಮದ ಹೆಸರಿನಲ್ಲಿ ಸಮಾಜದಲ್ಲಿನ ಜನರನ್ನು ಅಜ್ಞಾನದಲ್ಲಿಟ್ಟು, ಹೆಜ್ಜೆ-ಹೆಜ್ಜೆಗೂ ಅವರನ್ನು ಪರಾವಲಂಬಿಗಳನ್ನಾಗಿ ಮಾಡುವ ಕೆಲಸವನ್ನು ಅತೀ ಯಶಸ್ವಿಯಿಂದ ಮಾಡಿದ್ದರು. ದೇವಾಲಯವನ್ನು ಆಳುತ್ತಿದ್ದ ಪುರೋಹಿತರು, ಪೂಜಾರಿಗಳು, ಶಾಸ್ತ್ರಿಗಳು ಜನರಲ್ಲಿ ಮಂಗಳ, ಅಮಂಗಳ ಶಕುನಗಳು, ಮೂಹೂರ್ತಗಳ ಮೂಲಕ ಜನರಲ್ಲಿ ಧಾರ್ಮಿಕವಾದ ಅಚಲ ಶ್ರದ್ಧೆಯನ್ನು ಹುಟ್ಟುಹಾಕಿದರು. ಅವರು ಮಾತನಾಡಿದರೆ ಜನರೇ ಅವರ ಬಳಿ ಬರುವಂತೆ ಆಕರ್ಷಿಸುತ್ತಿದ್ದರು. ಇದೇ ಪ್ರವೃತ್ತಿಯನ್ನು ಮಹಾತ್ಮ್ಯೆ ಕೃತಿಗಳಲ್ಲೂ ಅನುಸರಿಸಿದಂತೆ ಕಾಣುತ್ತದೆ. ಉಪನಿಷತ್ತು, ಭಗವದ್ಗೀತೆ ಮೊದಲಾದ ಮಹಾಗ್ರಂಥಗಳ ಆದರ್ಶಗಳೊಂದಿಗೆ ರಾಮಾಯಣ, ಮಹಾಭಾರತ, ಪುರಾಣಗಳನ್ನು ಮುಖ್ಯವಾಗಿ ಜನರ ಮನಸ್ಸಿನಲ್ಲಿ ನೆಲಯೂರುವಂತೆ ಮಾಡಿದರು.

"ಎರಡನೇ ದೇವರಾಯನು ಮುಸ್ಲಿಂರನ್ನು ತನ್ನ ಸ್ನೇಹಿತರನ್ನಾಗಿ ಮಾಡಿಕೊಳ್ಳಲು ಪ್ರಯತ್ನಿಸಿದ್ದನು. ಕುರಾನಿನ ಪ್ರತಿಯನ್ನು ತನ್ನ ಸಿಂಹಾಸನದ ಮುಂದಿಟ್ಟುಕೊಂಡು ಆಡಳಿತವನ್ನು ನಡೆಸುತ್ತಿದ್ದನು ಎಂದು ಪೆರಿಸ್ತಾ ಉಲ್ಲೇಖಿಸುತ್ತಾನೆ. ಮುಸ್ಲಿಂರಿಗಾಗಿ ಮಸೀದಿಗಳನ್ನು ಕಟ್ಟಿಸಿಕೊಟ್ಟು ಧರ್ಮದ ಆಂತರಿಕ ಮೌಲ್ಯವನ್ನು, ತನ್ನ ಸಮಾನತೆಯ ಔದಾರ್ಯತೆಯನ್ನು ಮರೆದನು."[೬] ಎಂದು ತಿಳಿಸಿದ್ದಾನೆ.

ಮಹಾತ್ಮ್ಯೆ ಕೃತಿಗಳಲ್ಲಿ ಅಲ್ಪಸ್ವಲ್ಪ ವಸ್ತು-ವಿಷಯಗಳನ್ನು ಈ ಮೇಲೆ ತಿಳಿಸಿದ ಪುರಾಣ ಕೃತಿಗಳಿಂದ ತೆಗೆದುಕೊಂಡು ಅರ್ಥವಿಲ್ಲದ ಆಚರಣೆಗಳನ್ನು ಇಲ್ಲಿ ಪ್ರಧಾನವನ್ನಾಗಿ

ಮಾಡಲಾಗಿದೆ. ಮಕ್ಕಳಾಗದವರು, ಮದುವೆಯಾಗದವರು, ರೋಗ ಪೀಡಿತರು ತೀರ್ಥಕ್ಷೇತ್ರದಲ್ಲಿ ಸ್ನಾನವನ್ನು ಮಾಡಿದರೆ ಅದು ನಿವಾರಣೆಯಾಗಿ ಅವರಿಗೆ ಫಲ ಲಭಿಸುತ್ತದೆ, ಭಾಗ್ಯವಂತರಾಗುತ್ತಾರೆ ಎಂಬಂತಹ ಮೂಢನಂಬಿಕೆಗಳನ್ನು ಉದಾತ್ತವಾಗಿ ಉನ್ನತೀಕರಿಸಿ ಹೇಳಿರುವುದನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಈ ಆಚರಣೆಗಳಿಗೆ ಅಂದಿನ ಕಾಲಘಟ್ಟದಲ್ಲಿ ಜನರ ಜೀವನಕ್ಕೆ, ಅವರ ಬದುಕಿನ ಸ್ವರೂಪಕ್ಕೆ ನಿರ್ಣಾಯಕ ಶಕ್ತಿಯಾಗಿ ಬೆಳೆದಿರಬೇಕು. ಧರ್ಮವನ್ನೇ ತಮ್ಮ ಜೀವನದ ಸರ್ವಸ್ವವನ್ನಾಗಿ ಅಂದಿನ ರಾಜಕೀಯ ಶಕ್ತಿಗಳು ಆರಿಸಿಕೊಂಡಂತೆ ಕಾಣುತ್ತದೆ. ಆದ್ದರಿಂದ ಜೀವನದ ಎಲ್ಲಾ ಹಂತಗಳಲ್ಲೂ ಧರ್ಮವೇ ಹಾಸುಹೊಕ್ಕಾಗಿ ಪರಿಣಮಿಸುವಂತಾಯಿತು. ಒಂದು ಕಡೆಯಲ್ಲಿ ಇದರಿಂದ ಜನರ ಮೇಲೆ ಒಳ್ಳೆಯ ಪರಿಣಾಮಗಳೇ ಆದರೂ, ಇನ್ನೊಂದು ರೀತಿಯಲ್ಲಿ ಸಾಮಾಜಿಕ ಜನಜೀವನದಲ್ಲಿ ಅಂಧ ಶ್ರದ್ಧಾಚರಣೆಯು ಮುಂದುವರೆಯಿತು. ಅದನ್ನು ಧಿಕ್ಕರಿಸುವ ಪ್ರಯತ್ನಗಳು ಕಾಲದಿಂದ ಕಾಲಕ್ಕೆ ನಡೆಯುತ್ತಾ ಬಂದಿದ್ದರೂ ಅದು ಸಂಪೂರ್ಣವಾಗಿ ನಿವಾರಣೆಯಾಗಿಲ್ಲ.

ಈ ಹಂತದಲ್ಲಿ ವಿಜಯನಗರ ಕಾಲವನ್ನು ಗಮನಿಸಿದರೆ ಜಾತಿಪದ್ಧತಿಯು ಸಮಾಜದಲ್ಲಿ ಅತ್ಯಂತ ಜಟಿಲವಾಗಿರುವುದನ್ನು ಕಾಣಬಹುದು. ಚಾತುರ್ವರ್ಣಗಳಲ್ಲದೇ ಅವುಗಳಲ್ಲೇ ಬೆಳೆದಿದ್ದ ಅಂತರ್ವಿಭಾಗಗಳು ಇನ್ನೂ ಹೆಚ್ಚಾಗಿದ್ದವು. ವೃತ್ತಿಗನುಗುಣವಾಗಿ ಜಾತಿಗಳನ್ನು ವಿಂಗಡಿಸಲಾಗಿತ್ತು. ಮತ್ತೆ ಅವುಗಳಲ್ಲಿ ಉಪಜಾತಿಗಳು ಏರ್ಪಟ್ಟಿದ್ದವು. ಸಮಾಜವನ್ನು ಈ ಎಲ್ಲಾ ಕಾರಣಗಳು ಸೇರಿ ಬೇರ್ಪಡಿಸಿದ್ದವು. ಅದುವರೆಗೆ ಇದ್ದಂತೆ ಸಮಾಜದಲ್ಲಿ ಬ್ರಾಹ್ಮಣ್ಯತ್ವವನ್ನು ಹೊಂದಿದ್ದವರು ಶ್ರೇಷ್ಠ ವರ್ಗದವರಾಗಿದ್ದರು. ಇದನ್ನು ಮಹಾತ್ಮೆಯ ಎಲ್ಲಾ ಕೃತಿಗಳಲ್ಲೂ ತಿಳಿಸಲಾಗಿದೆ. ಶ್ರೇಷ್ಠತೆ, ಆಚಾರ–ವಿಚಾರ, ಸಂಪ್ರದಾಯದ ಬಗ್ಗೆ ಉದಾಹರಣೆಗಳ ಮೂಲಕ ಕತೆ–ಉಪಕತೆಗಳನ್ನು ಸೇರಿಸಿ ಹೇಳಿರುವುದನ್ನು ಗ್ರಹಿಸಬಹುದು. ಹೀಗೆ ಬ್ರಾಹ್ಮಣರ ವೇದಾಧ್ಯಯನದ ಧರ್ಮಬೋಧೆ, ದೇವಾಲಯಗಳಲ್ಲಿ ಅರ್ಚನೆ ಇನ್ನು ಮೊದಲಾದವು ಬ್ರಾಹ್ಮಣರ ಸ್ವತ್ತಾಗಿದ್ದವು. ಅಂದರೆ ಈ ಎರಡೂ ಕ್ಷೇತ್ರದಲ್ಲಿ ಸರಿಸಮಾನವಾಗಿ ಸ್ಪರ್ಧಿಸಿ ನಿಂತಿದ್ದವರೆಂದರೆ ವೀರಶೈವರು ಮತ್ತು ವೈಷ್ಣವರು. (ಈ ಕಾರಣಕ್ಕಾಗಿಯೇ ಮಹಾತ್ಮೆಗಳಲ್ಲಿ ವೈಷ್ಣವರನ್ನು ಉನ್ನತೀಕರಿಸುವಾಗ ಶೈವರನ್ನು ಕೆಳಮಟ್ಟದಲ್ಲಿಯೂ, ಶೈವರನ್ನು ಉನ್ನತೀಕರಿಸಿ ಹೇಳುವಾಗ ವೈಷ್ಣವರನ್ನು ಕೆಳಮಟ್ಟದಲ್ಲಿಯೂ ಚಿತ್ರಿಸಲಾಗಿದೆ.) ವೀರಶೈವರಲ್ಲಿ ಅನೇಕ ಮಠಗಳು ಸ್ಥಾಪನೆಯಾಗಿ ಜನಸಾಮಾನ್ಯರಲ್ಲಿ ಧರ್ಮವನ್ನು, ವಿದ್ಯೆಯನ್ನು ಹರಡಲು ಪ್ರಯತ್ನಿಸುತ್ತಿದ್ದವು. ಮತ್ತೊಂದು ಕಡೆಯಲ್ಲಿ

ಬ್ರಾಹ್ಮಣರು ಧಾರ್ಮಿಕ ಕ್ಷೇತ್ರದಲ್ಲಿ ಪ್ರಬಲರಾಗುತ್ತಾ ರಾಜಕೀಯ ಕ್ಷೇತ್ರವನ್ನು ಪ್ರವೇಶ ಮಾಡಿ ತಮ್ಮ ಹಿಡಿತವನ್ನು ಸಾಧಿಸಲು ಪ್ರಯತ್ನಿಸುತ್ತಿದ್ದರು. ಮಾಧ್ವಚಾರ್ಯರು, ರಾಮಾನುಜಚಾರ್ಯರು ರಾಜಕೀಯದಲ್ಲಿ ಪ್ರಮುಖ ಪಾತ್ರವಹಿಸಿದುದು ಬಹುಮುಖ್ಯವಾಗಿ ಕಾಣಸಿಗುತ್ತದೆ. ಹಾಗೆಯೇ ಸಾಳ್ವ ತಿಮ್ಮ, ಗೋಪಮಂತ್ರಿ, ಗೋವಿಂದರಾಜ, ಚಿಕ್ಕುಪಾಧ್ಯಾಯ ಇವರೆಲ್ಲ ಮಹಾತ್ಮೆಯ ಕೃತಿಕಾರರು ಜೊತೆಗೆ ಅಂದಿನ ಸಾಮ್ರಾಜ್ಯದ ಅರಸರಲ್ಲಿ ಉನ್ನತ ಹುದ್ದೆಗಳನ್ನು ಅಲಂಕರಿಸಿದ್ದವರೂ ಸಹ ಆಗಿದ್ದರು.

ಇವರು ಧಾರ್ಮಿಕವಾದ ಪುರಾಣ, ಐತಿಹ್ಯ, ಸ್ಥಳಚರಿತ್ರೆಯಂತಹ ಕಾವ್ಯ-ಕೃತಿಗಳನ್ನೇ ಸಮಾಜಕ್ಕೆ ನೀಡಿದರೂ ಸಹ, ನಿರೂಪಣೆಯ ಶೈಲಿಯು ಸೃಜನಶೀಲ ಸಾಮರ್ಥ್ಯದ ಪ್ರತೀಕದಂತಿರುವ ಮಾನವೀಯ ಆಲೋಚನೆಗಳು ಮೂರ್ತರೂಪವನ್ನು ಇಲ್ಲಿ ಪಡೆದುಕೊಂಡಂತಿವೆ. ಸಾಹಿತ್ಯ ಮತ್ತು ಇತಿಹಾಸಗಳಲ್ಲಿ ಮುಖ್ಯವಾಗಿ ಬೇರೆಯಾಗಿರದ ಈ ಮಹಾತ್ಮೆಗಳು ತತ್ವಶಾಸ್ತ್ರವನ್ನು ಒಳಗೊಂಡು ಮನುಷ್ಯರ ಜೈವಿಕ ಸೃಷ್ಟಿಯಾಚೆಯ ಬದುಕಿನ ಉದ್ದೇಶ, ಸಾಧನೆ ಚಿಂತನೆಯ ಮೂಲ-ಚೂಲ ಪ್ರತಿಭೆ ಮೊದಲಾದವನ್ನು ನಿಖರವಾಗಿ ಅರಿಯುವ, ವಿಶ್ಲೇಷಿಸುವ ಸಾಮರ್ಥ್ಯವನ್ನು ಹೊಂದಿರುವಂತಹವು. ಸಮಕಾಲೀನ ಸಂದರ್ಭದಲ್ಲಿ ಮಹಾತ್ಮೆಗಳು ಮಾನವ ಪ್ರವೃತ್ತಿಗಳ ದಾಖಲೆಗಳಾಗಿಯೂ ಕಾಣಸಿಗುತ್ತವೆ. ಇಂತಹ ಸಾಹಿತ್ಯ ಮತ್ತು ಇತಿಹಾಸ ಒಳಗೊಂಡಿರುವ ಆಲೋಚನೆಗಳು ಮತ್ತು ತಾತ್ವಿಕ ಚಿಂತನೆಗಳು ವಿವಿಧ ಪ್ರಕಾರಗಳ ಮೂಲಕ ಮಾನವರ ವಿಚಾರಧಾರೆಯನ್ನು ಅರಿಯಲು ಸಹಾಯಕವಾಗಿವೆ.

**೨.೩ ಮಹಾತ್ಮೆಗಳ ಸ್ವರೂಪ**

ಪ್ರಾಚೀನ ಕಾಲದಿಂದಲೂ ಕೆಲವು ಸಂಗತಿಗಳು ಅಪೂರ್ವವು, ಅದ್ಭುತವೂ ಆದ ಸನ್ನಿವೇಶಗಳನ್ನು ಒಳಗೊಳ್ಳುತ್ತಾ, ತಲೆಮಾರುಗಳ ಮೂಲಕ ಹರಿದುಬಂದಿರುವ ಸ್ಥಳದ ಇತಿಹಾಸ ಅಥವಾ ಚರಿತ್ರೆಯಲ್ಲಿ ಹುದುಗಿರುವ ಪ್ರಸಿದ್ಧ ದೇವರುಗಳು, ಪವಾಡಭರಿತ ಮಾನವರು, ಸ್ಥಳ, ನದಿ, ಬೆಟ್ಟ-ಗುಡ್ಡದಂತಹ ಐತಿಹ್ಯ, ಚರಿತ್ರೆಯನ್ನು ಪುರಾಣದ ವಸ್ತುವಿನೊಂದಿಗೆ ಸೇರಿ ರೂಪುಗೊಂಡಿರುವುಗಳೇ ಮಹಾತ್ಮೆಗಳು. ಈ ಮಹಾತ್ಮೆಗಳು ವ್ಯಕ್ತಿ, ಸ್ಥಳ, ಘಟನೆಗಳಿಗೆ ಸಂಬಂಧಿಸಿದ ವಾಸ್ತವ ಅಥವಾ ಅವಾಸ್ತವ ನಂಬಿಕೆಗಳನ್ನೊಳಗೊಂಡ ಕಥನವೇ ಆಗಿದೆ.

ಇಂತಹ ಮಹಾತ್ಮೆಗಳು ಐತಿಹ್ಯ, ಪುರಾಣ, ಸ್ಥಳಪುರಾಣ ಅಥವಾ ದಂತಕಥೆಗಳಿಂದ ಕೂಡಿದ ಚರಿತ್ರೆಗೆ ಸಂಬಧಪಟ್ಟಿರುವಂತವು. ಇದಕ್ಕೆ ಪೂರಕವಾಗಿ ಇತಿಹಾಸ, ಕಲ್ಪನೆ,

ಐತಿಹ್ಯ, ಪವಾಡಗಳು, ಪುರಾಣಗಳು ಸೇರಿಕೊಂಡು ಮಹಾತ್ಮೆಗಳು ರೂಪುಗೊಳ್ಳುತ್ತವೆ. ಹಾಗಾಗಿಯೇ ಇವನ್ನು ದಂತಕಥೆ ಎಂದು ಹೇಳಲು ಸಾಧ್ಯವಿಲ್ಲ. ಎಲ್ಲೋ, ಯಾವಾಗಲೋ ಘಟಿಸಿದ ಒಂದು ಘಟನೆ ಇಲ್ಲವೇ ಒಂದು ಸ್ಥಳದ ವೈಶಿಷ್ಟ್ಯ; ಇಲ್ಲವೇ ವ್ಯಕ್ತಿಯೊಬ್ಬನ ಸಾಧನೆ, ಆ ಪರಿಸರದ ವ್ಯಕ್ತಿ ಹಾಗೂ ಸಮುದಾಯಗಳ ಮೇಲೆ ಪ್ರಭಾವ ಇಲ್ಲದೇ ಪರಿಣಾಮವನ್ನು ಬೀರುತ್ತದೆ. ಈ ಪ್ರಭಾವದ ಪರಿಣಾಮವಾಗಿ ಅವರಲ್ಲಿರುವ ಒಬ್ಬ ಪ್ರತಿಭಾವಂತ ಕವಿ ನಿರ್ದಿಷ್ಟ ವಿಷಯ, ಸ್ಥಳ, ಘಟನೆ ಅಥವಾ ಯಾವುದೇ ವ್ಯಕ್ತಿಗೆ ತನ್ನ ವೈಭವೀಕರಣದ ಕಲ್ಪನೆಯ ಅಂಶಗಳನ್ನು ಸೇರಿಸಿ ಔನ್ನತೀಕರಿಸಿ ಹೇಳುತ್ತಾನೆ. ಇದೇ ಕಾಲಾನಂತರದಲ್ಲಿ ಮಹಾತ್ಮೆಯಾಗಿ ಪರಿಣಮಿಸುತ್ತದೆ.

ಈ ಮೇಲೆ ತಿಳಿಸಿದ ನಿರೂಪಣೆಗಳ ಪ್ರಕಾರ ಮಹಾತ್ಮೆಗಳು ನಿರೂಪಣೆಯ ದೃಷ್ಟಿಯಿಂದ ಗದ್ಯ ಮತ್ತು ಪದ್ಯಮಿಶ್ರಿತವಾಗಿರುತ್ತವೆ. ಚರಿತ್ರೆಯ ಕಥೆಯೊಂದಿಗೆ ಪುರಾಣ ವರ್ಗಕ್ಕೆ ಸೇರುವಂತಹ ಪವಾಡ, ಐತಿಹ್ಯಗಳನ್ನು ಸೇರಿಸಿಕೊಂಡು ಮಹಾತ್ಮೆಗಳಾಗುತ್ತವೆ. ಇದು ಧಾರ್ಮಿಕ ಆಚರಣೆಗಳು ಇಲ್ಲವೇ ಧಾರ್ಮಿಕ ಸಂಗತಿಗಳೊಂದಿಗೆ ಪುರಾಣ ವ್ಯಕ್ತಿಗಳ ಚಾರಿತ್ರಿಕ ಕಥನವನ್ನು ಸಾರುವಂತಹುದ್ದು. ಇದಲ್ಲದೇ ಮಹಾತ್ಮೆಯು ನಿಜ ಸಂಗತಿ ಮತ್ತು ಕಲ್ಪನೆಗಳ ಸಂಯೋಗದಂತೆ ವರ್ಣನಾತ್ಮಕವಾಗಿ ಚಿತ್ರಿಸಲಾಗಿದೆ. ಇದು ಮಹಾತ್ಮೆಯ ಮುಖ್ಯವಾದ ಸ್ವರೂಪವಾಗಿದೆ. ಇದರಿಂದಾಗಿಯೇ ಮಹಾತ್ಮೆಗಳಲ್ಲಿ ಕಾಣಸಿಗುವ ಪುರಾಣ–ಮಹಾತ್ಮೆ–ಇತಿಹಾಸ ಇವುಗಳನ್ನು ಸತ್ಯಕ್ಕೆ ಎಷ್ಟು ದೂರವಾಗಿವೆ ಎಂದು ಅನ್ನಿಸುತ್ತದೆಯೋ ಅಷ್ಟೇ ಹತ್ತಿರವಾಗಿರುವಂತೆ ಕಂಡುಬರುತ್ತವೆ. ಮಹಾತ್ಮೆಗಳಲ್ಲಿ ವ್ಯಕ್ತಿ, ಸ್ಥಳ, ಘಟನೆಯನ್ನು ನಿರ್ದಿಷ್ಟಪಡಿಸಿರುವ ಕತೆಗಳಲ್ಲಿ ಪಾತ್ರಗಳು ನಿರ್ದಿಷ್ಟ ವ್ಯಕ್ತಿಗಳಾಗಿರುವುದಿಲ್ಲ. ಅದೇ ರೀತಿ ಪುರಾಣಗಳಲ್ಲಿ ನಿರ್ದಿಷ್ಟ ಸ್ಥಳಗಳಿರುವುದಿಲ್ಲ, ಮಹಾತ್ಮೆಯು ಕೂಡ ವ್ಯಕ್ತಿ, ವಸ್ತು, ಘಟನೆಗಳನ್ನು ವಿವರಿಸುತ್ತದೆಯಾದರೂ ಸಂಪೂರ್ಣ ಪುರಾಣವೂ ಅಲ್ಲ, ಕಟ್ಟು ಕತೆಯು ಅಲ್ಲ, ಇತಿಹಾಸವೂ ಅಲ್ಲ; ಗುಣಾತ್ಮಕವಾಗಿ ಇದು ಬೇರೆ ರೀತಿಯಲ್ಲಿ ಇರುತ್ತದೆ. ಅಂದರೆ ಹೇಳುತ್ತಿರುವ ಸಂಗತಿಯನ್ನು ನೈಜವೆಂದು ನಂಬುವಂತೆ ಮಾಡುವ ಶಕ್ತಿ ಮಹಾತ್ಮೆಗಳಿಗಿದೆ. ಇಲ್ಲಿ ಯಾವುದು ಸುಳ್ಳು, ಯಾವುದು ನಿಜ ಎಂಬಂತಹ ಸಂದಿಗ್ಧತೆ ಉಂಟಾಗುತ್ತದೆ. ಕಾರಣ ಅದಕ್ಕೆ ಉದಾಹರಣೆಯು ದೃಶ್ಯಾತ್ಮಕ ಆಧಾರದ ಗುರುತುಗಳಾಗಿರುತ್ತವೆ.

ಮಹಾತ್ಮೆಯು ಒಂದು ಸ್ಥಳ, ವ್ಯಕ್ತಿ ಹಾಗೂ ಘಟನೆಯನ್ನು ಹೇಳುವ ಕಥೆಯೇ ಆಗಿದೆ. ಅಂತಹ ಕತೆಯನ್ನು ಜಾನಪದರಲ್ಲಿ ಐತಿಹ್ಯವೆಂದೂ, ಅದರ ಹಿರಿಮೆಯನ್ನು,

ಘನತೆಯನ್ನು ಎತ್ತಿ ತೋರಿಸುತ್ತವೆ. ಹಾಗೆಯೇ ಶಿಷ್ಟ ಸಾಹಿತ್ಯದಲ್ಲಿ ಮಹಾತ್ಮೆಗಳನ್ನು ಇದಕ್ಕೆ ಹೋಲಿಸಬಹುದಾಗಿದೆ. ಮಹಾತ್ಮೆಯ ಕೃತಿಗಳಲ್ಲಿ ವಿಷಯವನ್ನು ನೇರವಾಗಿ ದಾಖಲಿಸುವ, ವಿಮರ್ಶಿಸುವ ಕೆಲಸಕ್ಕೆ ಹೋಗುವುದಿಲ್ಲ. ಬದಲಿಗೆ ಇತಿಹಾಸದಲ್ಲಿ ಸೇರದೇ ಜನರ ಮನಸ್ಸಿನಲ್ಲಿ ಇತಿಹಾಸವಾಗಿ ರೂಪುಗೊಂಡಿರುವ ಸಂಗತಿಗಳನ್ನು ಅವಲಂಬಿಸಿರುತ್ತದೆ. ಆದರೆ ಗಟ್ಟಿಯಾದ ಇತಿಹಾಸ, ಇತಿಹಾಸ ಆಗುವುದಿಲ್ಲ. ಇತಿಹಾಸಕ್ಕೆ ಮೂಲವಾಗುತ್ತಾ ಕೇವಲ ಕಲ್ಪನೆಯಲ್ಲಿ ಇರುತ್ತವೆ. ಕಲ್ಪನೆಗೂ ಕೂಡ ವಸ್ತುಸ್ಥಿತಿ ಇರುತ್ತದೆ ಎಂಬ ಧೋರಣೆಯನ್ನು ಇಟ್ಟುಕೊಂಡು ಮಹಾತ್ಮೆಗಳು ಚಿತ್ರಿತವಾಗಿವೆ. ಕಲ್ಪನೆಯೇ ಭ್ರಮೆಯಲ್ಲ, ಪುರಾಣವು ಕಟ್ಟುಕತೆಯಲ್ಲ, ಅದು ನಡೆದಿರಬಹುದಾದ ಒಂದು ಘಟನೆಯ ಸಂಗತಿ ಎಂಬುದಕ್ಕೆ ಇಂದಿಗೂ ಆಧಾರವಾಗಿ ನಿಂತಿರುವ ಪುರಾಣ, ಮಹಾತ್ಮೆ, ನಂಬಿಕೆ, ಆಚರಣೆಗಳು ನಾಶವಾಗಿಲ್ಲ ಎಂಬುದಕ್ಕೆ ಉದಾಹರಣೆ 'ತಲಕಾಡು ಮರಳಾಗಿ ಮಲುವಂಗಿ ಮಡುವಾಗಿ ಮೈಸೂರು ಅರಸರಿಗೆ ಮಕ್ಕಳಾಗದಿರಲಿ' ಎಂಬ ಮಾತು ಇಂದಿಗೂ ಜೀವಂತವಾಗಿದೆ. ಮಹಾತ್ಮೆಗಳಲ್ಲಿ ನಿರೂಪಿತವಾಗಿರುವ ಸಂಗತಿಗಳನ್ನು ಜನರು ನಿಜವೆಂದು ಭಾವಿಸುತ್ತಾರೆ ಮತ್ತು ನಂಬುತ್ತಾರೆ. ಅವುಗಳನ್ನು ಒಮ್ಮೊಮ್ಮೆ ಆವೇಷಭರಿತ ಭಾಷೆಯಲ್ಲಿ ನಿರೂಪಿಸಿ ವರ್ಣನಾತ್ಮಕವಾದ ನೈಜತೆಯ ಶೈಲಿಯಲ್ಲಿ ಒಡಮೂಡಿಸಿದ್ದಾರೆ ಎನ್ನುವಷ್ಟರ ಮಟ್ಟಿಗೆ ಪುರಾಣದೊಂದಿಗೆ ಕಲ್ಪನೆಯು ಮಿಳಿತಗೊಂಡು ಭ್ರಮೆಯೆನಿಸದೆ ಅವು ಜನರ ಮನಸ್ಸನ್ನು ಸೇರಿಕೊಂಡಿವೆ.

ಮಹಾತ್ಮೆಗಳಲ್ಲಿ ತಿಳಿಸಿರುವ ಅಂಶಗಳೆಲ್ಲ ಸತ್ಯ ಎಂದು ಹೇಳುವುದಕ್ಕೆ ಕುರುಹಾಗಿ ನಿರೂಪಕರು ಇಂದು ತೋರಿಸುತ್ತಿರುವ ವಸ್ತುವಿನ ಅವಶೇಷ, ಪಳೆಯುಳಿಕೆ, ಕೆರೆ-ಕಟ್ಟೆ, ಬೆಟ್ಟ-ಗುಡ್ಡ, ಸ್ಥಳ ಹಿಂದಿನ ವ್ಯಕ್ತಿಗಳು ಉಪಯೋಗಿಸುತ್ತಿರುವ ಉಡುಗೆ-ತೊಡುಗೆ, ಆಯುಧ ಸಾಮಾಗ್ರಿಗಳನ್ನು ತಿಳಿಸುತ್ತಾರೆ. ಕೆಲವೊಂದು ಇಂದಿಗೂ ಜೀವಂತವಾದ ಸ್ಥಳ ಚರಿತ್ರೆಯೊಂದಿಗಿನ ಐತಿಹ್ಯ ಇಂದಿಗೂ ಪ್ರಚಲಿತದಲ್ಲಿರುವುದನ್ನು ನೋಡಬಹುದು. ಉದಾಹರಣೆಗೆ "ಮಡಿಕೇರಿ ತಾಲ್ಲೂಕಿನ ಭಾಗಮಂಡಲದ ಸಮೀಪ ಕಾವೇರಿ ನದಿಯ ಉಗಮಸ್ಥಾನ ತಲಕಾವೇರಿಯಲ್ಲಿ ಅಕ್ಟೋಬರ್ ೧೭ರಂದು ಸಂಕ್ರಮಣ ಪುಣ್ಯಕಾಲದ ಬೆಳಿಗ್ಗೆ ೦೬:೨೯ಕ್ಕೆ ತುಲಾ ಲಗ್ನದಲ್ಲಿ ತೀರ್ಥೋದ್ಭವ ನಡೆಯುತ್ತದೆ ಎಂಬುದನ್ನು ಮುಖ್ಯವಾಗಿ ಗಮನಿಸಬಹುದು"[೭]

ಮಹಾತ್ಮೆಗಳು ಪ್ರಾಚೀನವಾದ ಚಾರಿತ್ರಿಕ ಸಾಹಿತ್ಯದ ಪಳೆಯುಳಿಕೆಗಳು ಎಂಬಂತೆ ತೋರಿದರೂ ಕೆಲವು ಐತಿಹಾಸಿಕ ಅಂಶಗಳು ಇದ್ದರೂ, ಬಹಳಷ್ಟು ಕಾಲ್ಪನಿಕ ಸಂಗತಿಗಳಿಂದ

ಕೂಡಿದ್ದು ಇವು ಆಕರ್ಷಕವಾಗಿರುತ್ತವೆ. ಕೆಲವೊಮ್ಮೆ ಚಾರಿತ್ರಿಕ ಅಂಶವೆಷ್ಟು, ಕಾಲ್ಪನಿಕ ಅಂಶವೆಷ್ಟು ಎಂಬುದನ್ನು ನಿರ್ಧರಿಸುವುದು ಕಷ್ಟವಾಗುತ್ತದೆ. ವ್ಯಕ್ತಿ, ಸ್ಥಳ ಅಥವಾ ಘಟನೆಯೊಂದರ ವಿವರಣಾತ್ಮಕ ಕತೆಗಳಾಗಿರುತ್ತವೆ. ಹಾಗೂ ಸಂಪ್ರದಾಯ ಮೂಲದ ವ್ಯಾಪ್ತಿಯನ್ನು ಪಡೆದಿರುತ್ತವೆ. ತಾವು ಮೂಡಿದ ಪರಿಸರಕ್ಕೆ ಅಂಟಿಕೊಂಡಿರುತ್ತವೆ. ಚಾರಿತ್ರಿಕ ಅಂಶಗಳು ಕ್ರಮೇಣ ಅಪೂರ್ವವೂ, ಅದ್ಭುತವೂ ಆದ ಸನ್ನಿವೇಷಗಳನ್ನು ಒಳಗೊಳ್ಳುತ್ತಾ ತಲೆವಾರುಗಳ ಮೂಲಕ ಹರಿದುಬರುವಾಗ ಐತಿಹ್ಯದಿಂದ ಕೂಡಿದ ಪುರಾಣಾಂತರ್ಗತವಾಗಿ ವಿಷಯ ವಸ್ತುವನ್ನು ಉನ್ನತೀಕರಿಸಿ ಮಹಿಮೆ, ಪವಾಡ, ಲೀಲೆಯಾಗಿ ಪರಿವರ್ತಿತವಾಗಿ ಮಹಾತ್ಮ್ಯೆಗಳಾಗಿ ರೂಪ ಪಡೆದಿವೆ. ಇವನ್ನು ನಡೆದ ಘಟನೆಗಳು ಎನ್ನಬಹುದಾದ ಸೃಷ್ಟಿಗಳಾಗಿ ಕಂಡುಬರುತ್ತವೆ. ಆದ್ದರಿಂದ ಮಹಾತ್ಮ್ಯೆಯ ವಸ್ತು ಸಮಗ್ರವಾಗಿ ಕಲ್ಪನಾತ್ಮಕವೆಂದು ಹೇಳಲಾಗುವುದಿಲ್ಲ. ಕಲ್ಪನೆಗೆ ಆಧಾರ ಕೊಡುವ ಸತ್ಯಾಂಶಗಳೆಂದು ನಿರ್ಧರಿಸಲಾಗದ ಡೋಲಾಯಮಾನದ ಸ್ಥಿತಿಯಲ್ಲೇ ಉಳಿಯಬೇಕಾಗುತ್ತದೆ. ಇಲ್ಲಿ ಬರುವ ಉಪಾಸನ ವಿಧಿಗಳು, ನಂಬಿಕೆ, ಸಂಪ್ರದಾಯ, ಆಚರಣೆಗಳು ಜೊತೆಗೆ ಸ್ವಧರ್ಮದ ಅಭಿಮಾನದಿಂದ ಜನರ ಪ್ರಚಾರಕ್ಕೆ ಸಿಕ್ಕು, ಬೇಗನೇ ತಲುಪುವ ಉದ್ದೇಶವೇ ಮಹಾತ್ಮ್ಯೆಗಳ ಹುಟ್ಟಿಗೆ ಮೂಲ ಕಾರಣವಾಗಿರಬಹುದು. ಕನಸುಗಳು-ಹಗಲುಗನಸುಗಳು, ಭ್ರಮೆಗಳು ಇಂಥಹ ಮನೋಕಲ್ಪಿತ ಆಕಾಂಕ್ಷೆಯು ಐತಿಹ್ಯಗಳ ಜನನಕ್ಕೆ ಹೇಗೆ ಕಾರಣವಾಗುತ್ತವೆಯೋ ಹಾಗೆಯೇ ಪುರಾಣದ ವಸ್ತು, ಪೌರಾಣಿಕ ವ್ಯಕ್ತಿಗಳು ಹಾಗೂ ಘಟನೆಗಳಿಗೆ ಸಂಬಂಧಿಸಿದ ಚಾರಿತ್ರಿಕ ಮಹತ್ವ ಪಡೆದ ವ್ಯಕ್ತಿ, ಘಟನೆ, ಸ್ಥಳಗಳನ್ನು ಉನ್ನತೀಕರಿಸುವುದರ ಜೊತೆಗೆ ಸ್ಥಳ ಹಿನ್ನೆಲೆಯನ್ನು ವರ್ಣನಾತ್ಮಕವಾಗಿ ಹೇಳುವುದಾಗಿದೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಅಂದಂದಿನ ಮೌಲ್ಯಗಳ ಉಳಿವಿಗಾಗಿ ನಿರ್ಮಿಸಿರುವ ದೇವಸ್ಥಾನಗಳು, ಮಠಗಳು, ಕೆರೆ-ಕಟ್ಟೆ ಮುಂತಾದವುಗಳ ವಿಶೇಷತೆಯನ್ನು ನಿಜವೆಂಬಂತೆ ಚಿತ್ರಿಸಲಾಗಿದೆ. ಹಾಗೆಯೇ ಪುರಾಣ ವ್ಯಕ್ತಿಗಳನ್ನು ಅಲ್ಲಿನ ಸ್ಥಳಗಳಲ್ಲಿ ನೆಲೆಸಿದ್ದರು ಎನ್ನುವಂತೆ ಚಿತ್ರಿಸಿರುವುದನ್ನು ನೋಡಬಹುದು. ಅಲ್ಲಿನ ತೀರ್ಥಕ್ಷೇತ್ರಗಳಿಗೆ ಪುರಾಣ ವ್ಯಕ್ತಿಗಳ ನಾಮಾಂಕಿತವನ್ನೇ ಸೇರ್ಪಡೆ ಮಾಡಿಕೊಳ್ಳಲಾಗಿದೆ. ಅದು ಎಷ್ಟರ ಮಟ್ಟಿಗೆ ನಿಜವೋ? ತಿಳಿಯಲು ಕಷ್ಟವಾಗುತ್ತದೆ. ತೀರ್ಥಕ್ಷೇತ್ರಗಳ ಮಹಿಮೆಯನ್ನು ಭಿತ್ತರಿಸುವಾಗ ಮಿತಿಯೇ ಇಲ್ಲದಂತೆ ಭೂತ, ರಾಕ್ಷಸ, ಪ್ರೇತ, ವನದೇವತೆ, ಜಲದೇವತೆಗಳೊಂದಿಗೆ ಸಕಲ ಪಾಪ ಮಾಡಿದವರು, ರೋಗ-ರುಜಿನಗಳಿಂದ ತತ್ತರಿಸಿರುವವರು, ಈ ತೀರ್ಥಕ್ಷೇತ್ರಗಳಲ್ಲಿ ಮಿಂದರೆ ಅವರಿಗೆ ಪಾಪ ಪರಿಹಾರ ಸಿಗುತ್ತದೆ, ಸ್ವರ್ಗಕ್ಕೆ ಹೋಗುತ್ತಾರೆ ಎಂದು ಅಂತಿಮವಾಗಿ ಎಲ್ಲಾ ಕ್ಷೇತ್ರಗಳ ಕೊನೆಯ ವ್ಯಾಖ್ಯಾನವಾಗಿರುತ್ತದೆ. ಪ್ರಸ್ತುತ

ಸಂದರ್ಭದಲ್ಲಿ ವೈಚಾರಿಕ ದೃಷ್ಟಿಯಿಂದ ನೋಡಿದಾಗ ಅದು ಶುದ್ಧಸುಳ್ಳು ಎಂದೆನಿಸುತ್ತದೆ. ಇವುಗಳಲ್ಲಿ ಪವಾಡ ಸದೃಶ್ಯವಾದ, ಅದ್ಭುತ ಅಂಶಗಳು ಕಂಡರೂ ವಾಸ್ತವದ ಹಿನ್ನೆಲೆಯನ್ನು ಗಮನಿಸಿದಾಗ ನಮಗೆ ಎದುರಾಗುವ ಪ್ರಶ್ನೆಗಳಿಗೆ ಉತ್ತರಕ್ಕಾಗಿ ತಡಕಾಡಿದರೆ ಕತ್ತಲಲ್ಲಿ ನಿಂತು ಬೆಳಕಿನೆಡೆಗೆ ತಡವರಿಸುತ್ತಾ ಸಾಗಿದಂತಾಗುತ್ತದೆ.

ಹೀಗೆ ರಚನೆಯಾದ ಸಾಹಿತ್ಯದಲ್ಲಿ ಅಂದಿನ ಸಮಾಜದ ರಾಜಕೀಯ ಅಲ್ಪಸ್ವಲ್ಪವಾದರೂ ಮಹಾತ್ಮ್ಯೆಗಳಲ್ಲಿ ಕಂಡುಬರುತ್ತದೆ. ಮೈಸೂರು ಅರಸರ ವಂಶಾವಳಿಯೊಂದಿಗೆ ಅವರ ಸಾಧನೆಯು ಮಹಾತ್ಮ್ಯೆಗಳ ವಸ್ತುಗಳಾಗಿವೆ. ಎಲ್ಲಿಯೋ ನಡೆದ ಘಟನೆಗಳನ್ನು ತಮ್ಮ ಸುತ್ತಮುತ್ತ ನಡೆದಂತೆ ಚಿತ್ರಿಸಿದ್ದಾರೆ. ವಾಸ್ತವಕ್ಕೆ ನಿಲುಕದ ಜಗತ್ತನ್ನು ಕಟ್ಟಿ ಕಾಲ್ಪನಿಕ ಕತೆಯೊಂದರ ನಿರೂಪಣೆಗೆ ಬೌದ್ಧಿಕ ಗ್ರಹಿಕೆಯ ಮೂಲಕ ಮೂರ್ತ-ಅಮೂರ್ತ ಸಂಗತಿಗಳು ಹಾಗೂ ಅನುಭವದ ವಸ್ತು ವಿಷಯಗಳೆಲ್ಲವನ್ನು ಮಹಾತ್ಮ್ಯೆಗಳಲ್ಲಿ ಚಿತ್ರಿಸಿದ್ದಾರೆ. ಹೀಗೆ ಶಿಷ್ಟಪದ ಸಾಹಿತ್ಯದಲ್ಲಿ ತಮಗೆ ಸರಿ ಎನಿಸಿದ್ದನ್ನು ಸರಿಯೆಂದು ಕಂಡುಕೊಂಡ ಸತ್ಯಗಳನ್ನು ಮೌಖಿಕ ರೂಪದಲ್ಲಿರುವುದನ್ನು ಸಹ ಪುರಾಣಕ್ಕೆ ಸಮೀಕರಿಸಿ ಅದನ್ನು ಅಳಿಸಿ ಹೋಗದಂತೆ ಉಳಿಸಿಕೊಂಡು ಮಹಾತ್ಮ್ಯೆಗಳು ಎಂಬ ಒಂದು ಪ್ರಕಾರವನ್ನೇ ಹುಟ್ಟುಹಾಕಿದರು. ಇಂತಹ ಮಹಾತ್ಮ್ಯೆಗಳು ನಿರ್ದಿಷ್ಟವಾದ ವಸ್ತು-ವಿಷಯದೊಂದಿಗೆ ಹೇಗೆ ಅಂಟಿಕೊಂಡಿರುತ್ತದೆಯೋ ಹಾಗೆಯೇ ಸ್ಥಳಾಂತರಗೊಂಡ ವಿಷಯಗಳನ್ನು ವಾಸ್ತವಕ್ಕೆ ತದ್ವಿರುದ್ಧವೆಂಬಂತೆ ಸೃಷ್ಟಿಸಿಕೊಂಡಿವೆ. ಲೌಕಿಕ-ಅಲೌಕಿಕತೆಗಳೆರಡನ್ನು ಒಗ್ಗೂಡಿದ ನೆಲದ ಒಡಲಿಗೆ ಮಿಳಿತವಾಗಿವೆ. ಎಲ್ಲಿಯೋ, ಎಂದೋ ನಡೆದಿರುವ ಘಟನೆಗಳನ್ನು ಲಿಖಿತ ರೂಪದಲ್ಲಿ ಸೃಷ್ಟಿಸುವುದರಿಂದ ಪ್ರಕೃತಿಯ ವಿಸ್ಮಯ, ವೈಚಿತ್ರ್ಯಗಳನ್ನು ಕಲ್ಪನೆಯ ಮೂಲಕ ಪುರಾಣದ ಪರಿಕಲ್ಪನೆಗಳನ್ನು ವರ್ತಮಾನದ ಜಗತ್ತಿನೊಂದಿಗೆ ಬೆಸೆದುಕೊಳ್ಳುವಂತೆ ಮಾಡಲಾಗಿದೆ. ಇದರೊಂದಿಗೆ ಪ್ರಕೃತಿಯ ಅದ್ಭುತಗಳನ್ನು ವಿಚಿತ್ರ ಹಾಗೂ ವಿಶಿಷ್ಟ ಘಟನೆಗಳಾಗಿ ನಿರೂಪಿಸುವ ಮೂಲಕ ಪರಂಪರೆಯನ್ನು ಉಳಿಸಿಕೊಳ್ಳಲು ಯತ್ನಿಸಿದ್ದಾರೆ. ಇವು ತಲೆಮಾರಿನಿಂದ ತಲೆಮಾರಿಗೆ ಪ್ರವಹಿಸುತ್ತಾ ಬರುವಾಗ ಅಲ್ಪಸ್ವಲ್ಪ ಬದಲಾವಣೆಗಳಾದರೂ, ಕಥಾವಸ್ತು ಭಿನ್ನವಾದರೂ ಅದರ ಉದ್ದೇಶ ಮಾತ್ರ ಒಂದೇ ಆಗಿದೆ.

ಇಂಥಹ ಮಹಾತ್ಮ್ಯೆಗಳು ಚರಿತ್ರೆಯಲ್ಲಿ ಅಂದಿನ ಕಾಲದ ಭಾಷೆ, ಸಂಸ್ಕೃತಿ, ರಾಜಕೀಯ ಮತ್ತು ಧಾರ್ಮಿಕತೆಯ ಅಂಶಗಳನ್ನು ಒಳಗೊಂಡಿರುತ್ತದೆ. ಹೀಗೆ ಹಲವಾರು ವಿಷಯಗಳನ್ನು ಸೇರಿಸುತ್ತಾ ಹೋಗಿ ಮಹಾತ್ಮ್ಯೆಗಳು ಬೃಹತ್ ಸ್ವರೂಪಗಳಾಗಿರಬೇಕು. ಹೀಗೆ ಧಾರ್ಮಿಕ ಹಿನ್ನೆಲೆಗೆ ಸಂಬಂಧಿಸಿದಂತೆ ಮಹಾತ್ಮ್ಯೆಗಳು ಅತೀ ಹೆಚ್ಚು ದೈವಿಕತೆಗೆ ಅಂದರೆ ದೈವಿಕ

ಶಕ್ತಿಗೆ ಒತ್ತು ಕೊಡುತ್ತವೆ. ಹೀಗೆ ಪವಾಡ, ಲೀಲೆಯನ್ನು ಮೆರೆದ ವಿಶ್ವಶಾಸ್ತ್ರಕ್ಕೆ ಸಂಬಂಧಿಸಿದಂತೆ ದೇಶದ ಘಟನೆಗಳನ್ನು ಒಳಗೊಂಡಂತೆ ಹುಡುಕಾಟ ನಡೆಸಿದರೆ ಕೆಲವೊಮ್ಮೆ ಅದ್ಭುತ ಘಟನೆಗಳೇ ಇಲ್ಲಿ ಮುಖ್ಯವೆನಿಸುತ್ತವೆ.

ಇಂದಿನ ಲೋಕಸ್ಥಿತಿಯ ಪೂರ್ವೋತ್ತರ ಘಟನೆಗಳ ಸುತ್ತ ಹೆಣೆಯಲ್ಪಡುವ ಕಥನಗಳೇ ಮಹಾತ್ಮೆಗಳಾಗಿರುತ್ತವೆ. ಇವು ಐತಿಹ್ಯಗಳಿಗೂ ಸಮೀಪವಿದ್ದಂತೆ ಕಂಡುಬರುತ್ತದೆ. ಇಲ್ಲಿಯ ಕಥೆಯ ವಸ್ತುವಿನ ಹಂದರವೆಂದರೆ ದೈವಿಕ ಹಿನ್ನೆಲೆಯ ತತ್ವಗಳನ್ನೊಳಗೊಂಡ ವರ್ಣನಾತ್ಮಕತೆಯಿಂದ ಕೂಡಿದ ಹಲವು ಸಂಧಿಗಳಿಂದ ಕೂಡಿರುತ್ತದೆ. ಮಹಾತ್ಮೆಗಳು, ಪುರಾಣಗಳು, ಇಂತಹ ಕತೆಯನ್ನು ಮನುಷ್ಯನ ಸಾಮರ್ಥ್ಯಕ್ಕೆ ಮೀರಿದ ಈ ಶಕ್ತಿಯನ್ನು ಅತಿಮಾನುಷವೆಂದು ಕರೆಯಲಾಗಿದೆ. ಅಂತಹ ಕಲ್ಪನೆಗಳಿಗೆ ದೇವರು, ದೆವ್ವ, ರಾಕ್ಷಸ, ಗಂಧರ್ವ ಎಂದು ಹೆಸರಿಸಲಾಗಿದೆ. ಪ್ರಕೃತಿಯಲ್ಲಿ ನಡೆಯುವ ಗಾಳಿ, ಗುಡುಗು, ಮಳೆಗಳನ್ನು ನೋಡಿ ದೇವರು ಎಂದು ತಿಳಿಯಲಾಗಿದೆ ಮತ್ತು ಅದು ನಮಗಿಂತ ಹೆಚ್ಚು ಶಕ್ತಿಯುತವಾಗಿದೆ ಎಂದು ಭಾವಿಸಿ ಅವುಗಳಿಗೆ ದೈವಿಕ ರೂಪವನ್ನು ನೀಡಲಾಗಿದೆ. ಈ ಶಕ್ತಿಗಳಿಗೆ ಅಗ್ನಿ ವರ್ಣ ಎಂದು ನಾಮಕರಣ ಮಾಡಿ ಪೂಜೆ-ಪುನಸ್ಕಾರಗಳನ್ನು ಮಾಡುತ್ತಾ ಬಂದಿದ್ದಾರೆ.

ಪ್ರಕೃತಿಯೊಂದಿಗೆ ಉಂಟಾದ ಈ ಶಕ್ತಿ ಅಥವಾ ಸವಲತ್ತು ತನಗಿಲ್ಲವೆಂದು ಮಾನವ ತಿಳಿದನಲ್ಲದೇ ಆ ಕೊರಗನ್ನು ನೀಗಿಸಿಕೊಳ್ಳಲು ಕಾಲ್ಪನಿಕ ಶಕ್ತಿಗಳನ್ನು ರೂಪಿಸಿಕೊಳ್ಳುತ್ತಾ ಅವನ್ನು ಅತಿಮಾನುಷ ಶಕ್ತಿಗಳೆಂದು ಕರೆದುಕೊಂಡನು. ಉದಾಹರಣೆಗೆ ಪಕ್ಷಿಗಳಂತೆ ರೆಕ್ಕೆ ಇದ್ದರೆ ಹಾರಬಹುದೆಂಬ ಆಸೆ, ಗಾಳಿಯಂತೆ ಕಣ್ಣಿಗೆ ಕಾಣದೇ ಸುಳಿದಾಡಬೇಕೆಂಬ ಬಯಕೆಯಿಂದ ಮನುಷ್ಯ ಇಂತಹ ಯೋಚನೆಗಳಿಗೆಲ್ಲಾ ಉತ್ತರವನ್ನು ಕಂಡುಕೊಳ್ಳಲು ಪುರಾಣಕಲ್ಪಿತ ಮಹಾತ್ಮೆ, ಐತಿಹ್ಯ, ಪವಾಡ, ಲೀಲೆಗಳನ್ನು ಚಿತ್ರಿಸಲು ಯತ್ನಿಸಿದ ಫಲವಾಗಿಯೇ ಲೀಲೆ, ಪುರಾಣ, ಪವಾಡ, ಮಹಾತ್ಮೆಯಂತಹ ಕೃತಿಗಳ ಉಗಮಕ್ಕೆ ಮುಖ್ಯ ಕಾರಣವಾಗಿರಬಹುದು.

ಒಟ್ಟಾರೆಯಾಗಿ ಧಾರ್ಮಿಕ ಪ್ರಸಾರದ ಸಾಧನಗಳಾಗಿ ಮಹಾತ್ಮೆಗಳು ಕಂಡುಬರುತ್ತವೆ. ಇದರಿಂದ ಜನರಿಗೆ ಭಯ-ಭಕ್ತಿ ಹಾಗೇ ಯಾವುದು ಔಚಿತ್ಯಪೂರ್ಣವಾದದ್ದು? ಯಾವುದು ಅನೌಚಿತ್ಯವಾದದ್ದು ಎನ್ನುವುದರ ಬಗ್ಗೆ ಅರಿವನ್ನು ಮೂಡಿಸುವ ಮೂಲಕ ಜನರಿಗೆ ತಮ್ಮ ಧಾರ್ಮಿಕ ಅಥವಾ ತಮ್ಮ ಧರ್ಮತತ್ವ ಪ್ರಸಾರದ ಹಿನ್ನೆಲೆಯನ್ನು ತಿಳಿಸಿಕೊಡುವ ಪ್ರಯತ್ನವನ್ನು ಮಹಾತ್ಮೆ ಕೃತಿಗಳು ಮಾಡುತ್ತವೆ. ಮಹಾತ್ಮೆ ಕೃತಿಗಳಲ್ಲಿ ಅಸಾಮಾನ್ಯವಾದ ಸಂಗತಿಯನ್ನು ಕಾಣಬಹುದು. ಯಾವುದೇ ಸಂಸ್ಕೃತಿಗೆ ತನ್ನದೇ ಆದ ಹೊಸತನವನ್ನು

ತನ್ನದಾಗಿಸಿಕೊಳ್ಳುವಂತೆ, ಅಸಂಬಂಧವಾದದ್ದನ್ನು ತಿರಸ್ಕರಿಸುವುದಕ್ಕೂ ಸಹ ಸ್ವಾತಂತ್ರ್ಯವಿದೆ. ಆಯಾ ಕಾಲಘಟ್ಟದ ಸಂಸ್ಕೃತಿಯೇ ಇಂಥಹ ವಿಷಯ ವಸ್ತು ತಾಳುವ ನಿಲುವುಗಳನ್ನು ಅದರ ವಿಶ್ಲೇಷಣೆಯಿಂದ ಅರಿಯಲು ಸಾಧ್ಯವಾಗುತ್ತದೆ. ಆದ್ದರಿಂದ ಯಾವುದೇ ಸಂಸ್ಕೃತಿಯು ಕೈಗೊಳ್ಳುವ ನಿಲುವುಗಳು ದಾಖಲೆಗಳಾಗಿಯೇ ಉಳಿಯುತ್ತವೆ. ಪುರಾಣದ ಧಾರ್ಮಿಕ ವಸ್ತು ವಿವರಣೆಗಳಿಂದ ಕೂಡಿದ ಮಹಾತ್ಮ್ಯೆಗಳು ಮಾನವನ ಭರವಸೆಯ ನಂಬಿಕೆಯ ಭಾಗವಾಗಿದೆ. ಇದು ವರ್ತಮಾನ, ಭೂತ, ಭವಿಷ್ಯತ್‌ಗಳನ್ನು ಕಟ್ಟಿಕೊಡಬಲ್ಲದು. ಮನುಷ್ಯನ ದೈನಂದಿನ ಬದುಕು ಸಹ ಹಿಂದಿನ ಮತ್ತು ಮುಂದಿನ ಸಂದರ್ಭಗಳಿಗೆ ಪೂರಕವಾಗುವಂತೆ ಬದುಕಲು ಧಾರ್ಮಿಕ ಅಂಶಗಳನ್ನೇ ಅವಲಂಬಿಸಿರುತ್ತದೆ. ಸಮಾಜದಲ್ಲಿ ಮನುಷ್ಯ ಬದುಕಲು ತನ್ನ ಸಂಸ್ಕೃತಿಯ ಧಾರ್ಮಿಕ ನಂಬಿಕೆಗಳನ್ನು ಆಶ್ರಯಿಸಿರುತ್ತಾನೆ. ಇವು ಸಾಮಾಜಿಕವಾಗಿ ಮನುಷ್ಯ ಏನನ್ನು, ಏಕೆ, ಹೇಗೆ, ಎಲ್ಲಿಯವರೆಗೆ ಪಾಲಿಸಬೇಕು ಎನ್ನುವುದನ್ನು ತಿಳಿಸುತ್ತವೆ. ಮತ್ತೆ ಕೆಲವನ್ನು ಮಾಡಲೇಬಾರದೆಂಬ ಸಾಮಾಜಿಕ ನಿರ್ಬಂಧವಿರುತ್ತದೆ. ಇಂಥಹ ನಿರ್ಬಂಧಕ್ಕೆ ಆಧಾರವಾಗಿ ಕೆಲವು ನಂಬಿಕೆಗಳ ಪರವಾಗಿ ಪುರಾಣ, ಮಹಾತ್ಮೆ, ಐತಿಹ್ಯಗಳು ಪ್ರಾರಂಭವಾಗುತ್ತವೆ.

**ಅಡಿಟಿಪ್ಪಣಿ**

೧. **ಕನ್ನಡ ಸಂಕ್ಷಿಪ್ತ ನಿಘಂಟು,** ಪುಟ ೧೦೦೫

೨. ಭಾನುಮತಿ ವೈ.ಸಿ. (ಸಂ), **ಅರಸರ ಚರಿತ್ರೆಗಳು,** ಪುಟ XVI

೩. **ಕನ್ನಡ ವಿಷಯ ವಿಶ್ವಕೋಶ ಸಂಪುಟ** – ೩, ಪುಟ ೨೮

೪. ರವೀಂದ್ರನಾಥ ಕೆ., **ಕನ್ನಡ ದಾಖಲು ಸಾಹಿತ್ಯ,** ಪುಟ ೧೮೦

೫. **ಅದೇ ಪುಸ್ತಕ,** ಪುಟ ೧೭೯

೬. ತಿಪ್ಪೇರುದ್ರಸ್ವಾಮಿ ಹೆಚ್. **ಕರ್ನಾಟಕ ಸಾಂಸ್ಕೃತಿಕ ಸಮೀಕ್ಷೆ,** ಪುಟ ೨೦೬-೨೦೭

೭. **ಪ್ರಜಾವಾಣಿ,** ಭಾನುವಾರ ಸೆಪ್ಟಂಬರ್ ೧೮.೨೦೧೬ ಸುದ್ಧಿ ಸಮೀಕ್ಷೆ

ಅಧ್ಯಾಯ : ಮೂರು

# ಮಹಾತ್ಮ್ಯೆಗಳ ವಸ್ತು–ವಿನ್ಯಾಸ

೩.೧ ವ್ಯಕ್ತಿ ಮಹಾತ್ಮ್ಯೆಗಳು

೩.೨ ಸ್ಥಳ ಮಹಾತ್ಮ್ಯೆಗಳು

೩.೩ ತತ್ವಕೇಂದ್ರಿಯ ಮಹಾತ್ಮ್ಯೆಗಳು

ಅಧ್ಯಾಯ : ಮೂರು

# ಮಹಾತ್ಮೆಗಳ ವಸ್ತು-ವಿನ್ಯಾಸ

ಮಾನವನ ನಾಗರಿಕತೆಯ ವಿಕಾಸದೊಂದಿಗೆ ಪ್ರಪಂಚದಲ್ಲಿನ ಹಲವು ಧರ್ಮಗಳ ಉದಯವೂ ಸಹ ಆಯಿತು. ಇಡೀ ಪ್ರಪಂಚದಲ್ಲಿ 'ಧರ್ಮ' ಎನ್ನುವುದು ಮಾನವನ ಅಂತರಂಗದ ಅವಶ್ಯಕತೆಯಾಗಿದೆ. ಯಾವುದೇ ಒಂದು ಸಮಾಜದಲ್ಲಿ ಬದುಕುವ ಮನುಷ್ಯ ಒಂದಲ್ಲ ಒಂದು ಧರ್ಮಕ್ಕೆ ಬದ್ಧನಾಗಿಯೇ ಬದುಕುತ್ತಿದ್ದಾನೆ. ಸಮಾಜದಲ್ಲಿ ಧರ್ಮಬಾಹಿರನಾಗಿ ಬದುಕುವುದು ಕಷ್ಟಸಾಧ್ಯ ಎಂಬುವಷ್ಟು ಮನುಷ್ಯ ಧರ್ಮಾವಲಂಬಿಯಾಗಿದ್ದಾನೆ. ಇದೇ ಹಿನ್ನೆಲೆಯಲ್ಲಿ ಪ್ರಾಚೀನ ಕಾಲದಿಂದಲೂ ಹಲವಾರು ಧರ್ಮಗಳು ತಮ್ಮ ಪರಂಪರೆ, ನಂಬಿಕೆ, ಸಂಪ್ರದಾಯಗಳ ಬುನಾದಿಯ ಮೇಲೆ ನೆಲೆನಿಂತಿದೆ. ಇದೇ ಧರ್ಮದ ಹಿನ್ನೆಲೆಯಲ್ಲಿ ಮಹಾತ್ಮೆಯ ಕೃತಿಗಳೂ ಸಹ ಹುಟ್ಟಿಕೊಂಡಿವೆ. ಈ ಧರ್ಮಗಳಲ್ಲಿ ಧರ್ಮ ಪ್ರಚಾರಕರು ಮತ್ತು ಅವರ ಅನುಯಾಯಿಗಳು ದೇವರೊಂದಿಗೆ ಹೊಂದಿರುವ ನಿಕಟ ಸಂಬಂಧವನ್ನು ಅವರು ನುಡಿಯುವ ವಾಕ್ಯಗಳ ಮೂಲಕ ಸತ್ಯವೆಂದು ಮಹಾತ್ಮೆಗಳು ಸಾರಿವೆ. ಹೀಗೆ ಭವಿಷ್ಯದ ಆಗು-ಹೋಗುಗಳ ಕುರಿತು ನಿರ್ದಿಷ್ಟವಾದ ಆಧ್ಯಾತ್ಮಿಕವಾದ ಕೆಲವು ಸಂಗತಿಗಳು ಜನರನ್ನು ಎಚ್ಚರಗೊಳಿಸಿದವು. ಇವರನ್ನು ಸಾಧು ಸಂತರೆಂದು ಕರೆದು ಇವರ ತಪಸ್ಸು, ಪವಾಡಗಳ ಮಹಿಮೆ ಅರಿತು ಅತಿಮಾನುಷ ಘಟನೆಗಳ ಪ್ರಭಾವಕ್ಕೆ ಒಳಗಾಗಿ ಇವರನ್ನು ಮಹಾತ್ಮ ಪುರುಷರೆಂದು ಅವರ ಹೆಸರಲ್ಲಿ ಕೃತಿಗಳು ರಚನೆಯಾಗಿರುವುದನ್ನು ನೋಡಬಹುದು. ಹೀಗೆ ಧರ್ಮ ಮತ್ತು ಮನುಷ್ಯರ ಹೆಸರಲ್ಲಿ ಬೆಳೆದು ಬಂದ ಮಹಾತ್ಮೆಗಳ ವಸ್ತುವು ಪುರಾಣ, ಐತಿಹ್ಯ, ಚರಿತ್ರೆ ಮತ್ತು ದಂತಕಥೆಗಳಿಂದ ಕೂಡಿವೆ.

ಈ ಪುರಾಣಗಳಿಂದ ಅಥವಾ ಮಹಾತ್ಮೆಗಳಿಂದ ಮುಖ್ಯವಾಗಿ ತಿಳಿಯುವುದೇನೆಂದರೆ ಹಲವಾರು ತೀರ್ಥಕ್ಷೇತ್ರಗಳ ಸಂದರ್ಶನ, ವ್ರತ, ಪೂಜೆ, ಆಚರಣೆಗಳಿಂದ ದೇವರ

ಕೃಪೆಗೆ ಪಾತ್ರರಾಗಿ ಲೌಕಿಕ ಸುಭದ್ರತೆ ಮತ್ತು ಆಧ್ಯಾತ್ಮಿಕವಾಗಿ ಮೋಕ್ಷ ಪಡೆಯುವುದೇ ಮುಖ್ಯವಾದ ಗುರಿಯಾಗಿದೆ. ಇಂತಹ ಆಚರಣೆಗಳು ಇತ್ತೀಚಿನದಲ್ಲ; ಅವು ಹಿಂದಿನ ಕಾಲದಿಂದಲೂ ಧಾರ್ಮಿಕವಾದ ಆಚಾರ-ವಿಚಾರ, ನಂಬಿಕೆ, ಸಂಪ್ರದಾಯ ಮುಂತಾದ ತಮ್ಮ ಆಚರಣೆಗಳನ್ನು ನಡೆಸಿಕೊಂಡು ಬಂದಿವೆ. ದೇವರು ಮತ್ತು ಧರ್ಮಕ್ಕೆ ಒಂದು ಮತಧರ್ಮದ ನಿರ್ದಿಷ್ಟ ಮಿತಿಯಿದೆ. ಧರ್ಮವು ಮತದ ಮಿತಿಯನ್ನು ದಾಟಿ ಬೆಳೆದಾಗ 'ತತ್ವ'ವಾಗಿ ವಿಸ್ತರಿಸಿಕೊಳ್ಳುತ್ತದೆ. ಆಧ್ಯಾತ್ಮಿಕ ತತ್ವವಾಗುವ ಮೊದಲು ಧರ್ಮಕ್ಕೆ ಮತದ ಮಿತಿ ಇರುತ್ತದೆ. ಹೀಗೆ "ಭಾರತೀಯ ಧರ್ಮವನ್ನು ವೇದಾಂತ ಧರ್ಮವೆಂದು ದಾರ್ಶನಿಕ ದೃಷ್ಟಿಯದೆಂದು ಹೇಳಬಹುದು"[೧]

ಅಂದರೆ ಇಲ್ಲಿ ಧರ್ಮ ಎನ್ನುವುದು ಒಂದು ದಾರ್ಶನಿಕತೆಯ ಆಧ್ಯಾತ್ಮಿಕ ತತ್ವವನ್ನು ಹೇಳುವಂತದ್ದು ಎಂದು ತಿಳಿಯಲಾಗಿದೆ. ಇಂತಹ ಧರ್ಮಗಳಲ್ಲಿನ ಪುರಾಣ, ಕಥೆ, ಐತಿಹ್ಯ, ಚರಿತ್ರೆಯಂತಹ ವಿಷಯ ವಸ್ತುವನ್ನೊಳಗೊಂಡ ಮಹಾತ್ಮ್ಯೆಗಳನ್ನು ವಾಚನ ಮಾಡಿದರೆ ದೇವರ ಬಗ್ಗೆ ಒಲುಮೆ(ಪ್ರೀತಿ) ಬರುವಂತೆ ಮತ್ತು ನಿತ್ಯಜೀವನದಲ್ಲಿ ಧರ್ಮ ಮಾರ್ಗದ ತತ್ವದ ಮೇಲೆ ನಡೆಯುವಂತೆ ಜನರ ಬದುಕಿನ ಮೇಲೆ ಮಹಾತ್ಮ್ಯೆಯ ಕೃತಿಗಳು ಪುಷ್ಟಿ ನೀಡಿವೆ.

ಮಾನವನ ಬದುಕಿನ ಎಲ್ಲಾ ಕ್ಷೇತ್ರದಲ್ಲೂ ಸಹ ನಂಬಿಕೆ, ಆಚರಣೆ, ಭಕ್ತಿ ಎನ್ನುವ ಆಸ್ತಿಕತೆಯು ಆವರಿಸಿಕೊಂಡಿದೆ. ಮತ್ತೆ ಕೆಲವು ಕಡೆ ನಾಸ್ತಿಕತೆಯಿಂದ ಕೂಡಿದೆ. ಆದರೆ ನಮ್ಮ ಪರಂಪರೆಯ ಉದ್ದಕ್ಕೂ ಹಿಂದಿನ ಬದುಕಿನ ನೆಲೆಗಳನ್ನೇ ಮುಂದೆ ಆಶಿಸುವ ಮತ್ತು ಆಶಿಸಬಾರದ ಪರಿಭಾವನೆಗಳೆಲ್ಲಾ ಮುಖ್ಯವಾಗಿ ನಂಬಿಕೆ-ನಿಷೇಧಗಳಾಗಿರುತ್ತವೆ. ನಂಬಿಕೆಗಳು ಆಚರಣೆಗಳನ್ನಾಗಿ ಮಾರ್ಪಾಡು ಮಾಡುತ್ತವೆ. ಅಂತಹ ಆಚರಣೆಗಳು ಮುಂದೆ ನಂಬಿಕೆಗಳನ್ನು ಜೀವಂತವಾಗಿರಿಸಲು ಪ್ರಯತ್ನಪಡುತ್ತದೆ. ಇಂತಹ ಸಂದರ್ಭದಲ್ಲೇ ಮಹಾತ್ಮ್ಯೆಗಳು ಒಂದು ನಿರ್ದಿಷ್ಟ ಚೌಕಟ್ಟನ್ನು ಪಡೆದಿರಬೇಕು. ಹಾಗೆಯೇ ಮಹಾತ್ಮ್ಯೆಗಳು ನೋಡಲು ಒಂದು ದೃಷ್ಟಿಯಲ್ಲಿ ಪುರಾತನ ಪುರಾಣವೆನಿಸಿದರೂ, ಒಂದು ಕಾಲದಲ್ಲಿ ನಡೆದಿರುವ ಘಟನೆ ಇಲ್ಲವೆ ವಸ್ತುವಿಷಯದ ಹಿನ್ನೆಲೆಯನ್ನು ಹೊಂದಿರುವುದೇ ಮಹಾತ್ಮ್ಯೆ ಅಥವಾ ಪುರಾಣವಾಗಿರುತ್ತದೆ. ಪುರಾಣದ ಪಾತ್ರಗಳು ಲೌಕಿಕ ನೆಲೆಯಿಂದ ಅಲೌಕಿಕ ಜಗತ್ತಿನವರೆಗೆ ವ್ಯಾಪಿಸಿರುವುದನ್ನು ನೋಡಬಹುದು. ಇಂತಹ ಪುರಾಣ ಪಾತ್ರಗಳು ಅಲೌಕಿಕ ವಲಯದಲ್ಲಿದ್ದು ಲೌಕಿಕ ಜಗತ್ತನ್ನು ನಿರ್ದೇಶಿಸುತ್ತದೆ. ಮಾನವೀಯ ಮೌಲ್ಯಗಳನ್ನು ಪ್ರತಿಪಾದಿಸುತ್ತವೆಯಲ್ಲದೆ, ಸಾಮಾಜಿಕವಾಗಿ ಅನೈತಿಕವೆನಿಸುವ ತಪ್ಪುಗಳನ್ನು ಇವು ಸಾರುತ್ತವೆ.

ಇಂತಹ ನಿದರ್ಶನಗಳಿಂದ ಮನುಷ್ಯನ ಸಾಮಾಜಿಕ ನಡವಳಿಕೆಯನ್ನು ಸರಿಯಾದ ಧಿಕ್ಕಿಯಲ್ಲಿ ನಡೆಯುವಂತೆ ಮಾಡುತ್ತವೆ. ಇದರಿಂದ ಅಲ್ಪಸ್ವಲ್ಪವಾದರೂ ಸಮಾಜದಲ್ಲಿ ನೈತಿಕ ನೆಲೆಗಟ್ಟು ಭದ್ರಗೊಳ್ಳಲು ಸಾಧ್ಯವಾಗುತ್ತದೆ ಎಂದೆನಿಸುತ್ತದೆ.

ಇದರಿಂದ ಮಹಾತ್ಮೆಗಳು ಕಟ್ಟಿಕೊಡುವ ವಿಷಯ ವಸ್ತುವು ಜಗತ್ತಿನ ಬಗ್ಗೆ ನಂಬಿಕೆಯನ್ನು ಗಟ್ಟಿಗೊಳಿಸಲು ಮತ್ತು ಪ್ರಾಪಂಚಿಕವಾಗಿ ವಾಸ್ತವ-ಅವಾಸ್ತವಗಳನ್ನು ಪ್ರಮಾಣೀಕರಿಸದೆ ಸೃಷ್ಟಿಯಾದ ಧರ್ಮದ ಮಹತ್ವವನ್ನು ಹೇಳುತ್ತಿರುತ್ತದೆ. ಉದಾಹರಣೆಗೆ ವ್ರತ, ಹಬ್ಬ, ಉತ್ಸವ, ತೀರ್ಥಸ್ನಾನ, ಭೂಮಿ ಆಕಾಶ... ಹೀಗೆ ಪೌರಾಣಿಕ ಹಿನ್ನೆಲೆಯಲ್ಲಿ ಧರ್ಮದ ಮಹತ್ವವನ್ನು ಸಾರುವ ಆಚರಣೆಗಳನ್ನು ತಿಳಿಸಿಕೊಡುವ ಪ್ರಮುಖ ಆಕರಗಳಾಗುತ್ತಾ, ಕಂಠರೂಪವಾಗುತ್ತಾ ಜನಮನದಲ್ಲಿ ಇಂದಿಗೂ ಉಳಿದಿರುವುದನ್ನು ನೋಡಬಹುದು. ಉದಾಹರಣೆಗೆ "ಮೈಲಾರ ಲಿಂಗನ ವೃತ್ತಾಂತ, ಎಲ್ಲಮ್ಮನ ವೃತ್ತಾಂತಗಳು ಶಿಷ್ಟ ಸಾಹಿತ್ಯದಲ್ಲಿ ಆಕರಗಳಾಗಿರುವುದನ್ನು ನೋಡಬಹುದು."[೨]

ಐತಿಹ್ಯಗಳ ಸಂದರ್ಭದಲ್ಲಿ ಮುಖ್ಯವಾಗಿ ಮಹಾತ್ಮೆಗಳು ತನ್ನ ಮತ್ತು ಐತಿಹ್ಯದ ನಡುವೆ ಪ್ರತ್ಯೇಕತೆಯನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತದೆ. ಇದಕ್ಕೆ ಪ್ರತಿರೂಪವಾಗಿ ಮಹಾತ್ಮೆಗಳು ತನ್ನ ವಸ್ತುವಿಷಯವನ್ನು ಶಿಷ್ಟ ಸಾಹಿತ್ಯದಲ್ಲಿ ಐತಿಹ್ಯದಿಂದ ಪಡೆದುಕೊಂಡಿದ್ದರೂ ಅದು ಮೇಲುಸ್ತರದಲ್ಲಿ ಕಾಣಸಿಗುತ್ತದೆ ಹೊರತು ತಳಸ್ತರದಲ್ಲಿ ಇರುವುದಿಲ್ಲ. ಹೀಗೆ ಕೆಲವೊಮ್ಮೆ ಅನೇಕ ಐತಿಹ್ಯಗಳು ಪುರಾಣವಾಗಿ, ಪವಾಡವಾಗಿ, ಮಹಾತ್ಮೆಗಳಾಗಿ ಕಾಲಾಂತರದಲ್ಲಿ ಮಾರ್ಪಾಡಾಗುವುದನ್ನು ನೋಡಬಹುದು. ಉದಾಹರಣೆಗೆ ಹುಲಿಗೆಮ್ಮ ದೇವಿ ಕಥೆ, ಕುಮಾರರಾಮನ ಕಥೆ ಇದನ್ನು ನಾವು ಇತಿಹಾಸ, ಪುರಾಣದಲ್ಲಿ ನೋಡಬಹುದು. ಅಲ್ಲದೇ ಐತಿಹ್ಯವಾಗಿಯೂ ಸಹ ಇದನ್ನು ನೋಡಬಹುದು.

ಪುರಾಣಗಳು ಮಹಾತ್ಮೆಗಳಾಗಿ ಮಾರ್ಪಟ್ಟಾಗ ಅವುಗಳ ತಾತ್ವಿಕ ನಿಲುವಿನಲ್ಲಿ ಅನೇಕ ಪಲ್ಲಟಗಳು ಉಂಟಾಗುತ್ತವೆ. ಪುರಾಣಗಳಲ್ಲಿ ಚಾರಿತ್ರಿಕವಾದ ವಾಸ್ತವ ಕತೆಯನ್ನು, ಅರ್ಥ ಮಾಡಿಕೊಳ್ಳಲು ಕಷ್ಟವಾಗುತ್ತದೆ. ಮಹಾತ್ಮೆಗಳು ಚರಿತ್ರೆಗೆ ಹತ್ತಿರವಿದ್ದು; ಚಿರಂತನವಾಗಿ ಪೂಜೆ, ಪುನಸ್ಕಾರ, ಆಚರಣೆ, ನಂಬಿಕೆ ರೂಪದಲ್ಲಿ ಪುನರಾವರ್ತನೆಯಾಗುತ್ತ ಜನಮನದಲ್ಲಿ ಉಳಿದುಕೊಳ್ಳುತ್ತವೆ.

ವ್ಯಾಪ್ತಿಯ ದೃಷ್ಟಿಯಿಂದ ವಸ್ತುವಿಷಯದಲ್ಲಿ ಪುರಾಣಗಳನ್ನು ನೋಡಿದಾಗ ಮಹಾತ್ಮೆ ಮತ್ತು ಐತಿಹ್ಯಕ್ಕಿಂತ ಭಿನ್ನವಾಗಿರುತ್ತದೆ. ಅವು ಬಹುಪಾಲು ಯಾವುದಾದರೊಂದು

ನಿರ್ದಿಷ್ಟ ಸ್ಥಳ, ವ್ಯಕ್ತಿಗೆ ಸಂಬಂಧಿಸಿವೆ. ಅದೇ ರೀತಿ ಐತಿಹ್ಯಗಳು ಬುಡಕಟ್ಟು ವೀರರಿಗೆ ಬದ್ಧವಾಗಿರುತ್ತವೆ. ಇಂಥವು ತಮ್ಮ ಸೀಮಾತೀತವಾದ ವಲಯವನ್ನು ದಂದೆ ಹೊರಡಿಸಿ ಪ್ರಪಂಚಕ್ಕೆ ತನ್ನ ಕಾವನ್ನು ಕೂರಿಸಬೇಕಾದರೆ ಸಮಾಜದಲ್ಲಿ ಕೆಲವು ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಆದ್ದರಿಂದ ಜನಾಂಗದ ಬದ್ಧತೆಯನ್ನು ಬಿಡಿಸಿಕೊಂಡು ನಿಧಾನವಾಗಿ ಪುರಾಣಗಳಾಗಿ ಮಾರ್ಪಡುತ್ತಾ ಹೋಗುತ್ತವೆ. "ಶಿಷ್ಟ ಸಾಹಿತ್ಯದಲ್ಲಿ ರೇಣುಕೆಯ ಪುರಾಣವನ್ನು ಪೋಷಿಸಿದರೆ ಐತಿಹ್ಯದಲ್ಲಿ ಜಾನಪದರು ಯಲ್ಲಮ್ಮನ ಹೆಸರಿನಲ್ಲಿ ಕಟ್ಟಿಕೊಂಡಿದ್ದಾರೆ."[೩]

ಹೀಗೆ ಐತಿಹ್ಯವೇ ಪುರಾಣವಾಗಬಹುದು ಇಲ್ಲವೇ ಪುರಾಣವೇ ಐತಿಹ್ಯವಾಗಿ ಕಾಲಾನಂತರದಲ್ಲಿ ಮಹಾತ್ಮೆಗಳಾಗಿ ರೂಪುಗೊಳ್ಳಬಹುದು. ಒಂದು ವೇಳೆ ಐತಿಹ್ಯ ಮಹಾತ್ಮೆಯಾದಾಗ ಅದರ ವಿವರಣೆ ಹಾಗೂ ಘಟನೆಗಳ ದೃಷ್ಟಿಯಿಂದ ಗಮನಿಸಿದರೆ ಅದು ಸವಿಸ್ತಾರವಾದ ರೂಪವನ್ನು ಪಡೆಯುತ್ತಾ ಹೋಗುತ್ತದೆ. ಆದರೆ ಐತಿಹ್ಯದ ಸ್ವದೇಶಿಯ ಪ್ರಕಾರಗಳು ಮಹಾತ್ಮೆಗಳ ಸಾರ್ವತ್ರಿಕ ಪ್ರತೀಕಗಳಾಗಿ ಮಾರ್ಪಾಡಾಗುತ್ತವೆ. ಸ್ಥಳ ಮತ್ತು ವ್ಯಕ್ತಿನಿಷ್ಠತೆಯನ್ನು ಮೀರಿ ಕಾಲಬದ್ಧತೆಯನ್ನು ಮೀರಿ ಸಂಧಿತವಾಗುತ್ತವೆ. ಆದ್ದರಿಂದಲೆ ಐತಿಹ್ಯಗಳಲ್ಲಿ ಅಡಗಿದ ಭೌತಿಕ ಆಧಾರಗಳು ಮಹಾತ್ಮೆಗಳಲ್ಲಿ ಗೌಣವಾಗುತ್ತವೆ. ಆದರೆ ಮಹಾತ್ಮೆಗಳು ಧಾರ್ಮಿಕ ತತ್ವದಿಂದ ಕೂಡಿರುವುದರಿಂದ ಐತಿಹ್ಯಕ್ಕಿಂತ ಗಂಭೀರವಾದ ಮಹತ್ವವನ್ನು ಸಮಾಜದಲ್ಲಿ ಪಡೆದುಕೊಂಡಿರುತ್ತದೆ.

ಮಹಾತ್ಮೆಗಳು ಆಚರಣೆಗಳ ಆಶಯದೊಂದಿಗೆ ಸಾಂಸ್ಕೃತಿಕವಾದ ಧಾರ್ಮಿಕ ಅಂಶಗಳನ್ನು ಪುನರ್ ಕಥನ ಮತ್ತು ಪುನರ್ ಸೃಷ್ಟಿಗೊಳಿಸುತ್ತವೆ. ಐತಿಹ್ಯಗಳಲ್ಲಿ ಇಂತಹ ಗುಣವಿಶೇಷಗಳು, ಅವಕಾಶಗಳು ಒದಗುವುದು ತುಂಬ ವಿರಳ ಎಂದೇ ಹೇಳಬಹುದು. ಅದೇ ರೀತಿಯಾಗಿ ಮಹಾತ್ಮೆಗಳು ಸುಖಾಂತ್ಯದ ನಿರೂಪಣೆಯನ್ನು ಹೊಂದಿ ಮುಕ್ತಾಯವನ್ನು ಪಡೆಯುತ್ತವೆ. ಜಾನಪದ ಪುರಾಣಗಳ ರೀತಿ ದುಃಖಾಂತ್ಯವಾಗಿರುವುದಿಲ್ಲ. ಅದರೊಂದಿಗೆ ಅತಿಮಾನುಷ ಸಾಮರ್ಥ್ಯದ ಪ್ರತಿಪಾದನೆಯೊಂದಿಗೆ ವರ್ಣನಾತ್ಮವಾದ ಅದ್ಭುತ ಲೋಕವೊಂದನ್ನು ಕಟ್ಟಿಕೊಡುತ್ತದೆ. ಹಾಗೆ ಮನುಷ್ಯನ ವಾಸ್ತವ ಪ್ರಪಂಚದ ಅನುಭವಗಳಿಗಿಂತ ಭಿನ್ನವಾದ ಜಗತ್ತನ್ನು ಸೃಷ್ಟಿ ಮಾಡುವುದರೊಂದಿಗೆ ಸಾವನ್ನು ಮೀರಿದ ಪಾತ್ರಗಳು ಕೆಲವು ಸಲ ಸಾವನ್ನು ಪಡೆದು ಸ್ವರ್ಗವನ್ನು ಪಡೆದು ಚಿರಂಜೀವಿಗಳಾಗಿ ಉಳಿಯುವಂತಹ ಪಾತ್ರಗಳನ್ನು ಸಹ ಇಲ್ಲಿ ನೋಡಬಹುದು.

ಹೀಗೆ ಮಹಾತ್ಮೆಯ ಪಾತ್ರಗಳು ಅತ್ಯಂತ ಮಹತ್ವವನ್ನು ಪಡೆದು ನಂತರ ದೈವತ್ವವನ್ನು ಹೊಂದಿ ಅವತಾರ ಪುರುಷರಾಗುತ್ತಾರೆ. ಅಂತಹ ವ್ಯಕ್ತಿಗಳು ಪೂರ್ವಜನ್ಮದಲ್ಲಿ ಪುಣ್ಯವಿಶೇಷಗಳಿಂದ ಕೂಡಿದ ಅತ್ಯುತ್ತಮ ಸಾಮಾಜಿಕ ಸ್ಥಾನಮಾನವನ್ನು ಪಡೆದಿರುತ್ತಾರೆ. ಅದರೂ ಬ್ರಹ್ಮತ್ವ (ಬ್ರಾಹ್ಮಣ) ಇಲ್ಲವೇ ರಾಜತ್ವ (ರಾಜಪರಿವಾರ)ಗಳಿಗೆ ಸೇರಿದ ಪಾತ್ರಗಳು ಇವಾಗಿರುತ್ತವೆ. ಇಂತಹ ಪಾತ್ರಗಳನ್ನೇ ಮಹಾತ್ಮೆಗಳಲ್ಲಿ ಮುಖ್ಯ ಪಾತ್ರವನ್ನಾಗಿ ಆಯ್ಕೆ ಮಾಡಿಕೊಂಡಿದ್ದಾರೆ. ಆದರೂ ಸಹ ಇವರ ವಸ್ತು ಧಾರ್ಮಿಕ ಅಂಶಗಳಿಂದ ಕೂಡಿರುವುದರಿಂದ ಜನರ ಸಾಮಾಜಿಕ ಮನ್ನಣೆಗೆ ಪಾತ್ರವಾಗುತ್ತವೆ.



## ೩.೧ ವ್ಯಕ್ತಿ ಮಹಾತ್ಮೆಗಳು

ಕನ್ನಡ ಸಾಹಿತ್ಯದಲ್ಲಿ ವ್ಯಕ್ತಿಕೇಂದ್ರಿತ ಮಹಾತ್ಮೆ ಅಥವಾ ಮಹಿಮೆಗಳನ್ನು ಹಿಂದಿನಿಂದಲೂ ನೋಡಬಹುದು. ಅದಕ್ಕೆ ಸಾಕಷ್ಟು ಉದಾಹರಣೆಗಳು ಸಿಗುತ್ತವೆ. "ರಾಘವಾಂಕನು ಹರಿಶ್ಚಂದ್ರ ಕಾವ್ಯ ಬರೆದು ಹರಿಹರನಿಂದ ನರಸ್ತುತಿಯ ನಿಂದನೆಗೆ ಕಾರಣವಾಗಿ ರಾಘವಾಂಕನಿಗೆ ದಂತಭಗ್ನವಾಗುತ್ತದೆ. ನಂತರ ವೀರೇಶ ಚರಿತೆ ಬರೆದಾಗ ಮತ್ತೆ ದಂತವನ್ನು ಕಟ್ಟಿಸಿಕೊಂಡು ಸನ್ಮಾನಕ್ಕೆ ಒಳಗಾದನೆಂಬ ದಂತಕಥೆ ಇದ್ದರೆ, ಕುಮಾರವ್ಯಾಸನು ಒದ್ದೆ ಬಟ್ಟೆಯ ಮೇಲೆ ವೀರನಾರಾಯಣನ ಸನ್ನಿಧಿಯಲ್ಲಿ ಕಾವ್ಯ ರಚಿಸುತ್ತಿದ್ದನು ಎಂಬ ಮಾತು ಸಹ ಇದೆ. ಹಾಗೆ ರಾಜಶೇಖರ ವಿಳಾಸದಲ್ಲಿ ಉರುಳಿದ ರುಂಡಗಳು ಮರಳಿ ಜೀವ ಬಂದು ಪಂಚಾಕ್ಷರಿಯ ಮಂತ್ರ ಜಪಿಸುವುದು."[೪] ಈ ಎಲ್ಲಾ ಉದಾಹರಣೆಗಳನ್ನು ಹಿಂದಿನ ಕಾವ್ಯಗಳಲ್ಲಿ ವದಂತಿ, ಪವಾಡ, ಐತಿಹ್ಯ, ಪುರಾಣದಂತಹ ಧರ್ಮ ಮತ್ತು ವ್ಯಕ್ತಿಯ ಅಭಿಮಾನದ ಉದ್ದೇಶಗಳಿಗಾಗಿ ಸಾಹಿತ್ಯದ ಸೃಷ್ಟಿಯಲ್ಲಿ ವ್ಯಕ್ತಿಕೇಂದ್ರಿತ ಮಹಾತ್ಮೆಗಳು ಪ್ರಮುಖ ಸ್ಥಾನ ಪಡೆಯುತ್ತವೆ. ಇಂತಹ ಕೃತಿಗಳು ವ್ಯಕ್ತಿಯಿಂದ ಸ್ಥಳಕ್ಕೆ, ಸ್ಥಳದಿಂದ ವ್ಯಕ್ತಿಗೆ ಪುರಾಣ, ಇತಿಹಾಸ, ಐತಿಹ್ಯದಂತಹ ವಸ್ತು ವಿಷಯಗಳನ್ನು ಸೇರಿಸಿಕೊಂಡು ಚಾರಿತ್ರಿಕ ಕಾವ್ಯಗಳಾಗಿ ಹುಟ್ಟಿಕೊಳ್ಳುತ್ತವೆ.

ಹೀಗೆ ಹುಟ್ಟಿಕೊಳ್ಳುವ ಮಹಾತ್ಮೆಗಳು ಪುರಾತನ ಕಥೆಯನ್ನಾಧರಿಸಿ ಸ್ಥಳ, ವ್ಯಕ್ತಿ ಖ್ಯಾತಿವಿಖ್ಯಾತಿಗಳಿಂದ ಕೂಡಿದ ಮಹತ್ವವನ್ನು ಕೀರ್ತಿಸುವ ಉದ್ದೇಶದಿಂದ ರಚನೆಯಾಗಿವೆ. ಅದರಲ್ಲಿ ವ್ಯಕ್ತಿ ಮಹಿಮೆಯನ್ನು ಮೊದಲು ನೋಡುವುದಾದರೆ ಒಬ್ಬ ಮನುಷ್ಯ ಸಮಾಜದಲ್ಲಿ ಬದುಕಿ ತಮ್ಮ ತತ್ವಜ್ಞಾನದ ಮೂಲಕ ಸಮಾಜದ ಗೌರವಕ್ಕೆ ಪಾತ್ರನಾಗಿ; ಜನರ ಮನಸ್ಸಿನಲ್ಲಿ ಮನ್ನಣೆ ಪಡೆದು ಪೂಜ್ಯನಾಗಿ ಉಳಿದುಕೊಂಡು ಲೀಲೆ, ಪವಾಡಗಳ ಮೂಲಕ ಪ್ರಸಿದ್ಧನಾಗಿ ಐಕ್ಯನಾದ ವ್ಯಕ್ತಿಯನ್ನು ಗುಣಗಾನ ಮಾಡುವುದು ಇಲ್ಲಿಯ

ಪ್ರಮುಖ ಆಶಯವಾಗಿರುತ್ತದೆ. ಪ್ರಕೃತಿಯ ಸಹಜ ನಿಯಮದಂತೆ ಭೂಮಿಯ ಮೇಲೆ ಜನನವಾದ ಮಾನವರಲ್ಲಿ ಕೆಲವರು ಸಾಮಾನ್ಯರಂತೆ ಬದುಕಿ ಜೀವನ ಸಾಗಿಸಿದರೆ ಕೆಲವರು ಆಧ್ಯಾತ್ಮದಲ್ಲಿ ಉನ್ನತಿಯನ್ನು ಸಾಧಿಸಿ ಅಸಾಮಾನ್ಯರಾಗಿ ಯಾರಿಗೂ ನಿಲುಕದೆ ಮಹತ್ವದ ವ್ಯಕ್ತಿತ್ವವೇ ಹೊಂದಿರುತ್ತಾರೆ. ಇಂತವರು ಜನಿಸಿದ ಕೆಲವೇ ವರ್ಷಗಳ ನಂತರ ಕುಟುಂಬ, ಸಂಬಂಧ, ಸಮಾಜದಿಂದ ದೂರ ಸರಿದು ಪ್ರೀತಿ, ಸ್ನೇಹ, ವಾತ್ಸಲ್ಯವನ್ನು ಕಳೆದುಕೊಂಡು ಭಿನ್ನ ರೀತಿಯಲ್ಲಿ ಧಾರ್ಮಿಕವಾದ ಉನ್ನತಿಯನ್ನು ಪಡೆಯಲು ಜೀವನ ಸಾಗಿಸುತ್ತಾರೆ.

ಅಲ್ಲದೇ ಇವರು ಪ್ರತಿನಿತ್ಯ ಸ್ನಾನ, ಪೂಜೆ, ಧ್ಯಾನ ಎಂದು ಯಾವಾಗಲು ಧ್ಯಾನಮಗ್ನರಾಗಿ ಗಂಭೀರವಾಗಿ ಯೋಚಿಸುವ ಸರ್ವ ಸಾಮರ್ಥ್ಯವನ್ನು ಹೊಂದುತ್ತಾರೆ. ಇವರು ಸಮಾಜದಲ್ಲಿರುವ ಕೆಲವೊಂದು ಒಳಿತು ಕೆಡಕುಗಳ ಬಗೆಗೆ ಗಂಭೀರವಾಗಿ ಯೋಚಿಸಿ ಸರ್ವ ಏಳ್ಗೆಗಾಗಿ ಪರೋಕ್ಷವಾಗಿ ದುಡಿಯುವ ದಿಟ್ಟ ಪುರುಷರಾಗುತ್ತಾರೆ. ಈ ಸತ್ಪುರುಷರು ನಮ್ಮೊಡನಿದ್ದು ನಮ್ಮಂತಾಗದೆ ಜಾತಿ, ಕುಲ, ಗೋತ್ರ ಹಾಗೂ ಹೆಸರು ಎಲ್ಲವನ್ನು ಬಿಟ್ಟು ಅಮಾಯಕ ಸ್ಥಿತಿಯಲ್ಲಿ ಅನಾಮಧೇಯರಂತೆ, ಮರುಳರಂತೆ ತಮ್ಮ ಜೀವನವನ್ನು ಕಳೆಯುವರು. ಆತ್ಮನಲ್ಲಿಯೇ ವಿಹರಿಸುವವರಾದ ಇವರು ಎಲ್ಲಾ ಧರ್ಮದ ಚೌಕಟ್ಟನ್ನು ಮೀರಿ ನಿಂತುಕೊಳ್ಳುತ್ತಾರೆ. ಸಮಾಜ ಇವರನ್ನು ತಿರಸ್ಕಾರ ದೃಷ್ಟಿಯಿಂದ ಕಂಡರೂ ಕೊನೆಗೆ ಇವರ ವ್ಯಕ್ತಿತ್ವ ಪವಾಡ ಹಾಗೂ ಲೀಲೆಗಳಂತಹ ಸಾದೃಶ್ಯಗಳಿಗೆ ಬೆರಗಾಗಿ ಸಮಾಜವೇ ಗುರುತಿಸುವಂತಹ ಮಹತ್ವದ ಬೆಳವಣಿಗೆಗೆ ಕಾರಣರಾಗುತ್ತಾರೆ. ಎಲ್ಲೋ ಹುಟ್ಟಿ ಮತ್ತೆಲ್ಲಿಯೋ ಸಾವನ್ನಪ್ಪುವ ಇವರು ಲೋಕಕ್ಕೆ ಮರುಳರಾಗಿ ಕಂಡರೂ ಇವರ ಆಂತರಿಕ ವ್ಯಕ್ತಿತ್ವದ ಶಕ್ತಿ ಮಾತ್ರ ಅಪಾರವಾದದ್ದು. ಸ್ಥಳದಿಂದ ಸ್ಥಳಕ್ಕೆ ಸಂಚರಿಸಿ ತಮ್ಮ ಮಹಿಮೆಯನ್ನು ತೋರಿ ಲೋಕವನ್ನೇ ಅಥವಾ ಸಮಾಜವನ್ನೇ ನಿಬ್ಬೆರಗಾಗಿಸುವ ಈ ವ್ಯಕ್ತಿಗಳು ಜಾತ್ಯಾತೀತರಾಗಿ, ಮತಾತೀತರಾಗಿ ಬದುಕಿ ಕೊನೆಗೆ ಎಲ್ಲೋ ಒಂದು ಕಡೆ ದೈವಾಧೀನರಾಗುವ ಇವರ ವ್ಯಕ್ತಿತ್ವವು ನಿಜಕ್ಕೂ ಸ್ಮರಣೀಯವಾದುದು.

ಇವರಿಗೆ ಪಾಂಡಿತ್ಯಕ್ಕಿಂತ ಅನುಭಾವ, ಆಧ್ಯಾತ್ಮವೇ ಮುಖ್ಯವಾಗಿರುತ್ತದೆ. ಇದರಿಂದ ಕುಲ, ಗೋತ್ರ, ಸ್ತೋತ್ರಗಳನ್ನು ಕಳಚಿಕೊಂಡಿರುತ್ತಾರೆ. ಮದುವೆ ಅವರಲ್ಲಿ ಸಾಮಾನ್ಯವಾಗಿ ಕಂಡುಬರಲಾರದು. ಇವರು ತಮ್ಮ ತಮ್ಮ ಜೀವಮಾನದ ಅವಧಿಯಲ್ಲಿ ವೈಭವ ಹಾಗೂ ಆಡಂಬರಗಳಿಗೆ ನಿಷೇಧವನ್ನು ಹೇರಿಕೊಂಡು ಅಂತರಂಗದ ವೈಭವವನ್ನು ಹೆಚ್ಚಿಸಿಕೊಂಡು ಲೌಕಿಕ ಜೀವನವನ್ನು ತೊರೆದು ಅಲೌಕಿಕ ಜೀವನವನ್ನು ನಡೆಸುವರು.

ಇಂಥವರು ಸಾಮಾಜಿಕ ಬಂಧನದಿಂದ ಮುಕ್ತರಾಗಿ ಮಾನ-ಅಭಿಮಾನಗಳ ಪರಿವೆಯೇ ಇಲ್ಲದೆ ದಿಗಂಬರರಾಗಿ ಕೆಲವರು ತಿರುಗಾಡುತ್ತಾರೆ. ಎಲ್ಲೆಂದರಲ್ಲಿ ಮಲಗುವುದು, ಹಸಿವು-ಬಾಯಾರಿಕೆಗಳ ಯೋಚನೆಯೇ ಇಲ್ಲದೆ ಯಾವಾಗಲೂ ಮೌನವಾಗಿದ್ದು ಸಮಾಧಿ ಸ್ಥಿತಿಯಲ್ಲಿರುತ್ತಾರೆ. ಇಂಥವರನ್ನು ಸಮಾಜ ತಿರಸ್ಕಾರ ಮನೋಭಾವನೆಯಿಂದ ಕಾಣುತ್ತದೆ. ಇವರಿಗೆ ಕಾಡು-ನಾಡು ಒಂದೇ ರೀತಿಯಲ್ಲಿ ಕಾಣುವುದರಿಂದ ಎಲ್ಲೆಂದರಲ್ಲಿ ಅಲೆದಾಡುತ್ತ ವಾಸ ಮಾಡುತ್ತಿರುತ್ತಾರೆ. ಇವರು ಯೋಗಮುಕ್ತರಾಗಿ, ವಿರಕ್ತರಾಗಿ, ಸಪ್ತಭೂಮಿಕೆಗಳ ಅಸಂಬದ್ಧತೆಯನ್ನು ಪಡೆದು ಸಹಜವಾದ ಸ್ಥಿತಿಯಲ್ಲಿರುತ್ತಾರೆ. ಇಂತಹ ಮನಸ್ಸು ಮತ್ತು ಲಕ್ಷಣವನ್ನು ಹೊಂದಿರುವವರನ್ನು ಸನ್ಯಾಸಿ, ಯೋಗಿ, ಸ್ವಾಮಿಗಳೆಂದು ಅವಧೂತರೆಂದು ವಿರಕ್ತರೆಂದು, ಜೀವನ್ಮುಖರೆಂದು ಹಲವು ನಾಮಾಂಕಿತಗಳಿಂದ ಕರೆಯುವರು.

ಇಂತಹ ಮಹಾನ್ ಪುರುಷರನ್ನು ಪರ್ಯಾಯವಾಗಿ ಹಲವಾರು ಹೆಸರುಗಳಿಂದ ಕರೆಯುತ್ತಾರೆ. ಅವರ ಪವಾಡ, ಲೀಲೆಗಳನ್ನು ಗುಣಕೀರ್ತನೆ ಮಾಡುತ್ತಾ ಮಹಾತ್ಮರನ್ನಾಗಿ ಮಾಡಲಾಗುತ್ತದೆ. ಇವರು ಜನರ ಕಷ್ಟ ಸುಖಗಳಿಗೆ ಕೆಲವೊಮ್ಮೆ ಭಾಗಿಯಾಗಿ ಅವರ ರೋಗ-ರುಜಿನಗಳನ್ನು ವಾಸಿ ಮಾಡಿ ಜನಮನದಲ್ಲೂ ಸಮಾಜದಲ್ಲೂ ಮಹಾತ್ಮರಾಗಿ ಉಳಿಯುತ್ತಾ ಇಂಥಹ ಪುಣ್ಯಪುರುಷರ ಮಾರ್ಗವು ಲೋಕಕ್ಕೆ ಭಿನ್ನವಾಗಿ ಕಂಡುಬರುವುದು. ಇವರು ಹಸಿವು, ಬಾಯಾರಿಕೆ, ಬಿಸಿಲು, ಮಳೆ, ಚಳಿ ಎನ್ನದೆ ಎಲ್ಲವನ್ನು ಸಹಿಸಿಕೊಂಡು ಆತ್ಮಶಕ್ತಿಯ ಆನಂದಪಡುವ ನಿಸ್ಸಂಗಿಗಳಾಗಿರುವರು. ಇವರಲ್ಲಿ ದೇಹದ ಭಾವನೆಗಳನ್ನು ಹೆಚ್ಚಿಸುವ ಕರ್ಮ ಸುಖಕ್ಕಿಂತ ಮನಸ್ಸಿಗೆ ಭೋದಕವಾದ ಜ್ಞಾನಸನ್ಯಾಸವು ಶ್ರೇಷ್ಠವೆಂದು ಅನುಭಾವಿಗಳು ಹೇಳುವರು. ದಿವ್ಯ ಪುರುಷರಾಗಿರುವ ಇವರು ಸದಾ ಸಂಚಾರಿಜೀವಿಗಳಾಗಿ ಏಕಾಂಗಿಯಾಗಿ ಕಾಡು-ಮೇಡು, ಬೆಟ್ಟ-ಗುಡ್ಡವೆನ್ನದೆ ತಮ್ಮ ಅಂತರಾತ್ಮಕ್ಕೆ ಎಲ್ಲಿ ನೆಮ್ಮದಿ ದೊರೆಯುವುದೋ ಅಲ್ಲಿ ನೆಲೆನಿಲ್ಲುತ್ತಾರೆ.

ಕೆಲವರು ತಮ್ಮ ಮೈಮೇಲೆ ತುಂಡು ಬಟ್ಟೆ ಧರಿಸಿದರೆ; ಮತ್ತೆ ಕೆಲವರು ದಿಗಂಬರರಾಗಿಯೇ ತಿರುಗುವ ಲೀಲಾ ಪುರುಷರಾಗಿದ್ದಾರೆ. ಲೌಕಿಕ ವಿಷಯಗಳಲ್ಲಿ ನಿರಾಸಕ್ತಿ ಹೊಂದಿದ ಇವರು ಮಾತಾಡಿದ್ದೇ ವೇದವಾಕ್ಯವಾಗಿರುತ್ತದೆ. ಕೆಲವೊಮ್ಮೆ ಲೌಕಿಕ ಜೀವನದ ಬಗ್ಗೆ ಜಿಗುಪ್ಸೆ ಹೊಂದಿರುವ ಇವರು ಜಗತ್ತಿನ ನೋವುಗಳು, ಆಸೆ-ನಿರಾಸೆಗಳು, ದುಃಖ-ದುಮ್ಮಾನಗಳು, ಚಂಚಲತೆ, ಅತೃಪ್ತಿ, ಅಸಮಾಧಾನ, ಅರ್ಥಹೀನ ಆಚರಣೆಗಳು ಇಂಥವುಗಳಿಂದ ಬೇಸತ್ತು ಸಾಮಾಜಿಕ ಜೀವನದ ಬಗ್ಗೆಯೇ ಜಿಗುಪ್ಸೆ ಹೊಂದಿರುತ್ತಾರೆ. ಮನೆ-ಮಠ, ಹೆಂಡತಿ-ಮಕ್ಕಳು, ಬಂಧು-ಬಳಗ ಇವೆಲ್ಲವುಗಳನ್ನೆಲ್ಲಾ

ತ್ಯಜಿಸಿ ಬಂಧನದಿಂದ ಬಿಡುಗಡೆಯನ್ನು ಪಡೆದವರಾಗಿರುತ್ತಾರೆ. ಮಾನ-ಅಭಿಮಾನಗಳನ್ನು ಬಿಟ್ಟು ವೈರಾಗ್ಯ ಮೂರ್ತಿಗಳಾಗಿ ತಮ್ಮ ಕೀರ್ತಿ, ಮಹಾತ್ಮೆಯನ್ನು ಆಧ್ಯಾತ್ಮಿಕ ಸೇವೆಯನ್ನು ನಿಷ್ಕಳಂಕವಾಗಿ ಮಾಡುತ್ತಿರುತ್ತಾರೆ.

ಸರ್ವಸಂಘವನ್ನು ಪರಿತ್ಯಾಗ ಮಾಡಿದ ಮಹಾತ್ಮಾ ಪುರುಷರಂತೆ ಕಾಣುವ ಇವರು ನೋಡುವವರಿಗೆ ಹುಚ್ಚರಂತೆ ಕಾಣುತ್ತಿದ್ದರು. ಹೀಗಾಗಿ ಇವರಿಗೆ ಗುಡಿಗುಂಡಾರಗಳೇ ವಾಸಸ್ಥಳಗಳಾಗಿದ್ದವು. ಸಾಮಾನ್ಯವಾಗಿ ಬಹುಜನರು ಇವರ್‍ಯಾರೋ ಹುಚ್ಚರಿರಬೇಕೆಂದು ಭಾವಿಸುತ್ತಿದ್ದರು. ಹಲವು ಜನ ಮಾತಾಡಿಸಿದರೂ ಮಾತನಾಡದೆ ಮೌನಿಯಾಗಿರುತ್ತಿದ್ದರು. ಸಾಮಾನ್ಯ ಜೀವನವನ್ನು ನಡೆಸುವ ಇವರ ಲಕ್ಷಣವನ್ನು ಜನರು ತಿಳಿಯದೇ ಅವಮಾನಿಸಿದ್ದೂ ಉಂಟು. ಹೀಗೆ ಸಮಾಜದಲ್ಲಿ ಯಾವ ಮನ್ನಣೆ ಸಿಗದೆ ಜನರಿಂದ ಕೆಲವು ತೊಂದರೆಗಳನ್ನು ಅನುಭವಿಸುತ್ತ ಸಂಚರಿಸುತ್ತಾ ಇರುವ ಇಂತಹ ಮಹಾತ್ಮರ ಲೀಲೆಗಳು ಅಪಾರ. ಸಾಮಾನ್ಯವಾಗಿ ಸಾಧು, ಸನ್ಯಾಸಿಗಳಿಗೆ, ಸತ್ಪುರುಷರಿಗೆ ನದಿ-ಬಯಲುಗಳು ಅವರ ಆಧ್ಯಾತ್ಮಿಕ ಚಟುವಟಿಕೆಗಳ ಕೇಂದ್ರಗಳಾಗಿದ್ದವು. ವಿಜಯನಗರ ಕಾಲದ ಅರಸನಾದ ಪ್ರೌಢದೇವರಾಯನ ಕಾಲದಲ್ಲಿ ಹಂಪಿ ಪರಿಸರದಲ್ಲಿದ್ದ ವಿರಕ್ತರಿಗೆ ಬಾರಿ ಮನ್ನಣೆ ಪ್ರೋತ್ಸಾಹ ಕೊಟ್ಟಿದ್ದನೆಂದು ಇತಿಹಾಸದಿಂದ ತಿಳಿದುಬರುತ್ತದೆ.

ಆದ್ದರಿಂದಲೇ ಇವನ ಇಪ್ಪತ್ತೊಂದು ವರ್ಷದ ಆಳ್ವಿಕೆಯಲ್ಲಿ ಸಾಹಿತ್ಯ ಸೃಷ್ಟಿಗೆ ಹೆಚ್ಚು ಒಲವನ್ನು ತೋರಿದನೆಂದು ವೀರಶೈವ ಧರ್ಮಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದನೆಂದು ತಿಳಿದುಬರುತ್ತದೆ. ಕನ್ನಡ ಸಾಹಿತ್ಯದ ಇತಿಹಾಸವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಯಾವ ಯಾವ ಕಾಲಘಟ್ಟದಲ್ಲಿ ಯಾವ ಧರ್ಮ ಪ್ರವರ್ಧಮಾನದಲ್ಲಿರುವುದೋ ಅಂತಹ ಸಂದರ್ಭದಲ್ಲಿ ಬೇರೆ ಧರ್ಮದ ಸಾಹಿತ್ಯ ಕೃತಿಗಳಿಗಿಂತ ಸ್ವಧರ್ಮದ ಕೃತಿಗಳೇ ಹೆಚ್ಚಾಗಿ ಮೂಡಿಬಂದಿರುವುದನ್ನು ಕಾಣಲು ಸಾಧ್ಯ. ಅಂತಹ ಸಂದರ್ಭವು ವಿಜಯನಗರ ಕಾಲದಲ್ಲಿ ಗೋಚರಿಸಿತೆಂದು ಹೇಳಬಹುದು. ವಿಜಯನಗರದ ಅರಸರಲ್ಲೇ ಒಬ್ಬರು ಶೈವಧರ್ಮಕ್ಕೆ ಪ್ರೋತ್ಸಾಹ ನೀಡಿದರೆ; ಮತ್ತೊಬ್ಬರು ವೈಷ್ಣವ ಧರ್ಮಕ್ಕೆ ಪ್ರೋತ್ಸಾಹ ನೀಡಿರುವುದು ತಿಳಿದುಬರುತ್ತದೆ. ಅದೇ ರೀತಿ ಕೆಲವು ರಾಜರು ಎಲ್ಲಾ ಧರ್ಮಗಳಿಗೆ ಸಮಾನವಾದ ಸ್ಥಾನಮಾನವನ್ನು ಕೊಟ್ಟಿರುವುದು ಸಹ ಕಂಡುಬರುತ್ತದೆ.

ಇದರಿಂದಾಗಿಯೇ ಅಂದಿನ ರಾಜರ ಆಳ್ವಿಕೆಯಲ್ಲಿ ಯಾವ ಧರ್ಮಕ್ಕೆ ಸ್ಥಾನಮಾನ ಸಿಗುತ್ತದೆಯೋ ಅದೇ ಧರ್ಮದ ಹಿನ್ನೆಲೆಯಲ್ಲಿ ಕಾವ್ಯ, ಕೃತಿಗಳು ಹೆಚ್ಚಿನದಾಗಿ ಹುಟ್ಟಿಕೊಂಡವು. ಉದಾಹರಣೆಗೆ ಪ್ರೌಢದೇವರಾಯನ ಕಾಲದಲ್ಲಿ ವೀರಶೈವ ಧರ್ಮದ ಉನ್ನತಿಯ ಕಾಲ

ಹೊಂದಿದ್ದರಿಂದ ಆಸ್ಥಾನದಲ್ಲಿ ನೆಲೆಸಿದ್ದ ಪಂಡಿತ ಪಾಮರರಲ್ಲಿ ವೀರಶೈವ ಹೆಚ್ಚಾಗಿದ್ದರು. ಹೀಗಾಗಿ ವೀರಶೈವ ಧರ್ಮಕ್ಕೆ ಸಂಬಂಧಿಸಿದ ಅನೇಕ ಪ್ರಕಾರಗಳಲ್ಲಿ ವೈವಿಧ್ಯಮಯವಾದ ಸಾಹಿತ್ಯ ಕೃತಿಗಳು ರಚನೆಯಾದವು. "ಸಾಹಿತ್ಯ ಚರಿತ್ರೆಯನ್ನು ಬರೆಯ ಹೊರಟ ಎಲ್ಲಾ ಮಹಾನೀಯರು ಕಂಡುಕೊಂಡ ಒಂದು ಸತ್ಯವೆಂದರೆ ಸಾಹಿತ್ಯದ ರಚನೆಗೆ ಸ್ಫೂರ್ತಿಯ ಸೆಲೆಯಾದುದು, ಕಾಲದ ಒತ್ತಡಕ್ಕಿಂತ ಹೆಚ್ಚು ಧರ್ಮ, ಧಾರ್ಮಿಕ ಪ್ರಚೋದನೆ ಈ ಸಂದರ್ಭದಲ್ಲಿ ಹೆಚ್ಚು ಕೆಲಸ ಮಾಡಿದೆ ಎಂದು ಹೇಳಿದರೆ ತಪ್ಪಾಗದು."[೫]

ಇದೇ ರೀತಿಯ ಧರ್ಮದ ನೆಲೆಯಿಂದ ಕೆಲವು ವ್ಯಕ್ತಿ ಮಹಾತ್ಮ್ಯೆಗಳನ್ನು ನೋಡಿದರೆ, ಮತ್ತೆ ಕೆಲವು ಧಾರ್ಮಿಕ ತತ್ವಗಳನ್ನು ಒಳಗೊಂಡು ಒಂದು ನಿರ್ದಿಷ್ಟ ಧರ್ಮದ ತತ್ವಶಾಸ್ತ್ರ ಮತ್ತು ನೀತಿ ಬೋಧನೆಗಳನ್ನು ಉದ್ದೇಶಿಸುವ ಜೀವನ ಚರಿತ್ರೆ ಹಾಗೂ ಪವಾಡ ಲೀಲೆಗಳನ್ನು ಗುಣಾಕೀರ್ತನೆಗಳ ಮೂಲಕ ಚಿತ್ರಿಸಲಾಗಿದೆ. ಸ್ಥಳ ಮಹಾತ್ಮ್ಯೆಗಳಲ್ಲಿ ಇದ್ದಂತೆ ವ್ಯಕ್ತಿಕೇಂದ್ರಿತ ಮಹಾತ್ಮ್ಯೆಗಳಲ್ಲಿಯೂ ಮೊದಲು ಸಂಸ್ಕೃತ ಶ್ಲೋಕ ಅಥವಾ ಪ್ರಾರ್ಥನೆಯಿಂದ ಕೂಡಿದ ಕುಲದೇವರ ಆರಾಧನೆ, ಪಂಡಿತ ಪಾಮರರನ್ನು ನೆನೆಯುತ್ತಾ ಬ್ರಹ್ಮಾದಿ ದೇವತೆಗಳಿಗೆ ನಮಸ್ಕರಿಸುತ್ತಾ ಕೃತಿಗಳು ಆರಂಭವಾಗುತ್ತದೆ.

ಉದಾಹರಣೆಗೆ ಸೂತಮುನಿ ಮತ್ತು ನೈಮಿಷ ಅರಣ್ಯವಾಸಿ ಮುನಿಗಳಿಂದ ಚರ್ಚೆ ಪ್ರಾರಂಭವಾಗುತ್ತದೆ. ಭೂಲೋಕದಲ್ಲಿ ಯಾವ ಕ್ಷೇತ್ರ ಶ್ರೇಷ್ಠ ಮತ್ತು ತೀರ್ಥಕ್ಷೇತ್ರಗಳು ಯಾವುವು? ಅಲ್ಲಿ ಉತ್ತಮ ಋಷಿ ಯಾರು? ಎಂಬ ಪ್ರಶ್ನೆಗಳನ್ನು ಸೂತಮುನಿಗಳಿಗೆ ಅರಣ್ಯವಾಸಿ ಮುನಿಗಳು ಕೇಳಿದಾಗ ಅವರು ಕಥೆಯನ್ನು ಈ ರೀತಿಯಾಗಿ ಹೇಳುತ್ತಾರೆ. "ಎಲೈ ಋಷಿಗಳಿರಾ! ಸಮಸ್ತ ಭೂಲೋಕ ವಾಸಿಗಳಿಗೂ ಭಕ್ತಿ ಮುಕ್ತಿ ಪ್ರದಾಯಕವಾದ ಅತ್ಯುತ್ತಮವಾದ ಶ್ರೀ ಸಿದ್ದರಾಮಗಿರಿಯೆಂಬ ಕ್ಷೇತ್ರವಿದ್ದು ಅಲ್ಲಿ ಯಜ್ಞಗಳಲ್ಲಿ ಅಶ್ವಮೇಧ ಯಾಗವು, ದಾನಗಳಲ್ಲಿ ಅನ್ನದಾನವೂ, ತೀರ್ಥಗಳಲ್ಲಿ ಗಂಗೆಯೂ ಹೀಗೆ ಎಲ್ಲಾ ಕ್ಷೇತ್ರಗಳಲ್ಲಿ ಉತ್ತಮವಾದುದ್ದೇ ಸಿದ್ದರಾಮಗಿರಿ ಕ್ಷೇತ್ರ ಎಂದು ಹೇಳುತ್ತಾರೆ. ಅನಂತರ ಎಲ್ಲಾ ಋಷಿಗಳು ಶಿವನನ್ನು ಶ್ರದ್ಧಾಭಕ್ತ್ಯಾನ್ವಿತರಾಗಿ ನೆನೆಯುತ್ತಾರೆ.

ಅಲ್ಲಿ ಶಿವ ಪ್ರತ್ಯಕ್ಷನಾಗಿ ನೀವುಗಳು ಕ್ಷೇಮವೆ ಎಂದು ಕೇಳಿದಾಗ ನಾವೆಲ್ಲರು ಕ್ಷೇಮ ಆದರೆ ಶ್ರೀಶೈಲ ಕ್ಷೇತ್ರದ ಪಶ್ಚಿಮ ಭಾಗದಲ್ಲಿರುವ ಜನರು ಶಿವಧರ್ಮಗಳನ್ನು ತ್ಯಜಿಸಿ, ಪಂಚಯಜ್ಞಗಳನ್ನು ತೊರೆದು ಆಚಾರಹೀನರಾಗಿ, ಶಿವಲಾಂಛನಗಳನ್ನು ಧರಿಸದೆ, ಜೀವಂತರಾಗದೇ ಕಾಮ, ಕ್ರೋಧಾದಿಗಳಿಂದ ಕೂಡಿದ ಸನ್ಮಾರ್ಗ ಜ್ಞಾನಾರ್ಜಿತರಾಗದೇ, ಕುಶಲ-ಕರ್ಮಿಗಳಾಗದೇ, ದುರ್ಮಾನ್ವಿತರಾಗಿ, ಜಗಧೀಶ್ವರನಾದ ನಿನ್ನಲ್ಲಿ ಭಕ್ತಿಯನ್ನಿರಿಸದೇ

ಕೇವಲ ನಾಸ್ತಿಕರಾಗಿರುವರು. ಅವರುಗಳಿಗೆ ಉಂಟಾಗಿರುವ ನಾಸ್ತಿಕ ಬುದ್ಧಿಯನ್ನು ನಾಶಪಡಿಸಿ ಶಿವಧರ್ಮವನ್ನು ಸ್ಥಾಪನೆ ಮಾಡಿ ಲೋಕವನ್ನು ಸಂರಕ್ಷಿಸಬೇಕೆಂದು ಪ್ರಾರ್ಥಿಸಿದರು."[೬]

ಇಲ್ಲಿ ಧರ್ಮ ಧರ್ಮಗಳಲ್ಲಿ ಇರುವ ತಾರತಮ್ಯವನ್ನು, ಶ್ರೇಷ್ಠ–ಕನಿಷ್ಠತೆಯನ್ನು ತಮ್ಮ ಮಹಾತ್ಮ್ಯೆ ಕೃತಿಗಳಲ್ಲಿ ಹೇಳಿದ್ದಾರೆ. ವಾಸ್ತವದಲ್ಲಿ ನೋಡಿದರೆ ಋಷಿಗಳು ತಪಸ್ಸು ಮಾಡಿದರೋ ಇಲ್ಲವೋ; ಶಿವನನ್ನು ಧರೆಗೆ ಇಳಿಸಿದರೋ ಇಲ್ಲವೋ; ಆದರೆ ಕೃತಿಕಾರನ ಕಾಲ್ಪನಿಕ ಪುರಾಣದೊಂದಿಗೆ ಸ್ವಧರ್ಮದ ಶ್ರೇಷ್ಠತನವೇ ಇಲ್ಲಿ ಕಾಣುತ್ತದೆ. "ಅದೇ ರೀತಿಯಾಗಿ ಭಕ್ತರ ಕೋರಿಕೆಯಂತೆ ಪರಮಾತ್ಮನು ಅವರ ಆಸೆ–ಆಕಾಂಕ್ಷೆಗಳನ್ನು ಪೂರೈಸಲು ಶಿವಶರಣರಲ್ಲಿ ಶ್ರೇಷ್ಠನಾದ ವೀರೇಶನಾದ ಭಕ್ತನನ್ನು ಕರೆದು ಭೂತಲವನ್ನು ಪ್ರವೇಶಿಸಿ ಶಿವಧರ್ಮವನ್ನು ರಕ್ಷಿಸಿ ಬೌದ್ಧವಿಹಾರಿಗಳ ಮರ್ಯಾದಗಳನ್ನು ಖಂಡಿಸಿ ಶಿವಧರ್ಮವನ್ನು ಸ್ಥಾಪಿಸು ಎಂದು ಆಜ್ಞಾಪಿಸಿದ"[೭] ಆದರೆ ಇಲ್ಲಿ ಕೃತಿಯ ಕಾಲ ಮತ್ತು ಹೆಸರು ತಿಳಿದು ಬಂದಿಲ್ಲ. ಆ ಸಂದರ್ಭದಲ್ಲಿ ಶ್ರೀ ಶೈಲ ಕ್ಷೇತ್ರದ ದಕ್ಷಿಣ ಭಾಗದಲ್ಲಿ ಬೌದ್ಧಧರ್ಮ ಅತೀ ಹೆಚ್ಚು ಪ್ರಚಲಿತದಲ್ಲಿ ಇರಬೇಕು. ಸುಮಾರು ಆ ಭಾಗದಲ್ಲಿ ೧೪ ರಿಂದ ೧೫ನೇ ಶತಮಾನದವರೆಗೂ ಬೌದ್ಧಧರ್ಮ ಮತ್ತು ಜೈನಧರ್ಮದ ಕಾವು ಇರುವುದನ್ನು ಈ ಮೂಲಕ ಅರಿಯಬಹುದು.

ಹೀಗೆ ಎಲ್ಲಾ ಕೃತಿಗಳು ಸಹ ಸ್ವಧರ್ಮ ಅಥವಾ ಸ್ವಮತ ಹಿನ್ನೆಲೆಯಿಂದ ಹುಟ್ಟಿಕೊಂಡು ತಮ್ಮ ಧರ್ಮದ ಸತ್ವ, ಆಚಾರ ವಿಚಾರಗಳನ್ನೇ ಶ್ರೇಷ್ಠೋತ್ತಮದಲ್ಲಿ ಇರಿಸಿ, ಬೇರೊಂದು ಧರ್ಮವನ್ನು ಖಂಡಿಸಿ ಬರೆದಿರುವುದು ಕಂಡುಬರುತ್ತದೆ. ಅಂದಿನ ಕಾಲದಲ್ಲಿ ಸ್ವಧರ್ಮ ಬಿದ್ದು ಹೋಗುವಂತಹ ಪರಿಸ್ಥಿತಿಯಿದ್ದು ಮತ್ತೊಂದು ಧರ್ಮ ಪ್ರವರ್ಧಮಾನದಲ್ಲಿದ್ದರೆ, ಆಗ ತಮ್ಮ ಧರ್ಮದ ಸರ್ವ ಶ್ರೇಷ್ಠ ಪುರುಷರನ್ನು ಅವತಾರ ಪುರುಷರನ್ನಾಗಿ ಚಿತ್ರಿಸಿ ದೈವತ್ವದ ಕಲ್ಪನೆಯನ್ನು ಕೊಡಲಾಗುತ್ತಿತ್ತು. ಇದೇ ರೀತಿಯಲ್ಲಿ ವ್ಯಕ್ತಿ ಮಹಿಮೆಗಳು ಸಹ ಹುಟ್ಟಿಕೊಂಡಿವೆ. ಸಾಮಾನ್ಯ ಮನುಷ್ಯರನ್ನು ಪುರಾಣಕಲ್ಪಿತ ವಸ್ತುವಿಷಯದೊಂದಿಗೆ ಅವರ ಸುತ್ತ ಕಥೆಯ ಹಂದರವನ್ನು ಹೆಣೆಯಲಾಗಿದೆ. ಭಾಷೆಯ ಬಳಕೆಯು ಸಹ ವಡ್ಡಾರಾಧನೆ ಶೈಲಿಯಂತಿದ್ದು, ಗದ್ಯದಿಂದ ಕೂಡಿರುತ್ತದೆ. ಸಾಮಾನ್ಯ ಭಕ್ತರಿಗೆ ಜನನವಾಗಿ, ಆ ವ್ಯಕ್ತಿ ಲೋಕ ಪರ್ಯಟನೆ ಮಾಡಿ ಸಕಲ ಪುರಾಣಗಳು, ಉಪನಿಷತ್ತುಗಳನ್ನು ಕಲಿತು ಸಕಲ ವಿದ್ಯಾಪಾರಂಗತನಾಗಿ, ಸಿಕ್ಕಿದ ಜನರಿಗೆಲ್ಲಾ ಧರ್ಮ ಬೋಧನೆ ಮಾಡುತ್ತ, ಅವರಿಗೆ ಸನ್ಮಾರ್ಗದಲ್ಲಿ ನಡೆಯಲು ಉಪದೇಶ ಮಾಡುತ್ತಾ, ಪ್ರೀತಿಯಿಂದ ಅವರ

ಹಿಂದೆ ಬಂದವರಿಗೆ ತಮ್ಮ ಧರ್ಮಕ್ಕೆ ಸೇರಿಸಿಕೊಳ್ಳುತ್ತಾ ಹೋಗುತ್ತಾರೆ. ಇಂತಹ ಪ್ರಸಂಗಗಳು ಅನೇಕ ಕಡೆ ಸಿಗುತ್ತವೆ. ಉದಾಹರಣೆಗೆ ಶ್ರೀ ಸಿದ್ಧರಾಮಚಲ ಮಹಾತ್ಮ್ಯೆಯಲ್ಲಿ "ಬೋಧಕರಾದ ಬೌದ್ಧಾದಿಗಳನ್ನು ಗೆದ್ದು ಅವರಿಗೆ ಮುಕ್ತಿಪ್ರದವಾದ ಶಿವಧರ್ಮಗಳನ್ನು ಬೋಧಿಸಿ ಅಲ್ಲಲ್ಲಿ ಶಿಥಿಲವಾಗಿದ್ದ ಶಿವಾಲಯಗಳನ್ನು ಭಕ್ತಿಯಿಂದ ಜೀರ್ಣೋದ್ಧಾರ ಮಾಡುತ್ತಾ ಶ್ರೀ ಸಿದ್ಧರಾಮ ಶಿವಯೋಗೀಶ್ವರರು ಅವರಿಗೆ ಲಿಂಗಧೀಕ್ಷೆಯನ್ನು ಕೊಟ್ಟು, ಮಂತ್ರರಾಜವಾದ ಪಂಚಾಕ್ಷರಿಯನ್ನು ಉಪದೇಶಿಸಿದನು. ತದ್ವಿರುದ್ಧವಾಗಿ ಅವರೆಲ್ಲರೂ ಶಿವಲಿಂಗಾರ್ಚನಾ ತತ್ಪರರಾಗಿ ಶಿವಭಕ್ತರೆಂದು ಪ್ರಕಾಶಿಸುತ್ತಲಿರುವರು."[೮]

ಹೀಗೆ ಅವರು ಹಲವಾರು ಪ್ರದೇಶಗಳನ್ನು ಸುತ್ತುತ್ತಾ, ಜನರಿಗೆ ಮಹಿಮೆಗಳನ್ನು ತೋರಿಸುತ್ತಾ ಧಾರ್ಮಿಕತತ್ವ, ಆದರ್ಶಗುಣಗಳನ್ನು ಬೋಧಿಸುತ್ತಾ; ಯಾವುದೋ ಒಂದು ಪ್ರದೇಶದಲ್ಲಿ ಬೆಟ್ಟ, ಗುಡ್ಡ, ಕಾಡುಗಳಲ್ಲಿ ನೆಲೆಸಿದರೆ ಅವರ ನಾಮಾಂಕಿತವನ್ನು ಆ ಬೆಟ್ಟ ಗುಡ್ಡಗಳೊಂದಿಗೆ ಸೇರಿ ಸ್ಥಳ ಪ್ರಸಿದ್ಧಿಯೊಂದಿಗೆ ಆ ಪ್ರದೇಶಕ್ಕೆ ಸ್ಥಳಪುರಾಣವನ್ನಾಗಿ ನಾಮಾಂಕಿತ ಮಾಡಲಾಗುತ್ತಿತ್ತು. ಒಂದು ಇತಿಹಾಸ ಹುಟ್ಟಿದರೆ ಅದಕ್ಕೆ ಹಲವಾರು ಐತಿಹ್ಯ, ಪವಾಡ, ಲೀಲೆ, ಮಹಿಮೆಗಳು ವ್ಯಕ್ತಿ ಅಥವಾ ಸ್ಥಳದ ಸುತ್ತ ಹೆಣೆದಿರುತ್ತವೆ. ಇಲ್ಲಿಯೂ ಸಹ ಸ್ಥಳ, ಕ್ಷೇತ್ರ ಮಹಾತ್ಮ್ಯೆಗಳಂತೆ ತೀರ್ಥಕ್ಷೇತ್ರಗಳಲ್ಲಿ ಸ್ನಾನ ಮಾಡಿದರೆ ಫಲ ಸಿಗುತ್ತದೆ ಎಂದು ಹೇಳುತ್ತಾರೆ. ಅಂತಹ ತೀರ್ಥಕ್ಷೇತ್ರಗಳು ಪ್ರಮುಖ ಋಷಿಗಳಿಂದ ಅಥವಾ ದೇವಾನುದೇವತೆಗಳಿಂದ ಸ್ಥಾಪನೆಯಾಗಿರುತ್ತವೆ ಎಂದು ಹೇಳುತ್ತಾರೆ. ಇಂತಹ ಪ್ರಮುಖ ತೀರ್ಥಕ್ಷೇತ್ರಗಳಲ್ಲಿ ಒಂದನ್ನು ಉದಾಹರಣೆಯಾಗಿ ನೋಡಬಹುದಾದರೆ "ರುದ್ರತೀರ್ಥ ಭಕ್ತನಾದವನನ್ನು ಇಹದಲ್ಲಿ ಸಮಸ್ತ ಸನ್ಮಾಗಳು ಸಂಪತ್ತುಗಳನ್ನನುಭವಿಸಿ ಪರದಲ್ಲಿ ಮೋಕ್ಷವನ್ನು ಸದ್ಭಕ್ತಿಯಿಂದ ಹೊಂದುವನು". ಎಂದು ತಿಳಿಸುವುದು.

ಯಾವುದೇ ಭಕ್ತ ಒಂದು ಕಾಲದಲ್ಲಿ ಪ್ರದಕ್ಷಿಣೆ, ನಮಸ್ಕಾರವನ್ನು ಮಾಡುವನೋ ಅವನು ಸಮಸ್ತ ಭೂಮಿಗಳ ಅಧಿನಾಯಕನಾಗಿರುವ ಪರಮಾತ್ಮನ ಲೋಕವನ್ನು ಸೇರುವನು. ಯಾರು ಸದ್ಭಕ್ತಿಯಿಂದ ದೇವರ ದರ್ಶನ ಮಾಡಿ, ಒಂದು ಸಾರಿ ಸಂಭಾಷಣೆ ಮಾಡುವರೋ ಆ ಭಕ್ತರು ಅತಿರಾಕ್ತವೆಂಬ ಯಜ್ಞದ ಫಲವನ್ನು ಹೊಂದುವರು. ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ, ಅಂತ್ಯಜನಾಗಲಿ, ಒಬ್ಬ ವ್ಯಕ್ತಿಯ ಸುತ್ತ ನಡೆದ ಬದುಕಿನ ಒಂದು ಘಟ್ಟವನ್ನೋ, ಸಂದರ್ಭವನ್ನೋ ಚಿತ್ರಿಸಿ ಕೊನೆಗೊಳ್ಳುತ್ತದೆ. ವಸ್ತು ಸಾಮಾನ್ಯವಾಗಿ ಆ ಸಮಾಜದ ಹಿನ್ನೆಲೆಯಲ್ಲೇ ಬಂದ ವ್ಯಕ್ತಿಯ ಬದುಕಿನ ಅನೇಕ ದುರಂತಗಳನ್ನು ಅಭಿವ್ಯಕ್ತಿಗೊಳಿಸುತ್ತದೆ. ಇಲ್ಲಿ ಬರುವ ವಸ್ತು ವಿಷಯ

ಪುರಾಣದಿಂದ ಕೂಡಿದ ಕಲ್ಪನೆಯೇ ಆದರೂ ವ್ಯಕ್ತಿಗಳು ಮಾತ್ರ ಸಮಾಜದಲ್ಲಿ ಒಂದು ಕಾಲಕ್ಕೆ ಬದುಕಿಬಾಳಿದವರು ಎಂಬುದಂತು ಸತ್ಯ. ವಿಧಿಯ ಕೈವಾಡದಿಂದಲೋ, ಪರರ ಕೈವಾಡದಿಂದಲೋ ಅತೀವ ಸಂಕಷ್ಟಕ್ಕೆ ಕೆಲವೊಮ್ಮೆ ಸಿಲುಕಿ ಕಷ್ಟನಷ್ಟಗಳನ್ನು ಅನುಭವಿಸಿದವರು. ಸಮಾಜಕ್ಕಾಗಿ, ಜನತೆಗಾಗಿ ಅವರ ಕಷ್ಟಸುಖಗಳನ್ನು ಸಹಿಸಿಕೊಂಡು ಜೀವನದುದ್ದಕ್ಕೂ ಜನರಿಗೆ ಸ್ಪಂದಿಸಿ ಪರನಿಷ್ಠೆ, ಪ್ರೇಮಿಗಳಾಗಿ, ಮಹಾಮಹಿಮರನ್ನಾಗಿ ಜೀವಿಸಿದವರೆಂದು ಚಿತ್ರಿಸಲಾಗಿದೆ. ಇಂತಹವರ ವ್ಯಕ್ತಿತ್ವ ಸಮಾಜದ ಮೇಲೆ ಪ್ರಭಾವ ಬೀರಿ ಅನೇಕ ಕಾಲದವರೆಗೆ ನಿಲ್ಲುತ್ತದೆ. ಅಂಥವರ ಕಥೆಗಳು ಮಹಾತ್ಮ್ಯೆಗಳಾಗಿ ಹುಟ್ಟಿಕೊಳ್ಳುತ್ತವೆ ಮತ್ತು ಹುಟ್ಟಿಕೊಂಡಿವೆ.

ಮಹಾತ್ಮ್ಯೆ ಪುರುಷರು ಮನುಷ್ಯನ ಮಾನಸಿಕ ಸೂಕ್ಷ್ಮಸಂವೇದನೆಯನ್ನು, ಭಾವನೆಗಳನ್ನು ಭಾವ–ಅನುಭಾವದಿಂದ ಗ್ರಹಿಸುವ ಕಲ್ಪನಾಶಕ್ತಿಯನ್ನು, ಚಿಂತನೆಯನ್ನು, ವಿವೇಚನೆಯನ್ನು ಹೊಂದಿರುತ್ತಿದ್ದರು. ಮಾನವರು ತನ್ನ ಅಪೂರ್ವ ಭಾವನೆಗಳನ್ನು ಪ್ರಕೃತಿಯೊಂದಿಗೆ ಹಂಚಿಕೊಂಡು ಅವುಗಳು ನಂತರ ಬೃಹದಾಕಾರವಾಗಿ ಬೆಳೆದು ಯಾವುದೇ ಒಂದು ಕಾಲಕ್ಕೆ ಅತೀ ಮಹತ್ವವನ್ನು ಪಡೆಯುತ್ತವೆಂಬುದನ್ನು ತೋರಿಸಿಕೊಟ್ಟರು. ಭಾರತದಲ್ಲಿ ಮಹಿಮ ಪುರುಷರಾದ ಸಂತರು, ವೈರಾಗ್ಯ ಪುರುಷರು ಒಂದಿಲ್ಲೊಂದು ನಿಟ್ಟಿನಲ್ಲಿ ಪವಿತ್ರ ತೀರ್ಥಸ್ಥಳವನ್ನು ಆಧ್ಯಾತ್ಮ ಮೊದಲಾದ ನೆಲೆಗಳಿಂದ ಮಾನವನ ಬದುಕಿನೊಂದಿಗೆ ಹಾಸುಹೊಕ್ಕಾಗಿರುವಂತೆ ಮಾಡಿದ್ದಾರೆ ಎಂಬುದಕ್ಕೆ ಇಂದಿಗೂ ಎಷ್ಟೋ ಸಾಧು–ಸಂತರುಗಳನ್ನು ಗಮನಿಸಿದಾಗ ತಿಳಿದುಬರುತ್ತದೆ.

### ೩.೨ ಸ್ಥಳಕೇಂದ್ರಿತ ಮಹಾತ್ಮ್ಯೆಗಳು

ನದಿ, ವನ, ಸ್ಥಳ, ಬೆಟ್ಟ–ಗುಡ್ಡ, ಕೆಲವು ಘಟನೆಗಳು ಜನಮನದಲ್ಲಿ ಪುಣ್ಯಕ್ಷೇತ್ರವಾಗಿ ಪ್ರಾಧಾನ್ಯತೆ ಪಡೆದುಕೊಂಡಿವೆ. ಅದರ ಮಹಿಮೆಯನ್ನು ಕುರಿತಂತೆ ಪುರಾಣಗಳನ್ನು ಕಟ್ಟಿ ಕೀರ್ತಿಸುವುದು ರೂಢಿಗತವಾಗಿ ಬೆಳೆದುಬಂದಿರುವುದನ್ನು ಮುಖ್ಯವಾಗಿ ಗಮನಿಸಲಾಗಿದೆ. ಉದಾಹರಣೆಗೆ ಕಾವೇರಿ ಮಹಾತ್ಮ್ಯೆ, ನಂದಿ ಮಹಾತ್ಮ್ಯೆ, ಸಹ್ಯಾದ್ರಿ ಖಂಡ, ಆರ್ಕಪುಷ್ಕರಣೆ ಮಹಾತ್ಮ್ಯೆ, ಶ್ರೀ ಪರ್ವತ ಮಹಾತ್ಮ್ಯೆ, ಪಶ್ಚಿಮರಂಗ ಮಹಾತ್ಮ್ಯೆ, ವೆಂಕಟಗಿರಿಯ ಮಹಾತ್ಮ್ಯೆ ಮುಂತಾದ ಕೃತಿಗಳು ಸ್ಥಳ ಮಹಿಮೆಗಳನ್ನು ಕುರಿತು ಬಂದಿದ್ದೇ ಹೆಚ್ಚಾಗಿರುತ್ತವೆ. ಹೀಗೆ "ನಿರ್ದಿಷ್ಟ ಸ್ಥಳವೊಂದಕ್ಕೆ ಸಂಬಂಧಪಟ್ಟ ಪುರಾಣಗಳೇ ಸ್ಥಳ ಮಹಾತ್ಮ್ಯೆಗಳಾಗಿವೆ."[೧೦] ಅಲ್ಲಿನ ದೇವಾಲಯವೇ ಪುಣ್ಯಕ್ಷೇತ್ರವಾಗಿ, ಪುಷ್ಕರಣೆಗಳೇ ಪುಣ್ಯತೀರ್ಥಕ್ಷೇತ್ರಗಳಾಗಿ, ಹಾಗೆಯೆ ಪುರಾಣದಿಂದ ಕೂಡಿದ ವಸ್ತುವಿನೊಂದಿಗೆ ಸ್ಥಳ, ಐತಿಹ್ಯ, ಚರಿತ್ರೆಯನ್ನು

ಸೇರಿಸಿ ಲೀಲೆ, ಪವಾಡ, ಮಹಿಮೆಗಳಿಂದ ಕೀರ್ತಿಸಲಾಗುತ್ತದೆ. ಆಗ ಜನಮನದಲ್ಲಿ ಆ ಸ್ಥಳದ ಬಗ್ಗೆ ಪ್ರೀತಿ, ಶ್ರದ್ಧೆ, ಭಕ್ತಿ ನಂಬಿಕೆ ಉಂಟಾಗಿ ಧಾರ್ಮಿಕ ಭಾವನೆ ಮೂಡುವಂತೆ ಮಾಡುವ ಪ್ರಯತ್ನ ಇದಾಗಿದೆ.

ಇಂತಹ ಸ್ಥಳ ಮಹಾತ್ಮ್ಯೆಗಳು ಸಾಮಾನ್ಯ ಜನರಿಗೂ ಅರ್ಥವಾಗುವ ರೀತಿಯಲ್ಲಿ ಪವಾಡ, ಪುರಾಣ, ಲೀಲೆ, ತ್ರಿಮೂರ್ತಿ ಕಲ್ಪನೆ ಮುಂತಾದ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ಚಿತ್ರಿಸಲಾಗಿದೆ. ೧೬-೧೭ನೇ ಶತಮಾನದ ಕನ್ನಡ ಸಾಹಿತ್ಯದಲ್ಲಿ ಸ್ಥಳ ಪುರಾಣ ಅಥವಾ ಸ್ಥಳ ಮಹಾತ್ಮ್ಯೆಗಳ ದೃಷ್ಟಿಯಿಂದ ಈ ಕಾಲದಲ್ಲಿ ಧಾರ್ಮಿಕ ಕ್ಷೇತ್ರಗಳ ಮೂಲಕ ತಮ್ಮ ಧರ್ಮದ ಪ್ರಚಾರ ಮಾಡುವ ಉದ್ದೇಶದಿಂದಲೇ ಪರಿಣಾಮಕಾರಿಯಾದ ಕ್ಷೇತ್ರ, ಸ್ಥಳಪುರಾಣದ ಸಾಹಿತ್ಯ ಹುಟ್ಟಿಕೊಂಡಿತು. ಇದರ ಹಿನ್ನೆಲೆಯಲ್ಲಿ ಸಾಕಷ್ಟು ಸ್ವತಂತ್ರವಾದ ಕಾವ್ಯಗಳು, ಮಹಾತ್ಮ್ಯೆಗಳು ರಚನೆಯಾದವು. ಅದು ಸ್ವಧರ್ಮ ಶ್ರದ್ಧೆಯಿಂದ ಆಯಾ ಮತಧರ್ಮಗಳ ಕ್ಷೇತ್ರ ವರ್ಣನೆಗಾಗಿ (ಪ್ರಸಾರಕ್ಕಾಗಿ) ಮಹಾತ್ಮ್ಯೆಗಳ ರಚನೆಗೆ ತೊಡಗಿದರು ಎಂದರೆ ತಪ್ಪಾಗದು. ಇಂತಹ ಪುರಾಣ ಕಾವ್ಯದ ವಸ್ತುವಿಗೆ ಪ್ರೇರಣೆಯೆಂದರೆ ವೇದ, ಉಪನಿಷತ್ತುಗಳಾಗಿವೆ. ಅದೇ ರೀತಿ ಸ್ಥಳ ಮಹಾತ್ಮ್ಯೆಗಳಿಗೂ ಕೂಡ ಬೆನ್ನೆಲುಬಾಗಿ ಇತಿಹಾಸ, ಚರಿತ್ರೆ, ಪುರಾಣ, ಪವಾಡ, ಲೀಲೆಗಳಂತಹ ವಿಶಿಷ್ಟವಾದ ಸಾಹಿತ್ಯವನ್ನೇ ಇಲ್ಲಿ ಚಿತ್ರಿಸಲಾಗಿದೆ. ನಡೆದ ಇತಿಹಾಸದೊಂದಿಗೆ ಜನತೆ ತಮ್ಮ ನಂಬಿಕೆ, ಶ್ರದ್ಧೆ, ಅನಿಸಿಕೆಗಳನ್ನು ಸೇರಿಸಿ ತಮಗೆ ಇಷ್ಟವಾದಂತಹ ಕಥೆಗಳ ರೂಪದಲ್ಲಿ ಸ್ಥಳ ಮಹಾತ್ಮ್ಯೆಗಳನ್ನು ರಚಿಸಿಕೊಂಡಿದ್ದರು.

ಪುರಾಣ ಸೃಷ್ಟಿಯ ಹಿನ್ನೆಲೆಯಲ್ಲಿ ಮಹಾತ್ಮ್ಯೆಗಳು ಒಂದು ಧಾರ್ಮಿಕ ಸಂಪ್ರದಾಯದ ಹಿನ್ನೆಲೆಯಲ್ಲಿ ಭಯ, ಭಕ್ತಿ, ಶ್ರದ್ದೆಯ ರೂಪದಲ್ಲಿ ಕಂಡುಬರುತ್ತವೆ. ವಿಷಯ ವಸ್ತು ಒಂದೇ ಆದರೂ ನಿರೂಪಣಾ ಶೈಲಿ ಭಿನ್ನವಾಗಿರುತ್ತವೆ. ಅಲ್ಲಿ ಬರುವ ಸ್ಥಳ, ತೀರ್ಥಕ್ಷೇತ್ರಗಳು ಬದಲಾಗಿರುತ್ತವೆ. ಅಲ್ಲದೆ ಕೆಲವು ಮಹಾತ್ಮ್ಯೆಗಳು, ಅಂದಿನ ರಾಜರುಗಳ ಇತಿಹಾಸ ಮತ್ತು ಹಿನ್ನೆಲೆಯನ್ನು ತಿಳಿಸಿದರೆ; ಇನ್ನೂ ಕೆಲವು ಕೃತಿಗಳು ಯಾವ ರಾಜರುಗಳ ಹಂಗಿಲ್ಲದೆ ಕೇವಲ ಧಾರ್ಮಿಕತೆಯಿಂದ ಕೂಡಿ ವರ್ಣಶೋಭಿತವಾಗಿರುತ್ತವೆ. ಪುರಾಣದಂತೆಯೇ ಸರ್ಗ, ಪ್ರತಿಸರ್ಗ, ಮನ್ವಂತರ ಮತ್ತು ವಂಶಾನುಚರಿತದಂತೆ ಕೆಲವು ಸ್ಥಳ ಪುರಾಣಗಳು ರಚನೆಯಾಗಿವೆ. ಉದಾಹರಣೆಗೆ ಶ್ರೀರಂಗ ಮಹಾತ್ಮ್ಯೆ, ಪಶ್ಚಿಮರಂಗ ಮಹಾತ್ಮ್ಯೆ, ವೆಂಕಟಗಿರಿಯ ಮಹಾತ್ಮ್ಯೆ. ಅದೇ ರೀತಿಯಲ್ಲಿ ಸೃಷ್ಟಿ, ವಿಸೃಷ್ಟಿ, ಸ್ಥಿತಿ, ಪಾಲನ, ಕರ್ಮ, ಲಯಗಳನ್ನು ಸಹ ನಿರೂಪಿಸುತ್ತದೆ. ಧರ್ಮ ಬೋಧಕ ಕಥೆಗಳಿಂದ ಕೂಡಿದ ಸ್ಥಳ ಮಹಾತ್ಮ್ಯೆಗಳು ಶ್ರೇಷ್ಠತೆಯನ್ನೇ ಅತಿ ಹೆಚ್ಚಾಗಿ ಬಿಂಬಿಸುತ್ತವೆ.

ಕೃತಿಯ ಆರಂಭದಲ್ಲಿ ಪ್ರಥಮ ಕಾಂಡ ಅಥವಾ ಪ್ರಥಮ ಆಶ್ವಾಸ, ದ್ವಿತೀಯ ಆಶ್ವಾಸ ಎಂದು ಇರುತ್ತದೆ. ಪ್ರಥಮ ಆಶ್ವಾಸದ ಪೀಠಿಕಾ ಪ್ರಕರಣದಲ್ಲಿ ಕವಿ, ಕಾಲ, ಕುಲ, ಗೋತ್ರ, ಪೂರ್ವಜರ ಹಿನ್ನೆಲೆಯಿಂದ ಕೂಡಿದ ಪೂರ್ವ ಕಾಲದ ಗುರು ಹಿರಿಯರು ಮತ್ತು ಕವಿಗಳ ಸ್ಮರಣೆಯಿಂದ ಕೂಡಿರುತ್ತದೆ. ಕೆಲವು ಕೃತಿಗಳಲ್ಲಿ ಕವಿ ಕಾಲ ಇರುವುದಿಲ್ಲ. ಪೂರ್ವಕವಿಗಳಿಗೆ ನಮಿಸಿ ಈ ಕೃತಿಯು ದೈವಿ ಕೃಪೆಯಿಂದ ರಚಿಸಲಾಗಿದೆ ಎಂದು ಪ್ರಾರ್ಥನಾ ಶ್ಲೋಕದಿಂದ ಕೃತಿಯು ಪ್ರಾರಂಭವಾಗುತ್ತದೆ. ಪ್ರಾರ್ಥನೆ ಸಲ್ಲಿಸಿದ ಮೇಲೆ ಗದ್ಯ ಪದ್ಯದಿಂದ ಕೂಡಿದ ಭಾಷಿಕ ನಿರೂಪಣೆಯಿಂದ ಕಥೆಯು ಪ್ರಾರಂಭವಾಗುತ್ತದೆ.

ಕೃತಿಯನ್ನು ರಚಿಸಲು ದೇವರು ಕನಸಿನಲ್ಲಿ ಬಂದು ಹೇಳಿದ ಎಂದು ಕವಿಯು ತಿಳಿಸುವುದಲ್ಲದೇ ಅದರಿಂದ ಈ ಕೃತಿ ರಚಿಸಿದ್ದೇನೆಂದು, ಮತ್ತೆ ಕೆಲವರು ಮಠಾಧೀಶರ ಆಜ್ಞೆಯಿಂದಲೋ ಗುರುಹಿರಿಯರಿಂದಲೋ ರಾಜರುಗಳ ಅನುಮತಿ ಮೇರೆಗೆ ಈ ಕೃತಿಯನ್ನು ರಚಿಸಿದ್ದೇವೆಂದು ಹೇಳಿಕೊಂಡಿದ್ದಾರೆ. ಆದರೆ ಅತೀ ಹೆಚ್ಚು ಕೃತಿಗಳು ರಾಜರ ಅನುಮತಿಯ ಮೇರೆಗೆ ರಚನೆಯಾಗಿರುವುದೇ ಕಂಡುಬರುತ್ತದೆ. ಇಂತಹ ಕೃತಿಗಳು "ಶಿವ–ಪಾರ್ವತಿ, ಶಂಕರ–ನಾರದ, ನಾರದ–ಭೃಂಗು, ಪೃಥ್ವಿ–ನಾರದ, ಸೂತ–ಸೌನಕಾದಿ ಮುನಿಗಳು, ಸೂತಮುನಿಗಳು, ಋಷಿಗಳು ಮೊದಲಾದವರ ಸಂವಾದ ರೂಪವಾಗಿ ಕಂಡುಬರುತ್ತದೆ. ಇವನ್ನೇ ಆಯಾ ಕೃತಿಗಳಲ್ಲಿ ವಿವರಿಸಿರುವ ನಿರ್ದಿಷ್ಟ ವಿಷಯಗಳಿಗೆ ತಕ್ಕಂತೆ ಕ್ಷೇತ್ರತೀರ್ಥ, ಮಾಸವೃತ, ಮೊದಲಾದ ಹೆಸರುಗಳಿಂದ ಕರೆಯಲಾಗಿದೆ. ಪ್ರತಿಯೊಂದು ಮಹಾತ್ಮೆಯ ಕೃತಿಯಲ್ಲಿಯೂ ಸಹ ಆ ಸ್ಥಳಕ್ಕೆ ಸಂಬಂಧಪಟ್ಟ ಕ್ಷೇತ್ರತೀರ್ಥ ಮಹಾತ್ಮೆಗಳೇ ಹೆಚ್ಚು ಸಿಗುತ್ತವೆ".[೧೧]

"ಇಂತಹ ತೀರ್ಥಕ್ಷೇತ್ರ, ತೀರ್ಥಯಾತ್ರೆಯ ಪರಿಕಲ್ಪನೆಯನ್ನು ನಮ್ಮ ಭಾರತೀಯ ಸಂಸ್ಕೃತಿಯ ಪ್ರಮುಖ ಅಂಗವಾಗಿ ನೋಡಬಹುದು. ಶತಶತಮಾನಗಳಿಂದಲೂ ತೀರ್ಥಕ್ಷೇತ್ರಗಳು ಭಾರತೀಯ ಜನಜೀವನದ ಮೇಲೆ ಸಾಕಷ್ಟು ಪರಿಣಾಮವನ್ನು ಬೀರಿವೆ. ಪವಿತ್ರ ನದಿಗಳಿಗೆ ತೀರ್ಥವೆಂದು, ಪವಿತ್ರ ಸ್ಥಳಗಳಿಗೆ ಕ್ಷೇತ್ರವೆಂದು ಕರೆದಿದ್ದಾರೆ. ತೀರ್ಥಯಾತ್ರೆ ಎಂದಾಗ ತೀರ್ಥ ಕ್ಷೇತ್ರದ ವ್ಯಾಪ್ತಿಯನ್ನು ಒಳಗೊಳ್ಳುತ್ತದೆ. ಏಕೆಂದರೆ ತೀರ್ಥಯಾತ್ರೆ ಎನ್ನುವುದು ಕೇವಲ ನದಿಗಳ ಸ್ನಾನಾನುಷ್ಠನುಗಳಾಗದೆ ಪವಿತ್ರ ಕ್ಷೇತ್ರಗಳ ಸಂದರ್ಶನವೂ ಆಗಿದೆ. ಎಲ್ಲಾ ತೀರ್ಥಕ್ಷೇತ್ರಗಳಿಂದ ಕಂಡುಬರುವ ಅಂಶವೆಂದರೆ ದೈವ ತೀರ್ಥಕ್ಷೇತ್ರಗಳೇ ಶ್ರೇಷ್ಠ ಎಂದು ಪುರಾಣದಲ್ಲಿ ನಿರೂಪಿಸಿವೆ"[೧೨] ವಿಷ್ಣು ಮಹಾತ್ಮೆ ಮತ್ತು ಪುರಾಣಗಳಲ್ಲಿ ತೀರ್ಥಕ್ಷೇತ್ರವನ್ನು ಸಂದರ್ಶನ ಮಾಡಿ ಅಲ್ಲಿ ತೀರ್ಥಸ್ನಾನ ಮಾಡಿದರೆ ಪಾಪನಾಶಕ ಮತ್ತು ಮೋಕ್ಷದಾಯಕವೆಂದು ಹೇಳಲಾಗಿದೆ. ಹಾಗೇ ಕೆಲವು

ತೀರ್ಥಕ್ಷೇತ್ರಗಳ ದರ್ಶನದಿಂದ ಮತ್ತು ಅಲ್ಲಿನ ಕೆಲವು ಪುಷ್ಕರಣಿಗಳಲ್ಲಿ ಸ್ನಾನ ಮಾಡಿದರೆ ಸಂತಾನ ಫಲ, ಅಭಿವೃದ್ಧಿಯ ಫಲ, ಪುತ್ರಾಪೇಕ್ಷೆ ಫಲಗಳು ದೊರೆಯುತ್ತದೆ ಎಂಬ ನಂಬಿಕೆಯು ಇದೆ. ಇಂತಹ ತೀರ್ಥಕ್ಷೇತ್ರಗಳಲ್ಲಿ ಹರಿಯುವ ನೀರಿನಲ್ಲಿ ಪಿತೃಋಣವನ್ನು ತೀರಿಸಿ. ತರ್ಪಣದಂತಹ ದಾನಗಳಿಗೆ ಇಲ್ಲಿ ವಿಶೇಷ ಸ್ಥಾನಮಾನವಿದೆ. ತೀರ್ಥಯಾತ್ರೆ ಅಥವಾ ತೀರ್ಥಕ್ಷೇತ್ರಗಳ ಸಂದರ್ಶನ ಮಾಡಿದರೆ ಯಜ್ಞಕ್ಕಿಂತ ಶ್ರೇಷ್ಠ ಎಂದು ಪರಿಗಣಿಸಲಾಗಿರುವುದನ್ನು ಇಲ್ಲಿ ಮುಖ್ಯವಾಗಿ ಗಮನಿಸಲಾಗಿದೆ.

ತೀರ್ಥಕ್ಷೇತ್ರ ದರ್ಶನ ಮಾಡಲು ಹೋಗುವ ವ್ಯಕ್ತಿಗೆ ಮಹಾತ್ಮೆಗಳಲ್ಲಿ ಕೆಲವು ವಿಧಿ-ನಿಷೇಧಗಳನ್ನು ಹೇರಲಾಗಿದೆ. ತೀರ್ಥಯಾತ್ರೆಗೆ ಹೊರಡುವ ವ್ಯಕ್ತಿ ಸ್ನಾನ ಮಾಡಿ ಉಪವಾಸವಿರಬೇಕು. ಇಷ್ಟ ದೈವವನ್ನು ಸ್ಮರಣೆ ಮಾಡಿ ಪೂಜಿಸಬೇಕು. ಗಂಡ-ಹೆಂಡತಿ ಸೇರಬಾರದು, ಕುಲದೇವತೆಗಳಿಗೆ, ಋಷಿಗಳಿಗೆ, ಬ್ರಾಹ್ಮಣರಿಗೆ, ಹಿರಿಯರಿಗೆ ನಮಸ್ಕರಿಸಿ ಸತ್ಕರಿಸಬೇಕು. ಮರುದಿವಸ ಉಪವಾಸ ಮುಗಿಸಿ, ಆಹಾರ ಸ್ವೀಕರಿಸಿ, ಆ ಬಳಿಕ ಯಾತ್ರೆಗೆ ಹೊರಡಬೇಕು. ದಿನಕ್ಕೆ ಒಂದು ಬಾರಿ ಮಾತ್ರ ಆಹಾರ ಸೇವಿಸಬೇಕು. ಹೀಗೆ ಹಲವಾರು ನಿಯಮಗಳಿದ್ದು ತೀರ್ಥಯಾತ್ರೆ ಮುಗಿಸಿ ಸಂಕಷ್ಟಗಳನ್ನು ತೀರಿಸಿಕೊಂಡ ಬಳಿಕ ಫಲಾನುಫಲಗಳನ್ನು ಪಡೆಯುತ್ತಾರೆ ಎಂದು ತಿಳಿಸಿದ್ದಾರೆ. ಅವುಗಳನ್ನು ಉದಾಹರಣೆ ಸಹಿತ ನೋಡುವುದಾದರೆ ಶಂಭುತೀರ್ಥ "ಇದು ರಂಗನಾಥ ಕ್ಷೇತ್ರದ ಪೂರ್ವ ಭಾಗದಲ್ಲಿದೆ. ಇದರಲ್ಲಿ ಸ್ನಾನ ಮಾಡಿದವರು ಬ್ರಹ್ಮಹತ್ಯದ ದೋಷಗಳು ಪರಿಹಾರವಾಗುವುವು. ಸಕಲಾಪೇಕ್ಷೆಗಳು ಸಿದ್ಧಿಸುವುದು. ಬ್ರಹ್ಮಹತ್ಯೆದೋಷ ಪ್ರಾಪ್ತವಾಗಿದ್ದು ಶಿವನು ಈ ತೀರ್ಥದಲ್ಲಿ ಸ್ನಾನ ಮಾಡಲು ಅವನು ದೋಷವಿದೂರನಾದನು. ಆದ್ದರಿಂದಲೇ ಈ ತೀರ್ಥಕ್ಕೆ ಶಂಭಾ ತೀರ್ಥವೆಂದು ಹೆಸರು ಬಂದಿತು."[೧೩]

ಅದೇ ರೀತಿ "ಯಾದವಗಿರಿ ಮಹಾತ್ಮೆಯಲ್ಲಿ ಪಾವನತರವಾದ ಅಷ್ಟತೀರ್ಥಗಳಿವೆ. ಅವುಗಳಲ್ಲಿ ಮುಖ್ಯವಾದುದು ಕಲ್ಯಾಣತೀರ್ಥ. ಆದಿ ವರಾಹಮೂರ್ತಿಯು ಭೂದೇವಿಯನ್ನು ಉದ್ಧರಿಸುವುದಕ್ಕಾಗಿ ಅವಳನ್ನು ಎತ್ತಿಕೊಂಡು ಬಂದಾಗ ಅವನಿಗೆ ದಣಿವಾಗಿ ಮೈಯಿಂದ ಬೆವರು ಸುರಿದು ಅಲ್ಲಿ ಮಡುಗದ್ದೆ ನಿಂತಿತು. ಅದು ಕಲ್ಯಾಣ ತೀರ್ಥವೆಂದು ಹೆಸರನ್ನು ಪಡೆಯಿತು. ಪಾಲ್ಗುಣ ಮಾಸದಲ್ಲಿ ಗಂಗೆ ಇಲ್ಲಿಗೆ ಬಂದು ನೆಲೆಸಿ ತನ್ನ ಪಾಪವನ್ನು ಕಳೆದುಕೊಳ್ಳುತ್ತಾಳೆ. ಆಗ ಅದರ ನೀರು ಹಾಲು ಸೇರಿದಂತೆ ನಸು ಬಿಳುಪಾಗಿರುತ್ತದೆ. ಅದರ ತೀರದಲ್ಲಿ ಮಾಡಿದ ತಪೋ-ಧ್ಯಾನಗಳು ಹೆಚ್ಚಿನ ಫಲ ಕೊಡುತ್ತವೆ. ತೀರ್ಥದಲ್ಲಿ ಮಿಂದೇಳುವ ಸರ್ವಪಾಪಿಗಳೂ ಪಾಪರಹಿತರಾಗುವರು. ಆ ಕ್ಷೇತ್ರವಾಸಿಯಾದ

ಬ್ರಾಹ್ಮಣನೊಬ್ಬನಿಗೆ ಚತುರ್ವೇದಿ ಎಂಬ ಗರ್ವಿಷ್ಟ ಬ್ರಾಹ್ಮಣನು ಅಪಚಾರವೆಸಗಿ ತತ್ಪಲದಿಂದಾಗಿ ಬ್ರಹ್ಮರಾಕ್ಷಸನಾಗಿ ಜನಿಸಿದನು. ಆ ನಂತರ ಅವನು ಆ ತೀರ್ಥದಲ್ಲಿ ಸ್ನಾನ ಮಾಡಿದ್ದರಿಂದ ಶಾಪಮುಕ್ತನಾದನು"[೧೪] ಎಂಬ ಉಲ್ಲೇಖವು ಪುರಾಣದಿಂದ ಕಂಡುಬರುತ್ತದೆ. ಈ ರೀತಿಯಾಗಿ ಕಥಾಹಂದರದಲ್ಲಿ ಕೊನೆಗೆ ಫಲಾನುಫಲಗಳು ಸಿಗುತ್ತವೆ ಎಂದು ಹೇಳುವುದರ ಮೂಲಕ ಭಯ-ಭಕ್ತಿಯನ್ನು ಎಲ್ಲಾ ತೀರ್ಥಕ್ಷೇತ್ರಗಳಲ್ಲಿಯೂ ತಿಳಿಸಲಾಗಿದೆ. ಹೀಗೆ ಸಾಕಷ್ಟು ಉದಾಹರಣೆಗಳನ್ನು ನೋಡಬಹುದು. ಆದರೆ ಈ ಎಲ್ಲಾ ಪುರಾಣ ಇಲ್ಲವೇ ಮಹಾತ್ಮ್ಯೆಗಳ ವಿಷಯವಸ್ತು ಒಂದೇಯಾದರೂ ಸ್ಥಳ, ಚರಿತ್ರೆ, ದೇವರುಗಳು ಮಾತ್ರ ಬೇರೆ ಬೇರೆಯಾಗಿರುತ್ತವೆ.

ಹೀಗೆ ದೇವರುಗಳು, ಋಷಿಗಳು ತಮ್ಮ ಸಾನಿಧ್ಯದಿಂದ ತೀರ್ಥಕ್ಷೇತ್ರಗಳನ್ನು ಪಾವನಗೊಳಿಸಿದರು ಅಥವಾ ನಿರ್ಮಿಸಿದರು ಎಂಬ ನಂಬಿಕೆ ಜನಮನದಲ್ಲಿದೆ. ಪ್ರತಿಯೊಂದು ಧರ್ಮದವರಿಗೂ ತಮ್ಮದೇ ಆದ ತೀರ್ಥಕ್ಷೇತ್ರಗಳಿವೆ. ಶೈವಧರ್ಮವರಿಗೆ ಕಾಶಿರಾಮೇಶ್ವರ ತೀರ್ಥಕ್ಷೇತ್ರವಾದರೆ; ವೈಷ್ಣವರಿಗೆ ಶ್ರೀರಂಗ, ಪಶ್ಚಿಮರಂಗ, ಉಡುಪಿ, ತಿರುಪತಿಯೂ; ಅದೇ ರೀತಿ ಜೈನರಿಗೆ ಶ್ರವಣಬೆಳಗೊಳ, ಪಾವಾಪುರಿ, ಮೂಡಬಿದಿರೆ ಮೊದಲಾದವು ಪವಿತ್ರ ಪುಣ್ಯಕ್ಷೇತ್ರಗಳಾಗಿವೆ. ಶಂಕರಾಚಾರ್ಯ, ರಾಮಾನುಜಚಾರ್ಯ, ಮಧ್ವಾಚಾರ್ಯ ಮೊದಲಾದವರು ತೀರ್ಥಯಾತ್ರೆಯ ಹಿನ್ನೆಲೆಯಲ್ಲಿ ಹಲವಾರು ಮಠಗಳನ್ನು ಸ್ಥಾಪಿಸಿದ್ದರು. ಇಂತಹ ಮಹಾನ್ ಪುರುಷರು, ಆಚಾರ್ಯರು, ಋಷಿವರ್ಯರು, ರಾಜರು, ಮಠಾಧಿಪತಿಗಳು ತಾವು ಸಂಪರ್ಕಿಸಿದ ತೀರ್ಥಕ್ಷೇತ್ರಗಳ ಮಹಿಮೆಯನ್ನು ಶಿಷ್ಯರಿಗೆ ನಿರೂಪಿಸಿದ ನಂತರ ಜನರ ಬಾಯಲ್ಲಿ ಕತೆಗಳಾಗಿ ಹುಟ್ಟಿಕೊಂಡು; ಇವೇ ಕಾಲಾನಂತರದಲ್ಲಿ ಕ್ಷೇತ್ರ ಸಾಹಿತ್ಯದ ಉಗಮಕ್ಕೆ ಕಾರಣವಾಗಿದ್ದಿರಬಹುದು. ಈ ರೀತಿಯಲ್ಲಿ ನಿರೂಪಿತವಾದ ಪುರಾಣಗಳು, ಅಷ್ಟಾದಶ ಪುರಾಣಗಳು. ಇಂತಹ ಮಹಾತ್ಮ್ಯೆಗಳ ಉಗಮಕ್ಕೆ ಮುಖ್ಯವಾದ ಮೂಲ ಆಕರಗ್ರಂಥಗಳಾಗಿವೆ.

ಇಂತಹ ಮಹಾತ್ಮ್ಯೆಗಳು ಅತೀ ಹೆಚ್ಚು ಕ್ಷೇತ್ರ ಮಹಾತ್ಮ್ಯೆಗಳ ಉಗಮಕ್ಕೆ ಕಾರಣವಾದವು. ಅದು ಮೈಸೂರು ಅರಸರ ಕಾಲಘಟ್ಟದಲ್ಲಿ ಕ್ಷೇತ್ರ ಮಹಾತ್ಮ್ಯೆಗಳ ಸುಗ್ಗಿಯ ಕಾಲವೆಂದು ಹೇಳಲಾಗುತ್ತದೆ. ಈ ಕಾಲದಲ್ಲೇ ವಿದೇಶಿಯರ ಆಕ್ರಮಣದಿಂದ ಒಂದು ಕಡೆ ಭಾರತೀಯ ಸಂಸ್ಕೃತಿ ನಾಶವಾದರೆ; ಮತ್ತೊಂದು ಕಡೆ ಹಿಂದೂ ಧರ್ಮಗಳಲ್ಲೆ ನಮ್ಮ ಧರ್ಮ ಶ್ರೇಷ್ಠ ತಮ್ಮ ಧರ್ಮ ಕನಿಷ್ಠ ಎಂಬ ಭಾವನೆಗಳು ಮೂಡಿದ್ದಿರಬೇಕು. ಇದನ್ನು ಸಾಹಿತ್ಯದ ಉದ್ದಕ್ಕೂ ನೋಡುವುದಾದರೆ ೧೬-೧೭ನೇ ಶತಮಾನದಲ್ಲಿ ಅರಸರಲ್ಲಿ

ಒಬ್ಬರು ವೀರಶೈವ ಧರ್ಮಕ್ಕೆ ಪ್ರಾಶಸ್ತ್ಯವನ್ನು ಕೊಟ್ಟರೆ; ಮತ್ತೊಬ್ಬರು ವೈಷ್ಣವ ಧರ್ಮಕ್ಕೆ ಪ್ರಾಶಸ್ತ್ಯವನ್ನು ನೀಡಿರುವುದು ತಿಳಿದುಬರುತ್ತದೆ. ಇದರಿಂದ ಆಯಾ ಅರಸರ ಆಳ್ವಿಕೆಯಂತೆ ಧರ್ಮ ಸಾಹಿತ್ಯ ಉಗಮವಾಯಿತು ಎಂದರೆ ತಪ್ಪಾಗುವುದಿಲ್ಲ.

ಉದಾಹರಣೆಗೆ ಚಿಕ್ಕದೇವರಾಯನ ಕಾಲಘಟ್ಟದಲ್ಲಿ ಯಾದಗಿರಿ ಮಹಾತ್ಮ್ಯೆ, ಪಶ್ಚಿಮರಂಗ ಮಹಾತ್ಮ್ಯೆ, ಶ್ರೀರಂಗ ಮಹಾತ್ಮ್ಯೆ, ಕಮಲಾಚಲ ಮಹಾತ್ಮ್ಯೆ, ವೆಂಕಟಗಿರಿಯ ಮಹಾತ್ಮ್ಯೆ ಎಂಬ ಧಾರ್ಮಿಕ ಕಾವ್ಯ ಸಾಹಿತ್ಯ ರಚನೆಯಾಗಿದೆ. ಅದೇ ರೀತಿ ಪ್ರೌಢದೇವರಾಯನ ಕಾಲದಲ್ಲಿ ವೀರಶೈವ ಸಾಹಿತ್ಯಕ್ಕೆ, ವೀರಶೈವ ಧರ್ಮಕ್ಕೆ ಅತೀ ಹೆಚ್ಚು ಪ್ರೋತ್ಸಾಹ ನೀಡಿರುವುದು ಸಹ ತಿಳಿದುಬರುತ್ತದೆ. ಇಂತಹ ಸ್ಥಳದ ಮಹಿಮೆಯೊಂದಿಗೆ ಧಾರ್ಮಿಕ ವಿಷಯ ವಸ್ತುವನ್ನು ಒಳಗೊಂಡು ಜನರಲ್ಲಿ ನಂಬಿಕೆ ಹುಟ್ಟಿಸಲು ರಾಮ, ಸೀತೆ, ಶಿವ, ವಿಷ್ಣು, ಬ್ರಹ್ಮ ಮೊದಲಾದವರ ದೇವಾದಿ ದೇವತೆಗಳು ಹಾಗು ಪೌರಾಣಿಕ ವ್ಯಕ್ತಿಗಳಾದ ಅಗಸ್ತ್ಯ, ನಂದಿ, ಭೃಂಗಿ, ವೃಷಭ, ಹಲವರ ಕಥೆಗಳನ್ನು ತಳಕು ಹಾಕಿ ನಿರೂಪಿಸುತ್ತ ಹೋಗಿರುವುದನ್ನು ಮುಖ್ಯವಾಗಿ ಗಮನಿಸಲಾಗಿದೆ.

ಇಂತಹ ತೀರ್ಥಕ್ಷೇತ್ರಗಳ ವಿವರದೊಂದಿಗೆ ಭೂಮಿಯ ಸೃಷ್ಟಿ, ಲಯ ಮತ್ತು ರಾಜರ ವಂಶಾವಳಿಯನ್ನು ಕೆಲವೊಮ್ಮೆ ಮಹಾತ್ಮ್ಯೆಗಳಲ್ಲಿ ಸೇರಿಸಲಾಗಿದೆ. ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಅದರಲ್ಲೂ ೧೬ನೇ ಶತಮಾನದ ಬಳಿಕ ತೀರ್ಥಕ್ಷೇತ್ರವನ್ನು ಕುರಿತ ವಿಚಾರಗಳು ಕೃತಿ ರಚನೆಗೆ ಪ್ರೇರಣೆ ನೀಡಿರುವುದು ಕಂಡುಬರುತ್ತದೆ. ಗಿರಿ, ನದಿ, ಬೆಟ್ಟಗಳನ್ನು ಮುಖ್ಯವಾಗಿ ಇರಿಸಿಕೊಂಡು ಹಲವಾರು ದೇವಾಲಯಗಳಿರುವ ಪ್ರಮುಖ ಗಿರಿಗಳನ್ನು ಮುಖ್ಯವಾಗಿಟ್ಟುಕೊಂಡು ಸ್ಥಳ ಮಹಾತ್ಮ್ಯೆ ಕೃತಿಗಳು ರಚನೆಯಾಗಿವೆ. ಅದೇ ರೀತಿ ನದಿಗಳಿಗೆ ಸಂಬಂಧಿಸಿದಂತೆ ಕಾವೇರಿ ಮಹಾತ್ಮ್ಯೆ, ತಲಕಾವೇರಿ ಮಹಾತ್ಮ್ಯೆ ಎಂಬ ಕೃತಿಗಳೂ ಕೂಡ ರಚನೆಯಾಗಿವೆ. ಇವುಗಳ ಮುಖ್ಯ ವಸ್ತುವೇ ಕ್ಷೇತ್ರಗಳನ್ನು ವಿವರಿಸುವುದು. ಅದಕ್ಕೆ ಪುರಾಣದಿಂದ ಕೂಡಿದ ಧಾರ್ಮಿಕ ಮೌಲ್ಯಗಳನ್ನು ಕಟ್ಟಿಕೊಟ್ಟು ಧಾರ್ಮಿಕ ತತ್ವ ಪ್ರಚಾರ ಮಾಡುವುದು. ಇದೇ ರೀತಿ ಆ ಸ್ಥಳದಲ್ಲಿರುವ ತೀರ್ಥಕ್ಷೇತ್ರಗಳ ಮೌಲ್ಯವನ್ನು ಕುರಿತು ವರ್ಣಿಸುವುದೇ ಪ್ರಮುಖವಾಗಿರುತ್ತದೆ. ಇಂತಹ ಒಂದು ಪರಿಕಲ್ಪನೆಯನ್ನು ಭಾರತೀಯ ಸಂಸ್ಕೃತಿಯಲ್ಲಿ ಬಹಳ ಹಿಂದಿನಿಂದಲೂ ನೋಡಬಹುದು. ಉದಾಹರಣೆಗೆ ಉತ್ತರ ಭಾರತದಲ್ಲಿ ಗಂಗಾನದಿ ಪ್ರಸಿದ್ಧಿ ಪಡೆದಂತೆ ಅದರ ಮಡಿಲಲ್ಲಿರುವ ಗಯಾ, ಕಾಳಿ, ಕೇದಾರ ನದಿಗಳು ಕೂಡ ಪ್ರಸಿದ್ಧ ಯಾತ್ರಾಸ್ಥಳಗಳಾಗಿವೆ.

ದಕ್ಷಿಣ ಭಾರತದಲ್ಲಿ ಕೃಷ್ಣ, ತುಂಗಭದ್ರಾ, ಕಾವೇರಿ ನದಿಗಳು ಮಹತ್ವವಾಗಿವೆ. (ಹೀಗೆ ಪ್ರಸಿದ್ಧ ಧಾರ್ಮಿಕ ಕ್ಷೇತ್ರದ ಹಿಂದೆ ಪ್ರಮುಖ ನದಿಗಳು, ಪ್ರಮುಖ ರಾಜ ಪ್ರಭುತ್ವ ಇರುವುದನ್ನು ನೋಡಬಹುದು. ಹಾಗೆ ನೋಡಿದರೆ ಪ್ರಸಿದ್ಧ ಸಂಸ್ಕೃತಿಗಳು ಬೆಳೆದುಬಂದಿರೋದು ನದಿ ದಡಗಳಲ್ಲಿಯೆ. ಉದಾಹರಣೆಗೆ ಹರಪ್ಪ, ಮೆಹೆಂಜದಾರೋ ಸಂಸ್ಕೃತಿಗಳನ್ನು ನೋಡಬಹುದು.) ಅದೇ ರೀತಿ ತುಂಗಭದ್ರಾ ಮಡಿಲಲ್ಲಿ ಶೃಂಗೇರಿ, ತೀರ್ಥಹಳ್ಳಿ, ಕೋಡಲಿ, ಹರಿಹರ, ಉಕ್ಕಡಗಾತ್ರಿ, ಮೈಲಾರ, ಕುರುವತ್ತಿ, ಹಂಪಿ, ಮಂತ್ರಾಲಯಗಳಿವೆ. ಕೂಡಲಸಂಗಮ, ಸವದತ್ತಿ, ಅಣ್ಣಿಗೇರಿ, ಇಂಗಳೇಶ್ವರ, ಲಕ್ಕುಂಡಿ, ಕನಕಗಿರಿ, ಸುರಪುರ ಮೊದಲಾದವು ಕೃಷ್ಣನದಿ ಮತ್ತು ಅದರ ಉಪನದಿಗಳ ಪ್ರದೇಶದಲ್ಲಿ ಕಂಡುಬರುತ್ತವೆ. ಶ್ರವಣಬೆಳಗೊಳ, ಧರ್ಮಸ್ಥಳ (ನೇತ್ರಾವತಿ), ಗೋಕರ್ಣ ಮೊದಲಾದಗಳು ಪ್ರಮುಖ ಕ್ಷೇತ್ರ ನೆಲೆಗಳಾಗಿವೆ. ಜಾಗತಿಕ ಮಟ್ಟದಲ್ಲಿ ಪ್ರಮುಖ ಧರ್ಮಗಳು ತಮ್ಮ ಆಚಾರ–ವಿಚಾರ ಮತ್ತು ಸಂಸ್ಕೃತಿಯ ಧಾರ್ಮಿಕ ನೆಲೆಗಳನ್ನು ನಿರ್ಮಿಸಿಕೊಂಡಿವೆ.

ಚಾರಿತ್ರಿಕವಾಗಿಯೂ ಸಹ ಈ ಧಾರ್ಮಿಕ ಕ್ಷೇತ್ರಗಳ ಉಗಮಕ್ಕೆ ಮಹಾತ್ಮ್ಯೆಗಳು ಕಾರಣವಾಗಿವೆ. ಆ ಮೂಲಕ ವ್ಯಕ್ತಿ ಹಾಗೂ ಪ್ರಕೃತಿಯ ನಡುವೆ ಭಾವನೆಗಳ ಮೂಲಕ ಸೇತುವೆಯನ್ನು ನಿರ್ಮಿಸಿದೆ. ಕ್ಷೇತ್ರ ಸ್ಥಳದ ಬಗ್ಗೆ ಇರುವ ಭಕ್ತಿ, ಭಾವನೆ, ಗೌರವ, ಪ್ರೀತಿ, ಕಷ್ಟ, ನಷ್ಟ, ಯೋಗ, ತಪಸ್ಸುಗಳನ್ನು ನಾಗರೀಕತೆಯ ಸಾಂಕೇತಿಕವಾಗಿ ಮನುಷ್ಯ ತನ್ನನ್ನು ತಾನು ಅರ್ಪಿಸಿಕೊಳ್ಳುತ್ತಾನೆ. ಇಂತಹ ನೆಲೆಗಳು ಕಾಲಾನಂತರದಲ್ಲಿ ಮಹಾತಿರುವನ್ನು ಸೃಷ್ಟಿಸಿವೆ. ಉದಾಹರಣೆಗೆ ತಿರುಪತಿ ಎಂದರೆ ತಿಮ್ಮಪ್ಪ, ಶ್ರೀಶೈಲ ಎಂದರೆ ಮಲ್ಲಿಕಾರ್ಜುನ, ಕಾಳಹಸ್ತಿ ಎಂದರೆ ಬೇಡರ ಕಣ್ಣಪ್ಪ, ಮದುರೆ ಎಂದರೆ ಮೀನಾಕ್ಷಿ ಹೀಗೆ ವ್ಯಕ್ತಿಯ ಮೂಲಕ ಸ್ಥಳ ಮತ್ತು ಸ್ಥಳದ ಮೂಲಕ ವ್ಯಕ್ತಿಗೆ ಮಹತ್ವ ಬಂದಿದೆಯೋ ಎಂಬುದನ್ನು ಚಿಂತನೆ ಮಾಡಬೇಕಿದೆ.

ಯಾವುದೇ ಒಂದು ಕ್ಷೇತ್ರಕ್ಕೂ, ಯಾತ್ರಾಸ್ಥಳಕ್ಕೂ ಸಹ ತನ್ನದೇ ಆದ ಇತಿಹಾಸ, ಪುರಾಣ, ಮಹಾತ್ಮ್ಯೆ ಇರುವುದು ವಿಶೇಷ. ತೀರ್ಥಕ್ಷೇತ್ರಗಳ ಕಲ್ಪನೆ ಭಾರತದ ಚರಿತ್ರೆ ಮತ್ತು ಸಂಸ್ಕೃತಿಯಲ್ಲಿ ಆಳವಾಗಿ ಬೇರೂರಿದೆ. ಈ ಕಲ್ಪನೆ ಇಂದು ವಿರಳವಾದರೂ ಗತಕಾಲದಲ್ಲಿ ವಿಶೇಷವಾಗಿ ರಾಜಪ್ರಭುತ್ವದಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿತ್ತು ಎಂಬುದನ್ನು ಮರೆಯಲಾಗದು. ಅಂದಿನ ಸಾಂಸ್ಕೃತಿಕ, ಧಾರ್ಮಿಕ, ಆಧ್ಯಾತ್ಮಿಕ ನೆಲೆಗಳು ನದಿ ದಂಡೆಗಳಲ್ಲಿ ನಿರ್ಮಾಣಗೊಂಡಿದ್ದು ವಿಶೇಷ. ಇಂಥ ಸ್ಥಳಗಳು ಕಾಲಾನಂತರದಲ್ಲಿ ಧಾರ್ಮಿಕ, ಯಾತ್ರಸ್ಥಳ, ತೀರ್ಥಕ್ಷೇತ್ರಗಳಾಗಿದ್ದು ಗಮನಾರ್ಹ. ಹಿಂದೂ ಧರ್ಮದಲ್ಲಿ

ಎಲ್ಲೆಲ್ಲಿ ಕೊಳ, ನದಿ, ಜಲ ಪ್ರದೇಶಗಳಾಗಿವೆಯೋ ಆ ಎಲ್ಲಾ ಕ್ಷೇತ್ರಗಳೂ ಸಹ ಪವಿತ್ರ ಕ್ಷೇತ್ರಗಳಾಗಿವೆ. ಪುರಾಣದಲ್ಲಿ ಶಿವ-ಪಾರ್ವತಿಯರು ನಂದಿ ವಾಹನವನ್ನೇರಿ ಭೂಲೋಕವನ್ನು ಯಾತ್ರೆ ಮಾಡಿ ಜನರ ಸ್ಥಿತಿಗತಿ ಅರಿತರೆಂದು ನಂದಿ ಮಹಾತ್ಮ್ಯೆಯಲ್ಲೇ ತಿಳಿಸಲಾಗಿದೆ. ಇಂತಹ ಮಹಾತ್ಮ್ಯೆಗಳಲ್ಲಿ ಪುಣ್ಯಕ್ಷೇತ್ರದಲ್ಲಿರುವ ನೀರು ಪವಿತ್ರವಾದುದು.

ಇಲ್ಲಿ ಪುಣ್ಯಪುರುಷರ ಬೆವರಿನಿಂದ ಅಥವಾ ಅವರ ಪಾದಗಳನ್ನು ತೊಳೆದ ನೀರು, ಇಲ್ಲವೆ ಅವರೇ ನಿರ್ಮಿಸಿದ ತೀರ್ಥಕ್ಷೇತ್ರಗಳೆಂದೇ ಇದನ್ನು ನಂಬಲಾಗಿದೆ. ತೀರ್ಥಕ್ಷೇತ್ರವನ್ನು ಸಂದರ್ಶಿಸಲಾಗದವರು ಬರೀ ತೀರ್ಥವನ್ನು ಕುಡಿದರೆ ತೀರ್ಥಯಾತ್ರೆ ಮಾಡಿದಷ್ಟು ಲಾಭ ಸಿಗುತ್ತದೆ ಎಂಬ ನಂಬಿಕೆಯು ಇದೆ. ಅದೇ ರೀತಿಯಂತೆ ಯಾರು ತೀರ್ಥಯಾತ್ರೆಯನ್ನು ಮಾಡಲು ಸಾಧ್ಯವಿಲ್ಲವೋ ಅಂಥವರು ಮಹಾತ್ಮ್ಯೆಗಳನ್ನು ಓದಿದರೆ ತೀರ್ಥಯಾತ್ರೆ ಮಾಡಿದಷ್ಟು ಪುಣ್ಯ ಲಭಿಸುವುದೆಂದು ಕೃತಿಯ ಕೊನೆಯಲ್ಲಿ ಫಲಶೃತಿ ಇರುತ್ತದೆ. ಇವು ತೀರ್ಥಕ್ಷೇತ್ರಗಳಾಗದೆ ಸಾಂಸ್ಕೃತಿಕ ಉಗಮ ಸ್ಥಳಗಳು ಆಗಿವೆ ಎಂದರೆ ತಪ್ಪಾಗಲಾರದು. ಹಾಗೆ ವಿಭಿನ್ನ ಸಂಸ್ಕೃತಿಯ ವಿವಿಧ ಸ್ತರದ ಬಡವ-ಬಲ್ಲಿದರ ಸಂಗಮಕ್ಕೆ ಈ ಕ್ಷೇತ್ರಗಳ ಮೂಲಕ ಒಗ್ಗೂಡಿಸುವ ಕೆಲಸವೂ ಆಗುತ್ತದೆ. ಇಲ್ಲಿ ಎಲ್ಲಾ ಮತದವರು ಬೆರೆಯುತ್ತಾರೆ. ತೀರ್ಥಕ್ಷೇತ್ರಗಳ ಮಹತ್ವವಾದ ಪಾತ್ರವನ್ನು ಅಲ್ಲದೇ ವಿವಿಧತೆಯಲ್ಲಿ ಏಕತೆಯನ್ನು ಸಾರುವ ಪ್ರತೀಕಗಳಾಗಿಯೂ ಈ ಮಹಾನ್ ಕ್ಷೇತ್ರಗಳಾಗಿ ಹೊರಹೊಮ್ಮಿವೆ. ಭಾರತವು ಹಲವು ರಾಜ್ಯಗಳಾಗಿ ವಿಭಾಗಗೊಂಡಿದ್ದರೂ ಜನರು ಹಲವು ಸಂಪ್ರದಾಯ ಮತ್ತು ಉಪಸಂಪ್ರದಾಯಗಳಲ್ಲಿ ಬೇರೆ ಬೇರೆಯಾಗಿದ್ದರೂ ಈ ಕ್ಷೇತ್ರಗಳು ಭಾರತ ಸಂಸ್ಕೃತಿಯ ಮೂಲಭೂತವಾದ ಧಾರ್ಮಿಕ ಭಾವೈಕ್ಯತೆಯನ್ನು ಪೋಷಿಸಿಕೊಂಡು ಬರಲು ಸಹಾಯ ಮಾಡಿವೆ.

ಉತ್ತರ ಮತ್ತು ದಕ್ಷಿಣ ಯಾವುದೇ ಭಾಗದವರಾಗಿದ್ದರೂ ಕಾಶಿರಾಮೇಶ್ವರಗಳಂತಹ ತೀರ್ಥಕ್ಷೇತ್ರಗಳು ಜನರ ಮನದಲ್ಲಿ ಪವಿತ್ರ ಸ್ಥಳ ಕ್ಷೇತ್ರಗಳಾಗಿವೆ. ಹಿಂದೂ ಜನರು ಹಲವು ಜಾತಿಗಳಲ್ಲಿ ಒಡೆದು ಜಾತೀಯತೆಯ ವಿಶಿಷ್ಟ ಸಂಪ್ರದಾಯದಿಂದ ಹಲವು ಆಚಾರ-ವಿಚಾರಗಳನ್ನು, ವೈಜ್ಞಾನಿಕತೆ, ವೈಚಾರಿಕತೆಯಿಂದ ಹಿಂದೂ ಧರ್ಮವನ್ನು ತೊರೆದರು. ಎಲ್ಲೋ ಒಂದು ಕಡೆ ಇಂತಹ ಸಂಪ್ರದಾಯ ಮತ್ತು ಸಂಸ್ಕೃತಿಯು ಇಂತಹ ಕ್ಷೇತ್ರಗಳಲ್ಲಿ ಉಳಿದಿದೆ ಎಂದು ಹೇಳಬಹುದು. "ಹೇಗೆ ಮನುಷ್ಯನ ದೇಹದಲ್ಲಿ ಒಂದು ಭಾಗ ಮತ್ತೊಂದಕ್ಕಿಂತ ಮಿಗಿಲೆಂದು ತಿಳಿಯುತ್ತೇವೋ ಹಾಗೆ ಭೂಮಿಯಲ್ಲಿ ಕೆಲವು ಸ್ಥಳಗಳು ಬಹುಪವಿತ್ರವಾದುದೆಂದು ಪರಿಗಣಿಸಲ್ಪಟ್ಟಿದೆ. ಇದಕ್ಕೆ ಪ್ರಮುಖವಾಗಿ

ಮೂರು ಕಾರಣಗಳನ್ನು ಗುರುತಿಸಬಹುದು. ಆ ಸ್ಥಳವು ಪ್ರಾಕೃತಿಕ ಗುಣವಿಶೇಷಗಳಿಂದ ಅದ್ಭುತ ಮಹಿಮೆ ಹೊಂದಿರುವುದು, ತೀರ್ಥ ಜಲಾಶಯಗಳ ಪರಿಸರವಾಗಿರುವುದು ಅಥವಾ ಆ ಸ್ಥಳ ಋಷಿಮುನಿಗಳಿಗೆ ಆಶ್ರಯವಾಗಿರಬೇಕು"[೧೫] ಅದರದೇ ಆದ ವೈಶಿಷ್ಟ್ಯವನ್ನು ಹೊಂದಿ ಪುಣ್ಯ, ಪ್ರಭಾವವನ್ನು ಬೀರಿ ಕಾಲಾನಂತರದಲ್ಲಿ ಸ್ಥಳ ಮಹಿಮೆ ಮತ್ತು ಪುಣ್ಯಕ್ಷೇತ್ರ ಎಂಬ ಅರ್ಥದಲ್ಲಿ ಪ್ರಸಿದ್ಧಿ ಪಡೆದಿವೆ.

ಇಂತಹ ಸ್ಥಳಕ್ಷೇತ್ರಗಳನ್ನು ಜನರು ಪುಣ್ಯಭಾವದಿಂದ ಕಾಣುತ್ತಾರೆ. ಇದಕ್ಕೆ ದೈವತ್ವವನ್ನು ಸಹ ಕೊಡಲಾಗಿದೆ. ದೈವತ್ವದ ಕಲ್ಪನೆಯನ್ನು ಕೊಡಲು ಪ್ರಮುಖ ಕಾರಣವೆಂದರೆ ಭಯ-ಭಕ್ತಿಯಿಲ್ಲದೆ ಮನುಷ್ಯ ನಿರಂಕುಶನಾಗಿ ಬಿಡುವನೆಂಬ ನಿರೀಕ್ಷೆಯೊಂದಿಗೆ ಈ ರೀತಿ ಪರಿಕಲ್ಪನೆಯನ್ನು ಕಟ್ಟಿಕೊಟ್ಟಿರಬೇಕು; ಮತ್ತೊಂದು ಕಾರಣವೆಂದರೆ ಹರಿಯುವ ನದಿಯಲ್ಲಿ ವಿವಿಧ ಬಗೆಯ ಔಷಧ ಖನಿಜ ರಾಸಾಯನಿಕ ಗುಣವುಳ್ಳ ನೀರಿದ್ದು ಅದರಲ್ಲಿ ಸ್ನಾನ ಮಾಡಿದರೆ ಕೆಲವು ವ್ಯಾದಿಗಳು ನಾಷವಾಗುತ್ತವೆ ಎಂಬ ವೈಜ್ಞಾನಿಕವಾದ ಆಶಯವೂ ಇರಬಹುದು. ಇದಕ್ಕೆ ಪೂರ್ವಿಕರು ದೈವಿಕ ಪರಿಕಲ್ಪನೆಯನ್ನು ಕೊಟ್ಟು ಪಾಪನಾಶವಾಗಿ, ದೋಷಗಳು ಮುಕ್ತವಾಗಿ ಆರೋಗ್ಯ ವೃದ್ಧಿಸುತ್ತದೆ. ಜೊತೆಗೆ ಶಾಂತಿ, ನೆಮ್ಮದಿ ಲಭಿಸುತ್ತದೆಂಬ ನಂಬಿಕೆಯನ್ನು ಸ್ಥಳ ಮಹಾತ್ಮೆಗಳಲ್ಲಿ ಪ್ರಮುಖವಾಗಿ ಚಿತ್ರಿಸಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಸ್ಥಳ ಮಹಾತ್ಮೆಗಳು ಭಾರತದಲ್ಲಿ ಪುಣ್ಯಕ್ಷೇತ್ರಗಳ ವಿವರಣೆಯ ಒಂದು ರೂಪವೆಂದೇ ಹೇಳಬಹುದು. ಇಂತಹ ಸ್ಥಳಕ್ಷೇತ್ರಗಳ ಬಗೆಗೆ ಜನರಲ್ಲಿ ಭಯ, ಭಕ್ತಿ, ಶ್ರದ್ಧೆ, ನಿಷ್ಠೆಯಿರಲಿ ಎಂದು ಜನರನ್ನು ಆಕರ್ಷಿಸುವ ಸಲುವಾಗಿಯೇ ಪುರಾಣ ನಿಸರ್ಗದತ್ತ ವಸ್ತುವಿನೊಂದಿಗೆ ಸ್ಥಳೀಯ ಮಹಾತ್ಮೆಗಳನ್ನು ಕಟ್ಟಿಕೊಡುವಲ್ಲಿ ಮಧ್ಯಕಾಲೀನ ಸಾಹಿತ್ಯವು ಪ್ರಮುಖ ಪಾತ್ರವಹಿಸಿದೆ. ಇದಕ್ಕೆ ಇನ್ನೊಂದು ಕಾರಣವೆಂದರೆ ನಮ್ಮ ಜನತೆಯಲ್ಲಿ ಅಪಾರವಾದ ದಾರ್ಶನಿಕತೆ, ಆಚರಣೆ, ಪವಾಡ, ನಂಬಿಕೆಯು ಮುಖ್ಯ ಕಾರಣವಾಗಿದೆ. ಇಂತಹ ಕ್ಷೇತ್ರಗಳ ದರ್ಶನ ಸ್ಪರ್ಶದಿಂದ ಸರ್ವಫಲವೂ ಪ್ರಾಪ್ತಿಯಾಗುವುದೆಂಬ ಗಾಢವಾದ ವಿಶ್ವಾಸ ನಮ್ಮಲ್ಲಿ ಮನೆ ಮಾಡಿಕೊಂಡಿದೆ. ಇಂದಿಗೂ ಸಹ ಕಾಶಿ-ರಾಮೇಶ್ವರದಂತಹ ಪ್ರಮುಖ ಸ್ಥಳಗಳಲ್ಲಿ ಲಕ್ಷಾಂತರ ಭಕ್ತರ ಮುಕ್ತಿಯ ಬೀಡಾಗಿ ಪರಿಣಮಿಸಿರುವುದನ್ನು ಉದಾಹರಣೆಯಾಗಿ ಗಮನಿಸಬಹುದು.

### ೩.೩ ತತ್ವಕೇಂದ್ರಿತ ಮಹಾತ್ಮೆಗಳು

ಯಾವುದೇ ಭಾಷೆಯ ಸಾಹಿತ್ಯವನ್ನು ಅದರ ಸಾಹಿತ್ಯದ ದೃಷ್ಟಿಯಿಂದ ನೋಡುವುದು ಅಥವಾ ಕಟ್ಟಿಕೊಡುವುದು ಒಂದು ವಿಧವಾದರೆ, ಅದರಲ್ಲಿ ಅಭಿವ್ಯಕ್ತಗೊಂಡಿರುವ

ಸೋಪಜ್ಞತೆ, ಭಾಷೆ, ಲೋಕಾನುಭವ, ಕೃತಿಕಾರ ಕಟ್ಟಿಕೊಡುವ ತಾತ್ವಿಕ ಒಳನೋಟ ಇಲ್ಲಿ ಬಹಳ ಮುಖ್ಯವಾಗುತ್ತದೆ. ಕಾರಣ ಪ್ರತಿಯೊಬ್ಬ ಲೇಖಕನು ತನ್ನ ಕೃತಿಯಲ್ಲಿ ಸಮಕಾಲೀನ ಹಾಗೂ ವರ್ತಮಾನದ ವಿಷಯಗಳಿಗೆ ಅಭಿವ್ಯಕ್ತಿ ನೀಡುವುದು ಸಾಧ್ಯವಿರುತ್ತದೆ. ಕೃತಿಕಾರನ ಸಾಮರ್ಥ್ಯಕ್ಕನುಗುಣವಾಗಿ ಇದರ ಪ್ರಮಾಣವು ಪ್ರಾಮುಖ್ಯವು ವ್ಯತ್ಯಾಸವಾಗಬಹುದು. ಇಂಥ ಸಮಕಾಲೀನ ಸಂಗತಿಗಳನ್ನು ಸಾಮಾನ್ಯವಾಗಿ ಸಾಂಸ್ಕೃತಿಕ, ಸಾಮಾಜಿಕ, ಚಾರಿತ್ರಿಕ ಮತ್ತು ಧಾರ್ಮಿಕವಾಗಿ ಗುರುತಿಸಲಾಗುತ್ತದೆ. ಇಂತಹ ಪುರಾಣ, ಇತಿಹಾಸದ ಬರವಣಿಗೆಗಳಲ್ಲಿ ಮಹಾತ್ಮೆಯ ಸಾಹಿತ್ಯವು ರೂಪವನ್ನು ತಾಳಿವೆ. ಪುರಾಣ ಮಹಾತ್ಮೆಗಳಂತಹ ಪ್ರಾಚೀನ ಕೃತಿಗಳು ಕಾವ್ಯಾಂಶದಿಂದ ಕೂಡಿದ ಧಾರ್ಮಿಕ ತಾತ್ವಿಕತೆಯನ್ನು ಒಳಗೊಂಡು ರಚನೆಯಾಗಿವೆ. ಇವು ಕಾಲ್ಪನಿಕ ಕಥೆಗಳಾಗಿ ಪರಿಣಮಿಸಿ ಅದಕ್ಕೆ ದೇವರುಗಳ ಲೀಲೆ, ಪವಾಡ, ಭಯಾನಕ ಶೌರ್ಯಗಳ ಮೂಲಕ ಭಯ-ಭಕ್ತಿಯನ್ನು ಉಂಟುಮಾಡುವ ತಾತ್ವಿಕ-ನೀತಿಬೋಧಕ ಪ್ರಕಾರಗಳಾಗಿ ನಿಂತಿವೆ.

ಇಂತಹ ಪ್ರಕಾರ ವರ್ಗವು ಸುಧಾರಣವಾದ ಶುದ್ಧ ಸಾಹಿತ್ಯವರ್ಗದ ಶಿಷ್ಟಮಾದರಿಯಲ್ಲಿ ಸಾಹಿತ್ಯದ ಬೆಳವಣಿಗೆಯಾಗಿರುತ್ತದೆ. ಇಂತಹ ಪ್ರಕಾರದ ಕಾವ್ಯಗಳಲ್ಲಿ ಕೆಲವು ಗ್ರಂಥಕರ್ತೃವಿನ ನಾಮಾಧ್ಯೇಯವಿದ್ದರೆ ಕೆಲವು ಗ್ರಂಥಗಳಲ್ಲಿ ಪ್ರಾರ್ಥನಾ ಶ್ಲೋಕದಿಂದ, ಗುರುಹಿರಿಯರ ಸ್ಮರಣೆಯಿಂದಲೇ ಪ್ರಾರಂಭವಾಗುತ್ತದೆ. ಕೆಲವು ಕೃತಿಗಳಲ್ಲಿ ದೇವರ ಆಜ್ಞೆಯಂತೆ ರಾಜರ ಆಜ್ಞೆಯಂತೆ, ಮಠಾಧೀಶರ ಆಜ್ಞೆಯಂತೆ, ಕೃತಿರಚನೆ ಗೈದಿದ್ದೇನೆಂದು ಕೃತಿಕಾರನೇ ಹೇಳಿಕೊಂಡಿರುವ ಹಲವಾರು ಕೃತಿಗಳು ಸಿಗುತ್ತವೆ. ಈ ಬಗೆಯ ಕೃತಿಗಳು ಚರಿತ್ರೆಗಿಂತ ಭಿನ್ನವಾಗಿದ್ದು; ಕೇವಲ ಧಾರ್ಮಿಕ ತತ್ವ ಚಿಂತನೆಯ ಸಂಗತಿಗಳಿಂದ ಕೂಡಿರುತ್ತದೆ. ಇಂತಹ ಕೃತಿಗಳಲ್ಲಿ ವಾಸ್ತವಲ್ಲದ ಕಲ್ಪನಾತೀತ ವಿಚಾರಗಳನ್ನು ಒಳಗೊಂಡಿದ್ದರೂ ಸಹ ಕಟ್ಟಾ ಸಂಪ್ರದಾಯದ ಹಿನ್ನೆಲೆಯಲ್ಲಿ ರಚನೆಗೊಂಡಿರುವ ಪುರಾಣ ಮಹಾಕಾವ್ಯಗಳಂತಿವೆ.

ಯುಗಧರ್ಮದ ಅವಶ್ಯಕವೆಂಬಂತೆ ಕವಿಗಳು ತಮ್ಮ ತಮ್ಮ ಕೃತಿಗಳಲ್ಲಿ ಸ್ವಧರ್ಮದ ತಾತ್ವಿಕತೆಯನ್ನು ವರ್ಣಿಸುತ್ತಾ ಬಂದುದನ್ನು ಕಾಣುತ್ತೇವೆ. ಸಾಮಾನ್ಯವಾಗಿ ಬಹುಕಾಲದಿಂದಲೂ ನಡೆದುಕೊಂಡು ಬಂದ ಸಂಪ್ರದಾಯಕ್ಕಿಂತಲೂ ವಿಶೇಷವಾಗಿ ನಿಲ್ಲುವ ಯಾವುದೇ ಧರ್ಮವು ಬೆಳವಣಿಗೆಯ ಹಂತದಲ್ಲಿರುವಾಗ ಸಂಪ್ರದಾಯದಲ್ಲಿ ಆಳವಾಗಿ ಬೇರುಬಿಟ್ಟು ನಿಂತ ಅನ್ಯ ಮತಧರ್ಮಗಳು ಅದಕ್ಕೆ ಹಲವಾರು ಅಡ್ಡಿ ಆತಂಕಗಳನ್ನು ತಂದೊಡ್ಡುವುದು; ಇಂತಹ ವೇಳೆಯಲ್ಲಿ ಅದು ತನ್ನ ಅಸ್ತಿತ್ವವನ್ನು ಕಾಪಾಡಿಕೊಳ್ಳಲು

ಮುನ್ನುಗ್ಗಿ ಅವುಗಳೊಡನೆ ಹೋರಾಡಬೇಕಾಗಿರುತ್ತದೆ. ಆ ಮೂಲಕ ಜನತೆಯ ಮನಸ್ಸನ್ನು ಒಲಿಸಿಕೊಂಡು ಧರ್ಮಪ್ರಸಾರ ಮಾಡಲು ಯತ್ನಿಸುತ್ತದೆ. ಹೀಗೆ ಸಮಾಜದಲ್ಲಿ ಧರ್ಮಪ್ರಸಾರ ಮಾಡುವಲ್ಲಿ ಯಾವುದೇ ಧರ್ಮಗಳು ಸಹ ಹೊರತಾಗಿಲ್ಲ. ಉದಾಹರಣೆಯಾಗಿ ನೋಡುವುದಾದರೆ ವೀರಶೈವ ಧರ್ಮವು ೧೨ನೇ ಶತಮಾನದಲ್ಲಿ ಬಸವೇಶ್ವರರಿಂದ ಪುನರುತ್ಥಾನ ಹೊಂದಿ ಪ್ರಸಿದ್ಧಿಗೊಂಡುದು ಸರ್ವವಿಧಿತ. ಪ್ರಾರಂಭಿಕ ಹಂತದಲ್ಲಿ ಇದು ಜೈನ ಮತಧರ್ಮಗಳ ವಿರುದ್ಧ ಹೋರಾಡಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ದಿಟ್ಟತನದಿಂದ ಯತ್ನಿಸಿರುವುದು ಸಾಹಿತ್ಯ ಹೆಜ್ಜೆಗಳಲ್ಲಿ ಕಾಣಬಹುದು. ಮುಂದೆಯೂ ಹರಿಹರನು ಜೀವಿಸಿದ್ದ ಕಾಲಾವಧಿಯಲ್ಲಿ ಶೈವ–ವೀರಶೈವ ಧರ್ಮಗಳು ಮೊದಲಿನಂತೆಯೇ ವೈದಿಕ–ವೈಷ್ಣವ ಹಾಗೂ ಜೈನ ಮತಗಳೊಡನೆ ಸ್ಪರ್ಧಿಸಿ ಬಾಳಬೇಕಾದ ಸಂದರ್ಭಗಳನ್ನು ಗುರ್ತಿಸಬಹುದು.

ಇಂತಹ ಧರ್ಮವನ್ನು ಅಥವಾ ಧರ್ಮಗಳನ್ನು ಉಳಿಸಿಕೊಳ್ಳಲು ಹಲವು ಮಾರ್ಗಗಳನ್ನು ಅನುಸರಿಸಬೇಕಾಯಿತು. ಅಂತಹ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವಂತಹ ಕೃತಿಗಳೇ ವ್ಯಕ್ತಿ ಮಹಾತ್ಮ್ಯೆ, ಸ್ಥಳ ಮಹಾತ್ಮ್ಯೆ, ತತ್ವಕೇಂದ್ರಿತ ಮಹಾತ್ಮ್ಯೆಗಳಾಗಿ ಹುಟ್ಟಿಕೊಂಡವು. ಇವು ಅದ್ಭುತ ಶಕ್ತಿಯನ್ನು ಹಾಗೂ ಧಾರ್ಮಿಕ ತತ್ವಗಳ ಘನತೆಯನ್ನು ಆಚಾರದ ಮಹತ್ವವನ್ನು ಶ್ರೀಸಾಮಾನ್ಯರಿಗೆ ತಿಳಿಸಲು ವಿಶೇಷವಾಗಿ ವರ್ಣಿತವಾದ ಕೃತಿಗಳೆನ್ನಬಹುದು. ಮತಧರ್ಮಗಳ ಇತಿಹಾಸವನ್ನವಲೋಕಿಸಿ ಸಮಾಜದಲ್ಲಿ ಎರಡು ತೆರನಾದ ಜನರಿದ್ದುದು ಗಮನಕ್ಕೆ ಬರುತ್ತದೆ. ಒಂದು ಅಶಿಕ್ಷಿತ ಅಥವಾ ಸಾಮಾನ್ಯ ಜನ; ಇನ್ನೊಂದು ಸುಶಿಕ್ಷಿತ ಜನ. ಸುಶಿಕ್ಷಿತರು ಧರ್ಮ ತತ್ವಗಳನ್ನು ತರ್ಕಬದ್ಧವಾದ ರೀತಿಯಲ್ಲಿ ವಾದಿಸಿ, ವಿಶ್ಲೇಷಿಸಿ ಗ್ರಹಿಸಬಲ್ಲರು. ಸೂಕ್ಷ್ಮವಾದ ಗಹನವಾದ ತತ್ವ ಮಹಾತ್ಮ್ಯೆಗಳನ್ನು ಅವರ ನಿಶಿಮತೆಗೆ ಅಂತ್ಯ ಮಣ್ಣಿನಂತೆ ದೃಷ್ಟಿಮುಷ್ಟಿ ಗ್ರಾಹ್ಯವೆನ್ನುವಷ್ಟು ಸುಲಭವಾಗಿ ಅರ್ಥವಾಗುತ್ತದೆ. ಇಂತಹ ತಾತ್ವಿಕತೆಯನ್ನು ಜನರು ಪ್ರಭಾವ ಅಥವಾ ಆಕರ್ಷಿತವಾಗಲೀ ಎಂದು ತಾರ್ಕಿಕ ಜಟಿಲತೆಯುಂತಹ ಸಂಸ್ಕೃತ ಕೃತಿಗಳನ್ನು ಸುಲಭವಾಗಿ ಅವರಿಗೆ ಅರ್ಥವಾಗುವಂತಹ ಭಾಷೆಯ ಮೂಲಕ ಧಾರ್ಮಿಕ ತತ್ವಕೇಂದ್ರಿತ ಮಹಾತ್ಮ್ಯೆಗಳು ರಚನೆಯಾಗಿವೆ. ಇಂತಹ ತತ್ವಕೇಂದ್ರಿತ ಮಹಾತ್ಮ್ಯೆಗಳ ವಿಷಯವಸ್ತು ದೈವ ಲೀಲೆ, ಪವಾಡ, ಮಾಯಾವಿದ್ಯೆ, ಅವಧಿ ಜ್ಞಾನವಿದ್ಯೆ ಮುಂತಾದ ವಿಷಯಗಳನ್ನು ಒಳಗೊಂಡಿರುತ್ತದೆ.

ಸಾಮಾನ್ಯವಾಗಿ ಪ್ರತಿಯೊಬ್ಬನಿಗೂ ತನ್ನ ಧರ್ಮದ ಮೇಲೆ ಅಭಿಮಾನ, ಶ್ರದ್ಧೆ ಇದ್ದೇ ಇರುತ್ತದೆ. ತನ್ನ ಧರ್ಮ ಹಾಗೂ ಅದರ ತತ್ವಗಳು ಇನ್ನಿತರ ಮತಧರ್ಮಗಳ

ತತ್ವಗಳಿಗಿಂತಲೂ ಶ್ರೇಷ್ಠವಾದವು. ತನ್ನ ಧರ್ಮದ ದೇವರುಗಳೇ ಶ್ರೇಷ್ಠ. ಧರ್ಮದ ಆದಿಯಲ್ಲೇ ಇದ್ದ ಮಹಾಪುರುಷರುಗಳೇ ಶ್ರೇಷ್ಠ ಅಂತಹವರನ್ನು ಅವತಾರಿಗಳು, ಮಹಿಮಾಶಾಲಿಗಳು, ಪವಾಡ ಪುರುಷರು ಎಂದು ಹೇಳಿಕೊಳ್ಳುವುದು ಸಹಜವಾದುದು. ಇಂಥ ಪ್ರವೃತ್ತಿಯು ಸಾಮಾನ್ಯವಾಗಿ ಜಗತ್ತಿನ ಎಲ್ಲ ಪ್ರಮುಖ ಹಾಗೂ ಮಹತ್ವದ ಮತಧರ್ಮದವರಲ್ಲಿಯೂ ಇದ್ದದ್ದನ್ನು ಅರಿಯಬಹುದು. ಇದಕ್ಕೆ ಯಾವ ಧರ್ಮವು ಹೊರತಾಗಿಲ್ಲ. ಇಂತಹ ತತ್ವಕೇಂದ್ರಿತ ಮಹಾತ್ಮೆಗಳಲ್ಲಿ ಘನವಾದ ಅಪ್ರಯತ್ನವನ್ನು, ಧಾರ್ಮಿಕ ತತ್ವಗಳಿಗೆ ಮೂರ್ತರೂಪ ಕೊಟ್ಟು ಸರಳಗೊಳಿಸಿ ಸಾಮಾನ್ಯ ಜನತೆಗೆ ತಿಳಿಸುವುದಕ್ಕಾಗಿ ಕೃತಿಗಳನ್ನು ವರ್ಣನಾತ್ಮಕವಾಗಿ ಕಟ್ಟಿದ್ದಾರೆ. ಸಾಮಾನ್ಯ ಜನತೆಗೆ ದೈವಿಕ ಲೀಲೆ, ಪವಾಡದಂತಹ ತತ್ವಗಳ ಘನತೆಯನ್ನು ಎತ್ತಿ ತೋರಿಸಿ ಅವುಗಳ ಆಚರಣೆಯ ಮಾಹಿತಿಯನ್ನು ಮನವರಿಕೆ ಮಾಡಕೊಡಲು ತತ್ವಕೇಂದ್ರಿತ ಮಹಾತ್ಮೆಗಳನ್ನು ಬಣ್ಣಿಸಲಾಗಿದೆ.

ಈ ಉದ್ದೇಶಗಳನ್ನು ಇರಿಸಿಕೊಂಡು ಕೃತಿಕಾರರು ಪವಾಡ ಮಹಿಮೆ ಪುರಾಣದಿಂದ ಕೂಡಿದ ಸ್ಥಳದ ಮಹತ್ವದೊಂದಿಗೆ ತಾತ್ವಿಕತೆಯಿಂದ ತುಂಬಿದ ಮಹಾತ್ಮೆಗಳನ್ನು ಕಟ್ಟಿಕೊಟ್ಟಿದ್ದಾರೆ. ಇಂತಹ ಅನೇಕ ಕೃತಿಗಳನ್ನು ಇಲ್ಲಿ ನೋಡಬಹುದು. ದೇವಿ ಮಹಾತ್ಮೆ, ಶ್ರೀ ರೇಣುಕಾಂಬಿಕಾ ಮಹಿಮಾಮೃತ, ಶ್ರೀಶೈಲ ಮಹಾತ್ಮೆ, ಶ್ರೀ ಬನಶಂಕರಿ ಮಹಾತ್ಮೆ ಮುಂತಾದವು. ಇಂತಹ ಪ್ರಮುಖ ಕೃತಿಗಳ ವಸ್ತು ಪುರಾಣದಿಂದ ಕೂಡಿರುತ್ತದೆ. ಅದನ್ನು ಸಾಮಾನ್ಯರು ಅರಗಿಸಿಕೊಳ್ಳಲು ಆಗದಿರುವುದು ಒಂದು ಕಾರಣವಾದರೆ; ಇಂತಹ ವಿಷಯ ವಸ್ತುವನ್ನು ಸಾಮಾನ್ಯರಿಗೆ ನಿಲುಕದೆ ಇರುವುದರಿಂದ ಇದರ ಬಗ್ಗೆ ಜನರಲ್ಲಿ ಉದಾಸೀನತೆಯು ಕಂಡುಬರುತ್ತದೆ. ಇವುಗಳಿಂದ ಕೃತಿಕಾರನ ಕವಿವಾಣಿಯಲ್ಲಿ ಕಸವೂ ರಸವಾಗಬಹುದು. ಅಸತ್ಯವಾದುದು ಸಹ ಅಸಾಧ್ಯವಾಗಬಹುದು ಎಂಬ ಹಿನ್ನೆಲೆಯಲ್ಲಿ ರಚನೆಯಾಗಿವೆ. ರವಿ ಕಾಣದ್ದನ್ನು ಕವಿ ಕಂಡ, ಎನ್ನುವಂತೆ ಕವಿವಾಣಿಯು ಸಾಹಿತ್ಯದ ಸವಿನುಡಿಯಾಗಿ ಹೊರಹೊಮ್ಮಿದೆ. ಹಾಗಾದರೆ ಜನರ ಮನಸ್ಸಿಗೆ ಹಿಡಿಸುವುದು "ಸತ್ಯಂ ಬ್ರುಂಯಾತ್ ಪ್ರಿಯಂ ಬ್ರುಯಂತ್ ನಾ ಬ್ರುಯಂತ್ ಸತ್ಯಮಂಪ್ರಿಯಂ" ಎಂಬ ಸೂಕ್ತಿಯು ಸಾಹಿತ್ಯದ ಜೀವಾಳವು ಸತ್ಯವನ್ನು ಬೋಧಿಸಬೇಕಾದರೂ ಪ್ರಿಯವಾಗಿ ಬೋಧಿಸಬೇಕು. ಇದೇ ಸಾಹಿತ್ಯದಸಿರಿ ಶಾಸ್ತ್ರಭ್ಯಾಸಿಗಳಿಗೆ ಮಾತ್ರ ಶಾಸ್ತ್ರದ ಅಧಿಕರವಾಣಿಯು ಉಪಯೋಗವಾಗುವುದು"[೧೬] ಎಂಬಂತಿವೆ.

ತತ್ವಕೇಂದ್ರಿತ ಮಹಾತ್ಮೆಗಳು ಸಹ ಮೇಲೆ ಹೇಳಿದಂತೆ ಶಾಸ್ತ್ರಭ್ಯಾಸಗಳಿಂದ ರಚಿತವಾದರೂ ಅನಾಮಧೇಯ ಕೃತಿಗಳಂತೆ ಬಿಂಬಿಸಲಾಗಿದೆ. ಇವು ಸಹ ಸ್ಥಳ

ಮಹಾತ್ಮ್ಯೆಗಳಿಗಿಂತ ಸ್ವಲ್ಪ ಭಿನ್ನವೆನಿಸಿದರೂ ಸಹ ಇಲ್ಲೂ ಪುರಾಣಾಂಶಗಳೇ ಮೇಲುಗೈ ಪಡೆದಿವೆ. ಭಾಷಿಕವಾಗಿ ಗದ್ಯ-ಪದ್ಯದಿಂದ ಕೂಡಿದ್ದು ಇಲ್ಲಿ ಹೆಚ್ಚಾಗಿ ಗದ್ಯಾಂಶವೇ ಹೆಚ್ಚು ಕಂಡುಬರುತ್ತದೆ. ನೀತಿಬೋಧನೆಯಂತಹ ಕಥೆಗಳ ಮೂಲಕ ದೇವರುಗಳ ಶಕ್ತಿ, ಶೌರ್ಯಗಳನ್ನು ಬಿಂಬಿಸುತ್ತವೆ. ಕೆಲವು ಭಾಷಿಕ ಶೈಲಿಯು ವಡ್ಡಾರಾಧನೆಯ ರೀತಿಯಲ್ಲೆ ಪ್ರಾರಂಭವಾಗುತ್ತದೆ. "ಶ್ರೀ ಚೌಡೇಶ್ವರಿ ಮಹಾತ್ಮ್ಯೆಯಲ್ಲಿ ಪ್ರಥಮಾಶ್ವಾಸ ಹೀಗಿದೆ. ಶ್ರೀಶೈಲ ಪ್ರಾಂತ್ಯದಲ್ಲಿ ನಂದಪುರವೆಂಬುದೊಂದು ಸುಪ್ರಸಿದ್ಧ ನಗರ".[೧೭] ಅತ್ಯಂತ ಸಂಪದ್ಭರಿತವೂ ಆದ ನಗರ. ಹೀಗೆ ಕಥೆಯು ಮುಂದುವರೆದು ಕೆಲವು ಕೃತಿಗಳಲ್ಲಿ ಪೀಠಿಕಾ ಸಂಧಿಯಲ್ಲಿ ಕವಿಯು ಗುರು, ಗೋಪ, ಶಾರದದೇವಿ ಮೊದಲಾದವರಿಗೆ ನಮಸ್ಕರಿಸಿ ತನ್ನ ಕಾವ್ಯವನ್ನು ಬರೆಯಲು ಪ್ರಾರಂಭಿಸಿದ್ದಾನೆ. ತನ್ನ ನಾಲಿಗೆಯಲ್ಲಿ ಸರಸ್ವತಿಯು ವಾಸವಾಗಿದ್ದು, ವ್ಯಾಸ ಮೊದಲಾದ ಕವಿಗಳಿಗೆ ಸರಸ್ವತಿ ಯಾವ ರೀತಿಯಲ್ಲಿ ಕಾವ್ಯ ರಚನೆ ಮಾಡಲು ಸಹಾಯ ಮಾಡಿದ್ದಳೋ ಅದೇ ರೀತಿಯಲ್ಲಿ ತನಗೂ ಆಕೆ ಸಹಾಯ ಸಲ್ಲಿಸಲಿ, ಏನಾದರೂ ತಪ್ಪುತಡೆಗಳಿದ್ದರೆ ವಿದ್ವಾಂಸರಾದವರು ಕರುಣದಿಂದ ತಿದ್ದಿಕೊಂಡು ಓದಬೇಕು ಎಂದು ತಮ್ಮ ನಮ್ರತೆಯನ್ನು ಮೆರೆದಿದ್ದಾರೆ. ಮತ್ತೆ ಕೆಲವು ಪುರಾಣ ಶ್ಲೋಕದಿಂದ ಮೂಲ ವಿಷಯಕ್ಕೆ ಬಂದಿದ್ದಾರೆ. ಇಂತಹ ವಿಷಯಗಳನ್ನು ತತ್ವಕೇಂದ್ರಿತ ಮಹಾತ್ಮ್ಯೆಗಳಲ್ಲಿ ಕಾಣಬಹುದು.

ತತ್ವಕೇಂದ್ರಿತ ಮಹಾತ್ಮ್ಯೆಗಳಲ್ಲಿ ಕಟ್ಟುನಿಟ್ಟಿನ ಪಾಲನೆ ಪ್ರಮುಖವಾಗಿ ಎದ್ದುಕಾಣುತ್ತದೆ. ಇದನ್ನು ಸಾಮಾನ್ಯ ಜನರಿಗೆ ಧಾರ್ಮಿಕವಾದ ಸೂಕ್ಷ್ಮ ಭೇದವನ್ನು ತಿಳಿಸುವ ಉದ್ದೇಶವನ್ನಿರಿಸಿಕೊಂಡು ಕವಿಗಳು ಗಟ್ಟಿಯಾದ ವಿಷಯ ವಸ್ತುವನ್ನೇ ಇಲ್ಲಿ ಚಿತ್ರಿಸಿದ್ದಾರೆ. ಇವುಗಳಲ್ಲಿ ಪ್ರಮುಖವಾದ "ದೇವಿಯ ಮಹಾತ್ಮ್ಯೆಯಲ್ಲಿ, ದೇವಿ ಮಹಿಷಾಸುರ ಮರ್ದಿನಿಯಾಗಿ ಮಹಿಷಾಸುರನನ್ನು ಕೊಂದ ಪ್ರಸಂಗ ಬರುತ್ತದೆ. ಬಹಳ ಹಿಂದೆ ದೇವಾಸುರರ ಯುದ್ಧ ನಡೆಯುತ್ತದೆ. ಅದರಲ್ಲಿ ರಾಕ್ಷಸರಿಂದ ಸೋತು ಓಡಿ ಹೋಗುತ್ತಾರೆ. ಅಸುರರ ನಾಯಕನಾದ ಮಹಿಷಾಸುರನು ದೇವಲೋಕದ ಅರಸನಾದನು. ಆಗ ದೇವತೆಗಳೆಲ್ಲಾ ಸೇರಿ ಈಶ್ವರ ಮತ್ತು ವಿಷ್ಣು ಇರುವಲ್ಲಿಗೆ ಹೋಗಿ ತಮಗಾದ ಸೋಲಿನ ವೃತ್ತಾಂತವನ್ನು ವಿವರಿಸಿ ರಾಕ್ಷಸರಿಂದಾಗಬಹುದಾದ ಉಪಟಳವನ್ನು ವರ್ಣಿಸುತ್ತಾರೆ. ಅದನ್ನು ಕೇಳಿ ಈಶ್ವರ ಮತ್ತು ವಿಷ್ಣು ಇವರು ಸಿಟ್ಟಿಗೇಳಲು ಇವರ ಮುಖಮಂಟಪದಿಂದ ತೇಜೋರಾಶಿಯು ಜನಿಸಿತು. ಆ ತೇಜೋರಾಶಿಗೆ ಉಳಿದ ದೇವತೆಗಳ ತೇಜೋರಾಶಿಯು ಕೂಡಿ ಒಂದು ಸುಂದರ ಮೂರ್ತಿರೂಪವನ್ನು ತಾಳಿತು. ಬೇರೆ-ಬೇರೆ ದೇವತೆಗಳಿಂದ

ಶರೀರದ ಬೇರೆ-ಬೇರೆ ಆಯಾಮಗಳನ್ನು ಪಡೆದು ಅವರೆದುರಿಗೆ ಕಂಗೊಳಿಸಿತು. ಸಕಲ ದೇವತೆಗಳು ತಮ್ಮ ಶಾಪವನ್ನು ಪರಿಹರಿಸುವಂತೆ ಕೇಳಿಕೊಂಡವು. ತಮ್ಮ ತಮ್ಮ ಅಸ್ತ್ರ ಶಸ್ತ್ರಗಳನ್ನೆಲ್ಲ ಆಕೆಗೆ ಇತ್ತರು.

ಹೀಗೆ ಸರ್ವಸನ್ನಾಹದಿಂದ ಆಕೆ ಮಹಿಷಾಸುರನ ಮೇಲೆ ಧಾಳಿಯಿಟ್ಟಳು. ಮಹಿಷಾಸುರನೂ ಕೂಡ ಸಕಲ ಬಲಸಹಿತನಾಗಿ ಆಕೆಗೆ ಇದಿರಾದನು. ಘನಘೋರ ಯುದ್ಧ ಪ್ರಾರಂಭವಾಯಿತು. ಸಕಲ ಆಯುಧಗಳಿಂದ ರಾಕ್ಷಸರನ್ನು ಒಂದೆಡೆ ಸದೆ ಬಡಿಯುತ್ತಿರಲು ದೇವಿಯ ಸಿಂಹಾಸನರೂಢನಾದ ಸಿಂಹರಾಜನು ಕೂಡ ಕದನ ಪ್ರಾರಂಭಿಸಿದರು. ಹೀಗೆ ಘನಘೋರವಾಗಿ ನಡೆಯುತ್ತಿರುವ ಯುದ್ಧವನ್ನು ದೇವತೆಗಳು ಆಕಾಶದಲ್ಲಿ ನಿಂತು ನೋಡುತ್ತಿದ್ದರು. ನಂತರ ಮಹಿಷಾಸುರ ಶೌರ್ಯವೇಷದಿಂದ ದೇವಿಯ ಮೇಲೆ ಎರಗಲು ಬಂದಾಗ ದೇವಿಯು ತನ್ನ ಶೂಲದಿಂದ ಆತನನ್ನು ತಿವಿತಿವಿದು ಕೊಂದಳು. ಈ ಕೋಪದಿಂದ ದೇವಿಯ ಕೋಪ ಕಡಿಮೆಯಾಗದೇ ಇದ್ದಾಗ ಎಲ್ಲಾ ದೇವತೆಗಳು ಹಾಡಿ ನೃತ್ಯ ಮಾಡಿ ಆಕೆಯನ್ನು ಓಲೈಸತೊಡಗಿದರು."[೧೮] ಎಂಬಂತಹ ಕಥಾಹಂದರ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ.

ಹೀಗೆ ಪ್ರಸಿದ್ಧ ದೇವರುಗಳ ಕಥೆಗಳ ಮೂಲಕ ಭಯ ಭಕ್ತಿಯನ್ನು ಮಹಾತ್ಮೆಗಳ ಮೂಲಕ ತುಂಬಿದ್ದಾರೆ. ಪೂಜಾವಿಧಿಗಳನ್ನು ಹೇಗೆ ಮಾಡಬೇಕು, ಯಾವ ಕಾಲದಲ್ಲಿ ಸ್ನಾನ ಮಾಡಿದರೆ ಮನಶುದ್ಧವಾಗಿ ಫಲ ಲಭಿಸುತ್ತದೆ ಎಂಬುದರ ಜೊತೆಗೆ ಇಂತಹ ದೈವಿಕ ಮಹಾತ್ಮೆಗಳನ್ನು ಪಾರಾಯಣ ಮಾಡುವ ಫಲಾಪೇಕ್ಷೆಯುಳ್ಳ ಪಾಠಕನು ಅಂತಕರಣಪೂರ್ವಕ ಶ್ರೀ ಗುರುವಿನ ಆಶೀರ್ವಾದವನ್ನು ಹೊಂದಿದವನಾಗಿರಬೇಕು. ಅವನು ಪ್ರತಿ ದಿವಸ ತನ್ನ ಗುರು ಸಂಪ್ರದಾಯದ ಪ್ರಕಾರ ನಿತ್ಯಕರ್ಮ ವಿಧಿಗಳನ್ನು ಮಾಡಿ ಮಿಗಿಲಾಸಿಕೊಂಡು ಆಮೇಲೆ ಶ್ರೀ ದೇವರುಗಳ ಮಹಾತ್ಮೆಯನ್ನು ಏಕನಿಷ್ಠೆಯಿಂದ ನಿಯಮೋಕ್ತವಾಗಿ ಪೂಜಾ ಮಾಡಿ ಪಠನಾ ಮಾಡಬೇಕು ಎಂಬ ಪ್ರಾರ್ಥನಾ ಶ್ಲೋಕದಿಂದ ಪ್ರತಿ ಅಧ್ಯಾಯದ ಕೊನೆಯಲ್ಲಿ 'ಶ್ರೀ ಶ್ರೀ ಶ್ರೀ ಮಂಗಳಾ ಪ್ರಾಪ್ತಿ ಮಸ್ತು' ಎಂಬ ಮಂಗಳಾ ಶ್ಲೋಕವನ್ನು ಹಾಡಿದ್ದಾರೆ.

ಇಂತಹ ಆಚರಣೆಗಳು ಎಲ್ಲೋ ಒಂದು ಕಡೆ ಭಕ್ತರ ಮೇಲೆ ಪ್ರಭಾವ ಬೀರುತ್ತವೆ. ಅಂತಹ ಘಟನೆಗಳನ್ನು ಜನರು ಸತ್ಯವೆಂದು ಪರಿಭಾವಿಸುತ್ತಾರೆ. ಜೊತೆಗೆ ಸ್ವಧರ್ಮದ ಭಕ್ತರಾದವರು ಅನ್ಯ ಮತಗಳ ಆಕರ್ಷಣೆಗೆ ಒಳಗಾಗದಂತೆ ಅವರ ವೀರನಿಷ್ಠೆಯನ್ನು ಗಟ್ಟಿಗೊಳಿಸುವ ಉದ್ದೇಶವೂ ಇರುತ್ತದೆ. ಇಂತಹ ಕಥೆಗಳು ಸಾಮಾನ್ಯ ಜನರಿಗೆ

ಹೃದ್ಯವಾಗಿ ಪರಿಣಮಿಸುವುದಲ್ಲದೆ, ಅವರಲ್ಲಿ ಕಥೆಯನ್ನು ಕೇಳುವ ಕುತೂಹಲವನ್ನು ಉತ್ಸಾಹವನ್ನು ತುಂಬುವ ಪರಿಣಾಮಕಾರಿ ಕೆಲಸ ಮಾಡುತ್ತವೆ. ಧರ್ಮದ ತತ್ವಗಳು ಆಚರಣೆಯ ಮಾಹಿತಿಯನ್ನು ಸಾರುವ ಕೃತಿಗಳೇ ಹೆಚ್ಚಿವೆ.

ಇವುಗಳ ಜೊತೆಗೆ ವೈದ್ಧಿಕ ಇಲ್ಲವೆ ಜೈನ ಧರ್ಮದ ಕೃತಿಗಳಲ್ಲೂ ಇಂತಹ ಆಚರಣೆ, ಸಂಪ್ರದಾಯಗಳನ್ನು ನೋಡಬಹುದು. ಅತೀ ಹೆಚ್ಚಾಗಿ ೧೬-೧೭ನೇ ಶತಮಾನದಲ್ಲಿ ಈ ಸಾಹಿತ್ಯ ರಾಶಿಯನ್ನು ರಚಿಸಿದವರಲ್ಲಿ ಬ್ರಾಹ್ಮಣರೂ, ವೀರಶೈವರೂ ಜೈನರು ಇರುತ್ತಾರೆ. ಆಸ್ತಿಕ ಜನರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಎಂಬ ಮೂರು ಮುಖ್ಯ ಪಂಗಡಗಳಿಗೆ ಸೇರಿದವರಾಗಿದ್ದು, ದ್ವೈತ ವಿಶಿಷ್ಟಾದ್ವೈತ ಪಂಗಡಗಳಿಗೆ ಸೇರಿದವರು ಮುಖ್ಯವಾಗಿ ವೈಷ್ಣವರಾಗಿಯೂ, ಅದ್ವೈತ ಪಂಗಡಕ್ಕೆ ಸೇರಿದವರು ಶೈವರಾಗಿಯೂ ಇರುತ್ತಾರೆ. ಇವರು ಮಧ್ವ, ರಾಮಾನುಜ, ಶಂಕರಾಚಾರ್ಯರಿಂದ ಪ್ರಭಾವಿತರಾಗಿದ್ದಾರೆ. ವೀರಶೈವರು ಭಕ್ತಿ ಮಾರ್ಗವನ್ನು ಪ್ರಾರಂಭದಲ್ಲಿ ಅನುಸರಿಸಿದರು. ನ್ಯಾಯ ಅನ್ಯಾಯಗಳನ್ನು ರಚಿಸಿದ ಅರವತ್ಮೂರು ಶೈವ ಪುರಾಣಗಳು ವೀರಶೈವರಿಗೆ ಸ್ಫೂರ್ತಿಯನ್ನು ನೀಡಿರಬೇಕು. ತತ್ವಕೇಂದ್ರಿತ ಮಹಾತ್ಮೆಗಳು ಆಧ್ಯಾತ್ಮಿಕ ಜಿಜ್ಞಾಸೆಯ ಪ್ರಮುಖ ಅಂಗವಾಗಿ ಕಾಣುತ್ತವೆ. ಸತ್ಯವೋ, ಅಸತ್ಯವೋ ಅವುಗಳನ್ನು ಬಳಸಿಕೊಂಡು ರಚಿತವಾದ ಸಾಹಿತ್ಯವಂತೂ ಮಧ್ಯಕಾಲೀನ ಸಂದರ್ಭದಲ್ಲಿ ಪ್ರಮುಖವಾಗಿ ಎದ್ದು ಕಾಣುತ್ತದೆ.

ಆಶ್ಚರ್ಯಕರವಾದ, ಅಸಾಮಾನ್ಯವಾದ ವಸ್ತು ಅಥವಾ ಸಂಗತಿಯನ್ನು ಆಟ, ಲೀಲೆ, ಪವಾಡ, ಚಮತ್ಕಾರ ಎಂದು ಕರೆಯುವರು. ಇಂತಹ ಸಂಗತಿಗಳನ್ನು ಸಾಮಾನ್ಯ ಮನುಷ್ಯನಿಂದ ನಡೆಯುವಂತಹದಲ್ಲ ದೇವಾನುದೇವತೆಗಳಲ್ಲಿ ಅಸಮಾನ್ಯವೂ, ಅಸಾದೃಶ್ಯವೂ, ಲೋಕಾತೀತವೂ ಆದ ಘಟನೆಗಳಿಂದ ಅವುಗಳಿಗೆ ದೈವಲೀಲೆಗಳೆಂದು ವರ್ಣಿತವಾಗಿದೆ. ಹೀಗೆ ತತ್ವಕೇಂದ್ರಿತ ಮಹಾತ್ಮೆಗಳು ಸ್ಥಳ ಮಹಾತ್ಮೆಗಳಿಗಿಂತ ಸ್ವಲ್ಪ ಭಿನ್ನವಾದರೂ ಕಥೆಯೊಳಗಿನ, ಕಥೆಯ ಹಂದರದೊಳಗೆ ನೀತಿ, ತತ್ವಬೋಧನೆ ಇಷ್ಟದೈವದ ಲೀಲೆಗಳು ಪವಾಡ ಸಾದೃಶ್ಯ, ಶೌರ್ಯಗಳು ಎದ್ದುಕಾಣುತ್ತವೆ. ಇದರಲ್ಲೂ ತೀರ್ಥಕ್ಷೇತ್ರಗಳ ಪರಿಕಲ್ಪನೆ ಬಂದಿದ್ದರೂ ಅತಿ ಹೆಚ್ಚಾಗದಂತೆ ವಿರಳವಾಗಿ ಚಿತ್ರಿಸಲಾಗಿದೆ. ತತ್ವಕೇಂದ್ರಿತ ಮಹಾತ್ಮೆಗಳು ಮಾತ್ರ ಪುರಾಣದಲ್ಲಿ ಬರುವ ಎಲ್ಲಾ ಗುಣಲಕ್ಷಣಗಳಿಗೆ ಒಗ್ಗಿಕೊಂಡು ಬಂದಿವೆ. ಇತರೆ ಮಹಾತ್ಮೆಗಳಿಗಿಂತ ತತ್ವಕೇಂದ್ರಿತ ಮಹಾತ್ಮೆಗಳು ಲಾಕ್ಷಣಿಕ ವಿಕಾಸದಲ್ಲಿ ಹಾಗೂ ಅವುಗಳ ನಿರ್ವಹಣೆಯಲ್ಲಿ ತತ್ವಶಾಸ್ತ್ರ ಹೆಚ್ಚಿದೆ. ದೈವಿಕ ಪ್ರತಿಪಾದನೆಯಿಂದಲೇ ಎಲ್ಲಾ ಪ್ರಪಂಚ ನಿಂತಿರುವುದು, ದೇವರ ಕೃಪೆಯಿಂದಲೇ ಎಲ್ಲಾ ಎಂಬ ಕಥೆಗಳೇ ಅತೀ ಬಳಕೆಯಾಗಿವೆ.

ಕೆಲವು ಕಡೆ ಕಲಾತ್ಮಕವಾಗಿಯೂ ಕೆಲವು ಕಡೆ ಅತಿಯಾದ ಹೊರೆಯಾಗಿಯೂ ರಚನೆಯಲ್ಲಿ ಮೂಡಿಬಂದಿವೆ. ಒಟ್ಟಾರೆಯಾಗಿ ಇವುಗಳ ಮುಖ್ಯ ಉದ್ದೇಶ ಮಹಾತ್ಮೆಗಳಲ್ಲಿ ಮುಖ್ಯವಾಗಿ ತತ್ವವನ್ನು ನಿರೂಪಿಸುವುದು ಇದರ ಪ್ರಮುಖ ಗುರಿಯಾಗಿದೆ.

**ಅಡಿಟಿಪ್ಪಣಿ**

೧. ರಂಗಸ್ವಾಮಿ.ಡಿ.ಟಿ., **ಭಾರತೀಯ ಹಬ್ಬಗಳು,** ಪು.ಸಂ–೧೧

೨. ಪರಮ ಶಿವಯ್ಯ ಜೀ.ಶಂ., **ದಕ್ಷಿಣ ಕರ್ನಾಟಕ ಜಾನಪದ ಕಾವ್ಯ ಪ್ರಕಾರಗಳು,** ಪು.ಸಂ– ೩೨೭, ೩೨೮

೩. **ಅದೇ ಪುಸ್ತಕ,** ಪು.ಸಂ–೨೪೭

೪. **ನೂರೊಂದು ವಿರಕ್ತರು ಮತ್ತು ಹಂಪಿ ಪರಿಸರ,** ಪು.ಸಂ–೧೮

೫. ಸಿದ್ಧರಾಮಯ್ಯ ಆರ್ ಎಸ್ (ಸಂ)., **ಶ್ರೀ ಸಿದ್ಧರಾಮಚಲ ಮಹಾತ್ಮೆ,** ಪು.ಸಂ–೨೧

೬. **ಅದೇ ಪುಸ್ತಕ,** ಪು.ಸಂ–೨

೭. **ಅದೇ ಪುಸ್ತಕ,** ಪು.ಸಂ–೨೬, ೩೫, ೩೬

೮. **ಕನ್ನಡ ವಿಷಯ ವಿಶ್ವಕೋಶ ಸಂಪುಟ ೧೩,** ಪು.ಸಂ–೨೪೮

೯. ಭಾನುಮತಿ ವೈ.ಸಿ (ಸಂ)., ಪು.ಸಂ–೦೧

೧೦. ಬಸವರಾಧ್ಯ (ಸಂ)., **ಪಕ್ಷಿಮ ರಂಗ ಕ್ಷೇತ್ರ ಮಹಾತ್ಮೆ ಮತ್ತು ಚಿಕ್ಕದೇವರಾಯ ವಂಶಾವಳಿ,** ಪು.ಸಂ–XXIII

೧೧. ಮಂಜಪ್ಪ ಶೆಟ್ಟಿ ಎಂ.ಪಿ (ಸಂ)., **ಯಾದವಗಿರಿ ಮಹಾತ್ಮೆಂ,** ಪು.ಸಂ–೦೯

೧೨. ನರಸಿಂಹಶಾಸ್ತ್ರಿ ಕೆ. (ಅನು)., **ಧರ್ಮ ಶಾಸ್ತ್ರದ ಇತಿಹಾಸ ಸಂಪುಟ ಭಾಗ – ೪, ೨,** ಪು.ಸಂ–೩೧

೧೩. ಪೂಜಾರ ವ್ಹಿ.ಜಿ., **ವೀರಶೈವ ಸಾಹಿತ್ಯದಲ್ಲಿ ಪವಾಡಕಥೆಗಳು,** ಪು.ಸಂ–೪೨

೧೪. ನಾರಾಯಣ ಮೂರ್ತಿ ಬಿ.ಎಸ್., **ಶ್ರೀ ಚೌಡೇಶ್ವರಿ ಮಹಾತ್ಮೆ,** ಪು.ಸಂ–೦೧

೧೫. ಹೆಗ್ಗಡೆ ಎನ್.ಕೇ (ಸಂ), **ದೇವಿ ಮಹಾತ್ಮೆ,** ಪು.ಸಂ–XV

೧೬. ಸಿದ್ದರಾಮಯ್ಯ ಆರ್ ಎಸ್ (ಸಂ), **ಶ್ರೀ ಸಿದ್ದರಾಮಚಲ ಮಹಾತ್ಮೆ,** ಪು.ಸಂ–೨೧

# ಅಧ್ಯಾಯ : ನಾಲ್ಕು

## ಮಹಾತ್ಮೆಗಳ ಚಾರಿತ್ರಿಕ ವಿವೇಚನೆ

ಹದಿನಾಲ್ಕನೆಯ ಶತಮಾನದಲ್ಲಿ ತಲೆಯೆತ್ತಿದ ಮಹಾತ್ಮೆಗಳಿಗೆ ವಿಜಯನಗರ ಕಾಲದಲ್ಲಿ ಅತ್ಯಂತ ಹೆಚ್ಚಿನ ಮನ್ನಣೆಯೇ ಸಿಕ್ಕಿತು. ಆದ್ದರಿಂದಲೇ ಈ ಕಾಲಘಟ್ಟವನ್ನು "ಮಹಾತ್ಮೆಗಳ ಸುಗ್ಗಿಯ ಕಾಲ" ಎಂದು ಗುರುತಿಸಲಾಗಿದೆ. ಇದೇ ಸಂದರ್ಭದಲ್ಲಿ ಅಥವಾ ಕಾಲದಲ್ಲಿ ಇಷ್ಟೊಂದು ಧಾರ್ಮಿಕ ಕೃತಿಗಳು ರಚನೆಯಾಗಲು ಪ್ರಮುಖವಾದ ಕಾರಣಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

* ಮುಸ್ಲಿಂ ಅರಸರ ದಾಳಿ
* ಸ್ವ ಧರ್ಮ ಪ್ರಚಾರ
* ಪಾಶ್ಚಿಮಾತ್ಯರ ಪ್ರಭಾವ

೧೪ನೇ ಶತಮಾನದ ಮಧ್ಯದಲ್ಲಿ ತಲೆಯೆತ್ತಿದ ವಿಜಯನಗರ ಸಾಮ್ರಾಜ್ಯವು ಆಕಸ್ಮಿಕವಾಗಿ ಜನ್ಮ ತಾಳಿದ್ದಲ್ಲ. ಇದು ಸಾಂಸ್ಕೃತಿಕ ರಕ್ಷಣೆಯ ಜವಾಬ್ದಾರಿಯನ್ನು ಅದರ ಮಹತ್ವವನ್ನು ಹಿನ್ನೆಲೆಯಾಗಿ ಇಟ್ಟುಕೊಂಡು ಉದಯಿಸಿದ ರಾಜ್ಯವಾಗಿತ್ತು. ಕ್ರಿ.ಶ. ೧೦ನೇ ಶತಮಾನದಿಂದಲೇ ವಿದೇಶಿಯರ ದಾಳಿಗೆ ತುತ್ತಾಗಿದ್ದ ಭಾರತ ೧೩ನೇ ಶತಮಾನದ ಹೊತ್ತಿಗಾಗಲೇ ದಿಲ್ಲಿಯ ಸುಲ್ತಾನರ ಅಧಿಪತ್ಯಕ್ಕೆ ಒಳಪಟ್ಟಿತ್ತು. ಕ್ರಿ.ಶ. ೧೨೯೦ರಲ್ಲಿ ಮಲ್ಲಿಕ್ ಫಿರೋಜ್ ಎಂಬಾತನು ಜಲಾಲುದ್ದೀನ್ ಫಿರೋಜ್ ಷಹ ಎಂಬ ಹೆಸರಿನಿಂದ ದೆಹಲಿಯಲ್ಲಿ ಸಿಂಹಾಸನಾಧಿಪತ್ಯವನ್ನು ವಹಿಸಿಕೊಂಡಿದ್ದನು. ಇಡೀ ಉತ್ತರ ಭಾರತವು ಈತನ ಆಳ್ವಿಕೆಯಲ್ಲಿ ಕೇಂದ್ರೀಕೃತವಾದ ರಾಜಸತ್ತೆಯ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ.ಶ. ೧೩೨೦ರಲ್ಲಿ ಈ ಸಂತತಿಯು ಅವನತಿಯನ್ನು ಹೊಂದಿತು. ಇವರ ಸೇನಾಧಿಪತಿಯಾಗಿದ್ದ ಘಿಯಾಸುದ್ದೀನ್ ತುಘಲಕ್ ತಾನೇ ಸಿಂಹಾಸನಾಧಿಪತಿಯಾಗಿ ಅಧಿಕಾರದ ಗದ್ದುಗೆಯೇರಿದನು. ಈತನ ನಂತರ ಇವನ ಮಗನಾದ ಮಹಮ್ಮದ್ ಬಿನ್ ತುಘಲಕ್ ದೆಹಲಿಯ ರಾಜ್ಯಭಾರವನ್ನು ವಹಿಸಿಕೊಂಡನು.

ದಕ್ಷಿಣದಲ್ಲಿ ವಿಜಯನಗರ ಸಾಮ್ರಾಜ್ಯ ತಲೆಯೆತ್ತಿದರೆ, ಕಾಕತೀಯ ರಾಜರು ಓರಂಗಲ್ಲನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು. ಚೋಳರು ತಂಜಾವೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು. ಪಾಂಡ್ಯರು ಮಧುರೆಯನ್ನು ರಾಜಧಾನಿಯನ್ನಾಗಿಸಿಕೊಂಡು ಆಳ್ವಿಕೆ ನಡೆಸುತ್ತಿದ್ದರು. ಅದೇ ರೀತಿ ಚೋಳರು ತಿರುವನಂತಪುರ, ಕೊಚ್ಚಿನ್ ಪ್ರಾಂತ್ಯಗಳಲ್ಲಿ ಆಳ್ವಿಕೆಯನ್ನು ನೆಡೆಸುತ್ತಿದ್ದರು. ಮುಖ್ಯವಾಗಿ ಹೊಯ್ಸಳರ ಸಾಮ್ರಾಜ್ಯವು ದ್ವಾರಸಮುದ್ರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕರ್ನಾಟಕ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳನ್ನು ತನ್ನ ಹಿಡಿತದಲ್ಲಿಟ್ಟುಕೊಂಡಿತ್ತು. ಕಾಲಾನಂತರದಲ್ಲಿ ಈ ಎಲ್ಲಾ ದಕ್ಷಿಣದ ರಾಜ್ಯಗಳು ತಮ್ಮ ಸಾಮರ್ಥ್ಯಗಳನ್ನು ಕ್ಷೀಣಿಸಿಕೊಳ್ಳುವ ಸಮಯದಲ್ಲಿ ಉತ್ತರದಿಂದ ಮಲ್ಲಿಕಾಫರನು ಕ್ರಿ.ಶ. ೧೩೦೬ ರಿಂದ ೧೩೩೦ರವರೆಗೆ ದಕ್ಷಿಣಪಥವನ್ನು ಜಯಿಸಲು ದಂಡಯಾತ್ರೆ ಕೈಗೊಂಡನು. ಆತನು ಉತ್ತರದ ಮಾಧವರನ್ನು ಸೋಲಿಸಿ ಪೂರ್ವದಲ್ಲಿ ಗಜಪತಿಯನ್ನು, ದಕ್ಷಿಣದಲ್ಲಿ ತಮಿಳು ರಾಜ್ಯವನ್ನೂ, ಓರಂಗಲ್ಲಿನ ಕಾಕತೀಯರನ್ನು ಜಯಿಸಿದ್ದನು. ಈ ರೀತಿಯ ರಾಜಕೀಯ ಸಾಧಿಸಿದ್ದಲ್ಲಿ ಹೊಯ್ಸಳ ರಾಜನಾದ ೩ನೇ ಬಲ್ಲಾಳನು ಉತ್ತರದ ವೈರಿಗಳನ್ನು ಸಮರ್ಥವಾಗಿ ಎದುರಿಸಿದನು. "ಈ ಯುದ್ಧಗಳಲ್ಲಿ ಸಂಗಮನ ಐವರು ಮಕ್ಕಳು ೩ನೇ ಬಲ್ಲಾಳನಿಗೆ ಸಹಾಯ ನೀಡಿದರು. ಇದರಿಂದ ಸಂಗಮರ ಮೇಲೆ ಹೊಯ್ಸಳ ರಾಜನಿಗೆ ಸಂತೋಷ ಉಂಟಾಗಿತ್ತು. ಮುಂದೆ ಹೊಯ್ಸಳ ರಾಜರು ಈ ಐದನೆಯ ಸಂಗಮನ ಮಕ್ಕಳಿಗೆ ಧರ್ಮಧೀಕ್ಷೆಯನ್ನು ಬಿಟ್ಟು ಹೋದರೂ ಕೂಡ ಈ ಸಹೋದರರಿಗೆ ಮೊದಲನೇ ೩ನೇ ಬಲ್ಲಾಳನೇ ಮಹಾರಾಜನಾಗಿದ್ದನು"[೧]

೧೩೩೬ರಲ್ಲಿ ಸಂಗಮ ಸಹೋದರರು ವಿಜಯನಗರದಲ್ಲಿ ರಾಜ್ಯ ಸ್ಥಾಪನೆಯೊಂದನ್ನು ಮಾಡಿದರೂ ಸಹ ಅವರು ಇನ್ನೂ ಹೊಯ್ಸಳ ರಾಜರುಗಳ ಸಾಮಂತ ಅರಸರೆಂದು ಶಾಸನಗಳಲ್ಲಿ ಹೇಳಿಕೊಂಡಿದ್ದಾರೆ. "ಮುಂದೆ ಕ್ರಿ.ಶ. ೧೩೪೬ರಲ್ಲಿ ಇವರು ಸಂಪೂರ್ಣ ಸ್ವತಂತ್ರ್ಯವಾದ ಸಾಮ್ರಾಜ್ಯದ ಒಡೆಯರಾದರು. ಹೀಗೆ ಸ್ಥಾಪನೆಯಾದ ಸಾಮ್ರಾಜ್ಯವು ಕೆಲವು ಖಚಿತವಾದ ಉದ್ದೇಶಗಳನ್ನು ಹೊಂದಿತ್ತು. 'ಸ್ವರಾಜ್ಯ ಮತ್ತು ಸ್ವಧರ್ಮ'ದ ಸಂಸ್ಕೃತಿಯನ್ನು ಪೂರೈಸುವ ಹೊಣೆಯನ್ನು ಹೊತ್ತು ಈ ವಿಜಯನಗರ ಸಾಮ್ರಾಜ್ಯವು ತಲೆ ಎತ್ತಿತ್ತು"[೨] ಈ ಹಿನ್ನೆಲೆಯಲ್ಲಿಯೇ ಹಲವಾರು ಚಾರಿತ್ರಿಕ ಕಾವ್ಯಗಳು, ಪುರಾಣ ಪುರುಷರ ಪುಣ್ಯ ಚರಿತ್ರೆಗಳು, ಸ್ಥಳ ಚರಿತ್ರೆಗಳು, ಮಹಾತ್ಮೆಗಳು, ಸ್ಥಳ ಪುರಾಣಗಳು ಉದಯಿಸಿದವು. ಇವು ಪ್ರಾದೇಶಿಕ ಅಥವಾ ಯಾವುದೇ ಒಂದು ಸ್ಥಳಕ್ಕೆ ಅಂಟಿಕೊಂಡ

ಧರ್ಮ ಅಥವಾ ದೇವರ ಲೀಲೆ, ಪವಾಡ, ವ್ರತಗಳಿಂದ ಕೂಡಿದ ದೇಶೀಯ ಸಂಸ್ಕೃತಿಯನ್ನು ಸಾರುವಂತಹ ಮತ್ತು ಅದನ್ನು ಪುನರುಜ್ಜೀವನಗೊಳಿಸುವಲ್ಲಿ ವಿಜಯನಗರ ಸಾಮ್ರಾಜ್ಯದ ಅರಸರ ಪಾತ್ರ ದೊಡ್ಡದು. ಆದ್ದರಿಂದಲೇ ಎಲ್ಲಾ ಧರ್ಮ ಪಂಥಗಳನ್ನು ಪೋಷಿಸುವ ಪರಂಪರಾಗತವಾದ ವಿದ್ಯೆ, ಜ್ಞಾನ ಶಾಖೆಗಳನ್ನು ಊರ್ಜಿತಗೊಳಿಸುವ ಸ್ವಭಾಷೆ, ಸಾಹಿತ್ಯ, ಕಲೆಗಳಿಗೆ ಪ್ರೋತ್ಸಾಹ ನೀಡಿ ಅನೇಕ ದಾನದತ್ತಿಗಳನ್ನು ನೀಡಿದರು.

ಈ ಘಟನೆಗಳಿಗೆಲ್ಲಾ ಪ್ರಮುಖ ಕಾರಣವೆಂದರೆ ಖಿಲ್ಜಿಯ ದಾಳಿಯಿಂದ ಸಂಸ್ಕೃತಿಯ ನಷ್ಟವಾಗುವಂತೆ ಮಾಡಲಾಗಿತ್ತು. "೧೩೦೮ ರಿಂದ ೧೩೧೨ರ ಅವಧಿಯಲ್ಲಿ ದೇಶೀಯ ಅರಸರನ್ನು ಸೋಲಿಸಿ ಶರಣಾಗುವಂತೆ ಮಾಡುವುದರ ಜೊತೆಗೆ ಅವನು ಉಗ್ರ ಮತಾಂಧನಾಗಿದ್ದನು".[೩] ಇದರಿಂದ ಹಿಂದೂ ಧರ್ಮ ಪತನವಾಗುವ ಭಯ-ಭೀತಿ ಉಂಟಾಯಿತು.

ನಂತರ ಬಂದ ಮಹಮ್ಮದ್ ಬಿನ್ ತುಘಲಕ್‌ನು ತನ್ನ ದುರಾಡಳಿತದಿಂದ ತೈಮೂರನ ದಾಳಿಯಿಂದ "೧೩೯೮ರಲ್ಲಿ ದೆಹಲಿಯ ಮೇಲೆ ಸಾವಿರಾರು ನಿರಪರಾಧಿ ನಾಗರೀಕರನ್ನು ಹತ್ಯೆಗೈದು ಅಪಾರ ಸಂಪತ್ತನ್ನು ಲೂಟಿ ಮಾಡಿದನು".[೪] "ಲೋದಿಯು ಹಿಂದೂ ದ್ವೇಷಿಯಾಗಿದ್ದನಲ್ಲದೆ, ಮಥುರಾದ ಹಿಂದೂ ದೇವಾಲಯಗಳನ್ನು ಮಸೀದಿಗಳನ್ನಾಗಿ ಪರಿವರ್ತಿಸಿದನು".[೫] ಇಷ್ಟೇ ಕಾರಣಗಳಲ್ಲದೇ ದೇಶೀಯ ರಾಜರುಗಳ ವಶದಲ್ಲಿದ್ದ ಪ್ರಾಂತ್ಯಗಳ ಮೇಲಿನ ಹಿಡಿತ ಮತ್ತು ಅವನ ಸ್ವಧರ್ಮ ಮತಾವಲಂಬನೆಯು ಹೆಚ್ಚಾಯಿತು. ಇದೇ ಸಂದರ್ಭದಲ್ಲಿ ಜೈನ ಮತ್ತು ಬೌದ್ಧ ಧರ್ಮಗಳು ಆಗ್ನೇಯ ಏಷ್ಯಾದಲ್ಲಿಯೂ ತಮ್ಮ ಧರ್ಮದ ಪ್ರಭಾವವನ್ನು ಬೀರಿದವು. ಇದರಿಂದ ಹಿಂದೂ ಧರ್ಮದ ಪ್ರಮುಖ ಧರ್ಮಗಳಾದ ಶೈವರು-ವೈಷ್ಣವರು ತಮ್ಮ ಸಂಸ್ಕೃತಿಯ ಉಳಿವಿಗಾಗಿ, ಧರ್ಮ ವಿಸ್ತರಣೆಗಾಗಿ ಇಂತಹ ಹಲವಾರು ಮಹಾತ್ಮ್ಯೆ ಕೃತಿಗಳನ್ನು ಆಯಾ ಸಂದರ್ಭದ ಚರಿತ್ರೆಯನ್ನು ಪುರಾಣದೊಂದಿಗೆ ಸಂಮ್ಮಿಲನಗೊಳಿಸಿ ಕೃತಿಯನ್ನು ರಚಿಸಲಾರಂಭಿಸಿದವು. ಇಂತಹ ಕೃತಿಗಳ ರಚನೆಗೆ ಪ್ರೋತ್ಸಾಹ ದೊರೆತಿದ್ದು ವಿಜಯನಗರ ಅರಸರ ಆಳ್ವಿಕೆಯಲ್ಲೇ ಎಂದು ಹೇಳಬಹುದು.

ಅದರಲ್ಲಿ ಚಿಕ್ಕದೇವರಾಯನ ಕಾಲದಲ್ಲಿ ಪಶ್ಚಿಮ ರಂಗ ಮಹಾತ್ಮ್ಯೆ, ಶ್ರೀರಂಗ ಮಹಾತ್ಮ್ಯೆ, ಯಾದವಗಿರಿ ಮಹಾತ್ಮ್ಯೆ, ವೆಂಕಟಗಿರಿ ಮಹಾತ್ಮ್ಯೆ ಎಂಬ ಪ್ರಮುಖ ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ಕೃತಿಗಳು ರಚನೆಯಾದವು. ಅದೇ ರೀತಿ

ಚಿಕ್ಕುಪಾಧ್ಯಾಯನಿಂದ ಕಂಚಿ ಕ್ಷೇತ್ರದ ಮಹಿಮೆ, ಪಶ್ಚಿಮರಂಗ ಮಹಾತ್ಮ್ಯೆ, ಯಾದವಗಿರಿ ಮಹಾತ್ಮ್ಯೆ, ಹಿಮವದ್ಗೋಪಾಲ ಸ್ವಾಮಿ ಬೆಟ್ಟದ ಮಹಿಮೆ, ವೆಂಕಟಗಿರಿ ಮಹಾತ್ಮ್ಯೆ, ಶ್ರೀರಂಗ ಮಹಾತ್ಮ್ಯೆ ಎಂಬ ಪ್ರಮುಖ ಕೃತಿಗಳು ರಚಿಸಲ್ಪಟ್ಟವು. ಅದೇ ರೀತಿಯಾಗಿ ಮುಮ್ಮಡಿ ಕೃಷ್ಣರಾಜನ ಕಾಲದಲ್ಲಿ ಅಖಂಡ ಕಾವೇರಿ ಮಹಾತ್ಮ್ಯೆ, ತಲಕಾವೇರಿ ಮಹಾತ್ಮ್ಯೆ, ಚುಂಚನಕಟ್ಟೆ ಮಹಾತ್ಮ್ಯೆ, ದೇವಿ ಮಹಾತ್ಮ್ಯೆ, ಹಾಲಾಸ್ಯ ಮಹಾತ್ಮ್ಯೆ ಎಂಬ ಮಹಾತ್ಮ್ಯೆಗಳು ಏಳನೇ ಮುಮ್ಮಡಿ ಅರಸರಿಂದ ರಚನೆಯಾದವು. ಅದೇ ರೀತಿಯಾಗಿ ಕಳಲೆ ನಂಜರಾಜರಿಂದಲೂ ಹಲವಾರು ಮಹಾತ್ಮ್ಯೆ ಕೃತಿಗಳು ರಚನೆಯಾದವು. ಅವೆಂದರೆ ಭದ್ರಗಿರಿ ಮಹಾತ್ಮ್ಯೆ, ಹಾಲಾಸ್ಯ ಮಹಾತ್ಮ್ಯೆ, ಹರವತ್ತಾಚಾರ್ಯ ಮಹಾತ್ಮ್ಯೆ, ಕಕುದ್ಗಿರಿ ಮಹಾತ್ಮ್ಯೆ, ಗರಳಪುರಿ ಮಹಾತ್ಮ್ಯೆ, ಸೇತು ಮಹಿಮಾದರ್ಶಿ ಹಾಗೆ ಚೆಲುವಾಂಬೆ ಕೃತಿಗಳಾದ ವೆಂಕಟಗಿರಿ ಮಹಿಮೆಯ ಲಾಲಿಪದ, ಮತ್ತು ತುಲಾ ಮಾಸದ ಕಾವೇರಿ ನದಿಯ ಮಹಿಮೆ ಎಂಬಂತಹ ಅನೇಕ ಕೃತಿಗಳು ರಾಜರು ಮತ್ತು ಮಂತ್ರಿಗಳಿಂದಲೇ ರಚಿತವಾಗಿರುವ ಸಾಹಿತ್ಯವನ್ನು ನೋಡಬಹುದು.

ಈ ಕೃತಿಗಳು ಅಹಿಂಸೆ ತತ್ವವನ್ನು ಸಾರುತ್ತಾ, ಧರ್ಮಗಳ ಸೂಕ್ಷ್ಮತೆಯನ್ನು ಬಿಡಿಸುತ್ತ ವರ್ಣನಾತ್ಮಕವಾಗಿ ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡುತ್ತವೆ. ಅಲ್ಲದೇ ಇವು ಸಂಸ್ಕೃತ ಪುರಾಣಗಳಿಂದ ಪ್ರೇರಣೆಗೆ ಒಳಗಾಗಿವೆ. ೧೬ನೇ ಶತಮಾನದ ತನಕ ಯಾವುದೇ ಸ್ವತಂತ್ರವಾದ ಮಹಾತ್ಮ್ಯೆಯ ಕೃತಿಗಳು ಕಂಡುಬರುವುದಿಲ್ಲ. ಅಲ್ಲಲ್ಲಿ ಕೃತಿಗಳ ಮಧ್ಯದಲ್ಲಿ ಚಿಕ್ಕಪುಟ್ಟ ಮಹಾತ್ಮ್ಯೆಯ ವರ್ಣನೆಗಳು ಕಂಡುಬರುತ್ತವೆ. ಮೈಸೂರರಸರ ಪೀಳಿಗೆಯಲ್ಲಿ ಈ ಮಹಾತ್ಮ್ಯೆಗಳ 'ಸುಗ್ಗಿಯ ಕಾಲವಾಗಿ' ಬೆಳೆದು ಬಂದಿತೆಂದರೆ ತಪ್ಪಾಗಲಾರದು. ಅದರಲ್ಲೂ ಚಿಕ್ಕದೇವರಾಯ ಮತ್ತು ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ರಚಿತವಾಗಿರುವ ಮೇಲುಕೋಟೆ, ಕಂಚಿ, ಶ್ರೀರಂಗ, ಕ್ಷೇತ್ರಗಳ ಮತ್ತು ಕಾವೇರಿ ನದಿಯ ಮಹಾತ್ಮ್ಯೆಗಳೇ ಅಧಿಕ. ಕೆಲವು ಸಂಸ್ಕೃತದಲ್ಲಿರುವ ಮಹಾತ್ಮ್ಯೆ ಗ್ರಂಥಗಳಿಗೆ ಕನ್ನಡದಲ್ಲಿ ಟೀಕನ್ನು ರಚಿಸಿರುತ್ತಾರೆ. ಮತ್ತೆ ಕೆಲವರು ಅವನ್ನೇ ಆಧರಿಸಿ ಸ್ವತಂತ್ರ್ಯವಾದ ಕೃತಿಗಳನ್ನೇ ರಚಿಸಿದ್ದಾರೆ. ಇಂತಹ ಕೃತಿಗಳು ಗದ್ಯಪದ್ಯಾತ್ಮಕವಾಗಿ, ಛಂದೋಬದ್ಧವಾಗಿ, ವರ್ಣನಾತ್ಮಕವಾಗಿ ರಚಿತಗೊಂಡಿವೆ.

ಇವು ಪುರಾಣ ಇತಿಹಾಸಗಳಿಂದ ಕೂಡಿದ ದಿವ್ಯ ಆದರ್ಶವನ್ನು ಜನಜೀವನದಲ್ಲಿ ಹಾಸುಹೊಕ್ಕಾಗುವಂತೆ ಮಾಡಿ ಜನತೆಯ ಉಸಿರಾಗುವಂತೆ ಮಾಡಿದ ಕೀರ್ತಿ ಈ ಮಹಾತ್ಮ್ಯೆಗಳದ್ದಾಗಿದೆ. ಇವು ಅಂತರಂಗ ಮತ್ತು ಬಹಿರಂಗಗಳೆರಡಲ್ಲೂ ಏಕರೂಪವಾಗಿ

ವ್ಯಾಪಿಸಿರುವ ನಿರ್ವಿಕಲ್ಪ ಬ್ರಹ್ಮನ ಸ್ವರೂಪವನ್ನು ಸಾಮಾನ್ಯ ಜನರು ಸುಲಭವಾಗಿ ಕಂಡುಕೊಳ್ಳಲಾರದವರಾಗಿದ್ದರು. ಈ ಕಲ್ಪನೆಯನ್ನು ಎಲ್ಲರಿಗೂ ಕಲ್ಪಿಸುವ ಸುಲಭ ಪ್ರಯತ್ನ ನಡೆಸಬೇಕಾಗಿತ್ತು. ಬೌದ್ಧ, ಜೈನ ಧರ್ಮಗಳು ಒಂದು ರೀತಿಯಲ್ಲಿ ಆ ಪ್ರಯತ್ನವನ್ನು ನಿರ್ವಹಿಸಿದವು. ಆದರೆ ವೈದ್ಧಿಕ ಧರ್ಮದ ಆವರಣದಲ್ಲಿಯೇ ಇದ್ದು ಇದನ್ನು ಸಾಧಿಸಿದವು. ಇತಿಹಾಸ, ಪುರಾಣಗಳು, ವೇದ–ಉಪನಿಷತ್ತುಗಳ ಹೂರಣವನ್ನು ಅನೇಕ ಕಥೆಗಳೊಡನೆ ಸೇರಿಸಿ ನಾನಾ ಬಗೆಯ ಭಕ್ಷ್ಯ ಭೋಜ್ಯಗಳನ್ನಾಗಿ ಮಾಡಿ, ಎಲ್ಲಾ ಮಟ್ಟದ ಜನರ ರುಚಿಗೂ ಆಸ್ವಾದ್ಯವಾಗುವಂತಹ ಕೃತಿಗಳನ್ನು ಸಮಾಜಕ್ಕೆ ನೀಡುವಲ್ಲಿ ಮಹಾತ್ಮೆಯ ಕೃತಿಗಳು ಮುಖ್ಯವಾಗುತ್ತವೆ.

ದೇವರನ್ನು ಕುರಿತ ಕಥೆಗಳನ್ನು ಕಟ್ಟುವ ಪರಿಕಲ್ಪನೆಯು ವೇದಗಳ ಕಾಲದಿಂದಲೂ ಬೆಳೆದುಬಂದಿತ್ತು. "ಆರ್ಯರು ತಮ್ಮ ಜೀವನದ ಸೋಲು–ಗೆಲುವುಗಳನ್ನೇ, ದೇವತೆಗಳಿಗೆ ಆರೋಪಿಸಿ ಕಥೆಯನ್ನು ಕಟ್ಟುತ್ತಿದ್ದುದೂ ಎಂದು; ಹೀಗೆ ಕಥೆಯನ್ನು ಕಟ್ಟುವ ಕಲ್ಪನಾ ಪ್ರತಿಭೆ ಇತಿಹಾಸ ಮತ್ತು ಪುರಾಣಗಳಲ್ಲಿ ವಿಶೇಷವಾಗಿ ಬೆಳೆದಿವೆ"[೬] ಅದು ಮುಂದೆ ಸಾಹಿತ್ಯ–ಸಂಸ್ಕೃತಿಯಲ್ಲಿ ಅಚ್ಚಳಿಯದೇ ಉಳಿಯಿತೆಂದರೆ ತಪ್ಪಾಗಲಾರದು.

ಇಂತಹ ಕೃತಿಗಳು ಪ್ರಾಚೀನ ಭಾರತದ ಸಂಪ್ರದಾಯದ ನೆಲೆಯ ಜೊತೆಯಲ್ಲಿಯೇ ಮಾನವೀಯತೆಯನ್ನು ಒಳಗೊಂಡಿವೆ. ಅತ್ಯುಚ್ಚ ಸಂಸ್ಕೃತಿಯ ಕಥೆಗಳ ಜೋಡಣೆಯಾಗಿ ಕಾಣಸಿಗುತ್ತವೆ. ಕೇವಲ ಧರ್ಮವನ್ನಷ್ಟೇ ಹೇಳದೇ ಅದರಲ್ಲಿ ಹಿಂಸೆ ಮಾಡಬಾರದು, ಧರ್ಮಕ್ಕೆ ವಿರುದ್ಧವಾಗಿರಬಾರದು, ದೇವರಲ್ಲಿ ನಂಬಿಕೆ ಇಡಬೇಕು, ನ್ಯಾಯ–ನೀತಿಯಂತಹ ತತ್ವಬೋಧನೆಯನ್ನು ಬಿಡಿ–ಬಿಡಿ ಕಥೆಗಳ ಮೂಲಕ ಹೇಳಲಾಗುತ್ತಿತ್ತು. ಈ ಪರಂಪರೆಯು ಉನ್ನತವರ್ಗದ ಜನರಲ್ಲಿ ಮಾತ್ರವಿತ್ತು. ಅದು ೧೬ನೇ ಶತಮಾನದಲ್ಲಿ ವಿಷ್ಣುವಿನ ಅವತಾರದ ರೂಪದಲ್ಲಿ ಕೃಷ್ಣನ ಪಾತ್ರದ ಕಲ್ಪನೆಯು ಬೆಳೆಯತೊಡಗಿ ಅವನ ಸುತ್ತ ಹಲವಾರು ಕಥೆಗಳು ಹುಟ್ಟಿ ಆ ಮೂಲಕ ಸೃಷ್ಟಿ, ಲಯದ ಅವತಾರವಾಗಿ ವಿಷ್ಣುವಿನ ರೂಪವನ್ನು ರಂಗನಾಥ, ಪಶ್ಚಿಮರಂಗನಾಥ, ವೆಂಕಟಗಿರಿ ಮಹಾತ್ಮೆಯಂತಹ ಕೃತಿಗಳು ವೈಷ್ಣವ ಧರ್ಮದ ಸ್ವರೂಪ, ಆದರ್ಶತತ್ವಗಳನ್ನು ಸೇರಿಸಿಕೊಂಡು ಚರಿತ್ರೆಯನ್ನು ಬರೆದರು. ಅದೇ ರೀತಿಯಾಗಿ ಶೈವ ಧರ್ಮವು ವಿಜಯನಗರ ಅರಸರ ಕಾಲದಲ್ಲಿ ಅತಿ ಹೆಚ್ಚು ಪ್ರಬಲವಾಗಿತ್ತು. ಇದಕ್ಕೆ ಉದಾಹರಣೆಯಾಗಿ ಪ್ರೌಢದೇವರಾಯನ ಕಾಲವನ್ನು ಮುಖ್ಯವಾಗಿ ನೋಡಬಹುದು. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವೀರಶೈವ ಧರ್ಮವು ೧೫ನೇ ಶತಮಾನದಲ್ಲಿ ತುಂಬಾ ಹುಲುಸಾಗಿ ಬೆಳೆಯಿತು. ಅದಕ್ಕೆ ಸಂಗಮ ದೊರೆಗಳು ವೀರಶೈವ

ಮತಾವಲಂಬಿಗಳಾಗಿದ್ದು ಸಹ ಒಂದು ಕಾರಣವಾಗಿರಬಹುದು. ಇದೇ ಶತಮಾನದಲ್ಲಿ ವೀರಶೈವ ಧರ್ಮ ದೀಪಕರಾಗಿ ಅವತರಿಸಿದ್ದ ನೂರೊಂದು ವಿರಕ್ತರು ಮತ್ತು ತೋಂಟದ ಸಿದ್ಧ ಕುಲತಿಲಕರ ಪ್ರಭಾವ ದೀಪ್ತಿ ಇನ್ನೊಂದೆಡೆ ಇದ್ದಿತು. ಈ ಎರಡೂ ಶಕ್ತಿಗಳು ಈ ಶತಮಾನದ ವೀರಶೈವ ಧರ್ಮ ಪ್ರವರ್ಧಮಾನಕ್ಕೆ ಬರಲು ಪ್ರಮುಖ ಕಾರಣವಾಗುವುದರ ಜೊತೆಗೆ ರಾಜಾಶ್ರಯವು ಕೂಡ ಅಷ್ಟೆ ಪ್ರಮುಖವಾಗಿ ಕಂಡುಬರುತ್ತದೆ.

ಅದರಲ್ಲಿ "ಪ್ರೌಢದೇವರಾಯನು ವೀರಶೈವನೆಂಬುದಕ್ಕೆ ನಮಗೆ ನಿಚ್ಚಳ ಪ್ರಮಾಣಗಳಿವೆ. ತೆಂಗಿನಾಪುರದ ವೀರಭದ್ರ ದೇವಾಲಯದ ಒಂದು ಶಾಸನದಲ್ಲಿ ಇವನನ್ನು 'ವೀರಶೆಟ್ಟಿ ಪಾಗವು ಸಾರ ಸಂಪನ್ನ' ಎಂದು ಕರೆಯಲಾಗಿದೆ. ಹಾಗೆ ಇವನ ಆಳ್ವಿಕೆ ಕಾಲದ ಇತರ ಶಾಸನಗಳಲ್ಲಿ ಪ್ರೌಢದೇವರಾಯನ ವಂಶಸೂತ್ರವನ್ನು ಹೇಳುವಾಗ ಸ್ಮರ ಹರ ಚರಣ ಧ್ಯಾನ ಸಂತಾನ ಪುಣ್ಯ ಶ್ರೇಣಿ ಮಾಕಂದವಾದ ಸಮಧಿಕ ಸುಸಮಾಧವ ಚೈತ್ರಾಸವು ಎಂದು ವರ್ಣಿಸಲಾಗಿದೆ. ಶ್ರೀಶೈಲ ಮಲ್ಲಿಕಾರ್ಜುನನ ಭಕ್ತ್ಯಾರ್ಥವಾಗಿ ಈ ರಾಯನು ಶುದ್ಧ ಸದಾಚಾರಿ ಸಂಪನ್ನರಪ್ಪ ಮುಕ್ತಿನಾಥ ಒಡೆಯರಿಂದ ವಾಸಿ ಮಾಡಿಸುತ್ತಾನೆ. ಇಲ್ಲಿ ಉಕ್ತವಾದ ಶುದ್ಧ ಸದಾಚಾರ ವೀರಶೈವ ಪರಿಭಾಷೆಯಾಗಿದೆ. ಇವು ಪ್ರೌಢದೇವರಾಯನ ಕಾಲದ ವೀರಶೈವ ತತ್ವಕ್ಕೆ ಚಾರಿತ್ರಿಕ ಆಧಾರಗಳೆನಿಸಿವೆ".[೭] ಹಾಗೆಯೆ "ಪ್ರೌಢದೇವರಾಯನು ವೀರಶೈವ ಧೀಕ್ಷೆಯನ್ನು ಕೈಗೊಂಡು ಅನೇಕ ವಿರಕ್ತ ಕವಿಗಳನ್ನು ಸ್ವತಃ ಆರಂಭಿಸಿದನೆಂಬ ವಿಷಯಗಳು ಕನ್ನಡ ಕಾವ್ಯಗಳಾದ ಬಸವ ಚರಿತ್ರೆ, ಚೆನ್ನಬಸವ ಪುರಾಣ"[೮]ದಲ್ಲಿ ಸಿಗುತ್ತದೆ ಎಂದು ವಿ.ಶಿವಾನಂದ ಅವರು ಹೇಳುತ್ತಾರೆ.

ಪ್ರೌಢದೇವರಾಯನು ಕೆಲವು ವೀರಶೈವ ಮಹಾಕೃತಿಗಳನ್ನು ಉಡುಗೊರೆಯನ್ನಿತ್ತು ಕೃತಿಗಳನ್ನು ಮೆರವಣಿಗೆ ಮಾಡಿಸಿದನು. ಅದರಲ್ಲಿ 'ಪ್ರಭುಲಿಂಗಲೀಲೆ'ಯೂ ಒಂದು. ಅಲ್ಲದೆ ಇವನ ಕಾಲದಲ್ಲಿ ಹಲವಾರು ಮಂತ್ರಿಗಳು ವೀರಶೈವರೇ ಆಗಿದ್ದರು. ಅದರಲ್ಲಿ ಲಕ್ಕಣ್ಣ ದಂಡೇಶ (ಶಿವತತ್ವ ಚಿಂತಾಮಣಿ), ಜಕ್ಕಣ (ಏಕೋತ್ತರಿ ಶಟಸ್ಥಲ), ಗುರುರಾಯ ಅಷ್ಟಭಾಷಾ ಕವಿಯಾದ ಚಂದ್ರಶೇಖರನಿಗೆ ಆಶ್ರಯ ನೀಡಿದ್ದನು ಎಂದು ಚರಿತ್ರೆಯಿಂದ ತಿಳಿದುಬರುತ್ತದೆ.

ಹೀಗೆ ಶೈವ-ವೈಷ್ಣವ ಸಾಹಿತ್ಯದ ದೇಶದ ಸಾಹಿತ್ಯಿಕ ವಲಯದಲ್ಲಿ ಪ್ರಮುಖವಾದ ಪ್ರಭಾವ ಬೀರಿದವು. ಅದು ರಾಜಕ್ರಾಂತಿಯಾಗಿ, ಸಾಂಸ್ಕೃತಿಕ ಸಂವರ್ಧನೆಗಳಂತೆ ಮತೀಯ ಪ್ರೇರಣೆಯಿಂದ ಕೂಡಿದ ಸಾಹಿತ್ಯದ ಉಗಮಕ್ಕೆ ಸಹ ಕಾರಣವಾಗಿದೆ. ಚಂಪೂ ಸಾಹಿತ್ಯ ಸೃಷ್ಟಿಗೆ ಜೈನ ಧರ್ಮ ಪ್ರಸಾರದ ಹಿನ್ನೆಲೆಯಾಗಿತ್ತು. ನಂತರ ವಚನ ಸಾಹಿತ್ಯದ

ಪ್ರಭಾವ ಹಾಗೆ ಪಾಶ್ಚಾತ್ಯ ಸಾಹಿತ್ಯದಿಂದ ಮತೀಯ ಪ್ರೇರಣೆಯನ್ನು ಪಡೆದುಕೊಂಡು ಕ್ರೈಸ್ತ ಮತದ ತತ್ವಗಳು ಅನುಷ್ಠಾನವಾದವು. ಈ ದೃಷ್ಟಿಯಿಂದ ಇಂತಹ ತತ್ವಶಾಸ್ತ್ರೀಯ, ಧಾರ್ಮಿಕ ಚರಿತ್ರೆಗಳಂತಹ ಕಾವ್ಯ ಸೃಷ್ಟಿಗೆ ಪ್ರೇರಕ ಶಕ್ತಿಯಾಗಿ ವೈಷ್ಣವ–ವೀರಶೈವ ಧರ್ಮಗಳು ಹುಟ್ಟಿಕೊಂಡವು. ಆದರೆ ಈ ಕಾಲದ ಎಲ್ಲ ಸಾಹಿತ್ಯವೂ ಮತಧರ್ಮನಿಷ್ಠದಿಂದ ಕೂಡದೇ ಅನೇಕ ಪ್ರತಿಭಾನ್ವಿತ ಕವಿಗಳು ರಸವತ್ಕೃತಿಗಳನ್ನು ರಚಿಸಿದ್ದಾರೆ. ಮತೀಯ ಸಾಹಿತ್ಯವೆನಿಸಿದರೂ ಜಿಜ್ಞಾಸೆ, ಶಾಸ್ತ್ರೀಯ ಪದ್ಧತಿ, ಪಾಂಡಿತ್ಯ ಈ ಕಾಲಕ್ಕೆ ಸಮಗ್ರವಾಗಿ ಬೆಳೆದು ನಿಂತಿತ್ತು ಎಂದರೆ ತಪ್ಪಾಗಲಾರದು.

ಕಳೆದು ಹೋಗಿರುವ ಹಿಂದೂ ಧರ್ಮವನ್ನು, ಸಂಸ್ಕೃತಿಯನ್ನು ಪುನರ್ಸ್ಥಾಪಿಸಲು ಈ ಶತಮಾನದಲ್ಲಿ ಸಾಕಷ್ಟು ಪ್ರಯತ್ನಗಳು ನಡೆದವು. ಅದರಲ್ಲಿ ಮಲ್ಲಿಕಾಫರನು ಮಾಡಿದ ದಾಳಿಯಿಂದ ಹಿಂದೂ ದೇವಾಲಯಗಳನ್ನು ನೆಲಸಮ ಮಾಡಿ ಮಸೀದಿಗಳನ್ನು ನಿರ್ಮಿಸಿದ್ದರಿಂದ ಹಿಂದೂ ಸಂಸ್ಕೃತಿ ಪತನದ ಅಂಚಿಗೆ ದೂಡಲ್ಪಟ್ಟಿತ್ತು. ಆ ಹೊತ್ತಿನಲ್ಲೇ ಮತ್ತೆ ಹಿಂದೂ ಸಂಸ್ಕೃತಿಯ ಬೆಳಕನ್ನು ಹೊತ್ತು ತಂದ ಕೀರ್ತಿ ಅಂದಿನ ವಿಜಯನಗರ ಸಾಮ್ರಾಜ್ಯದ ಅರಸರಿಗೆ ಸಾಧ್ಯವಾಯಿತು.

ಇಂತಹ ಸಾಹಿತ್ಯ ಸೃಷ್ಟಿಯ ವ್ಯಾಪಕತೆಯನ್ನು ಪುರಾಣ, ಐತಿಹ್ಯ, ಮಹಾತ್ಮೆಯಂತಹ ಕೃತಿಗಳಲ್ಲಿ ನೋಡಬಹುದು. ಈ ಕೃತಿಗಳು ಹುಟ್ಟಿದುದೇ ಮುಖ್ಯವಾಗಿ ಧರ್ಮದ ತಾತ್ವಿಕ ಆದರ್ಶವನ್ನು ಜನರ ವ್ಯಾವಹಾರಿಕ ಜೀವನದಲ್ಲಿ ಅಳವಡಿಸಿಕೊಳ್ಳಲು ಸಹಾಯಕವಾಯಿತೆಂದರೆ ತಪ್ಪಾಗಲಾರದು. ಇನ್ನೊಂದು ಮುಖ್ಯವಾದ ಅಂಶವೆಂದರೆ ವೇದ–ಉಪನಿಷತ್ತುಗಳ ಯುಗವಾದ ಮೇಲೆ ಸ್ಮೃತಿಗಳ ಕಾಲದಲ್ಲಿ, ವರ್ಣವಿಭೇಧಗಳ ತೊಡಕು ಹೆಚ್ಚಿತ್ತು. ಶೂದ್ರರಿಗೂ, ಸ್ತ್ರೀಯರಿಗೂ ವೇದವನ್ನೋದಲು ಅಧಿಕಾರವಿಲ್ಲವೆಂಬ ಸಂಕುಚಿತ ಸ್ಥಿತಿಗೆ ವೈಧ್ಧಿಕ ಸಂಸ್ಕೃತಿ ಇಳಿದಿತ್ತು. ಧರ್ಮದಿಂದ ಜನತೆ ವಂಚಿತವಾಗಿತ್ತು. ಅದನ್ನು ಕಂಡು ಒಂದು ಕಡೆ ಬೌದ್ಧ, ಜೈನ ಮತಗಳು ಪ್ರತಿಕ್ರಿಯೆಯನ್ನು ತೋರ್ಪಡಿಸಿದಂತೆ, ವೈಧ್ಧಿಕ ಧರ್ಮದ ಅನುಯಾಯಿಗಳಾದ ಕೆಲವು ಋಷಿಗಳ ಹೃದಯ ಅನುಕಂಪದಿಂದ ಮಿಡಿಯಿತು. ಆಗ ಅವರು ವರ್ಣಗಳ ತಾರತಮ್ಯವಿಲ್ಲದೆ ಎಲ್ಲರೂ ಓದಬಹುದಾದ ಗ್ರಂಥಗಳಲ್ಲಿ ವೇದೋಪನಿಷತ್ತುಗಳ ಸಾರವನ್ನೆಲ್ಲಾ ಅಡಕಗೊಳಿಸಲು ಪ್ರಯತ್ನಿಸಿದರು. ಅದರ ಫಲವಾಗಿ ಅನೇಕ ಪುರಾಣ ಮಹಾತ್ಮೆಗಳು ಹುಟ್ಟನ್ನು ಪಡೆದವು.

ಮಹಾತ್ಮೆಗಳಲ್ಲಿ ಬರುವ ಅನೇಕ ದೇವತೆಗಳು ಮತ್ತು ಅವುಗಳನ್ನು ಕುರಿತ ಕತೆಗಳೂ ಭಾರತದ ಧಾರ್ಮಿಕ ಜೀವನಕ್ಕೆ ವೈವಿಧ್ಯತೆಯನ್ನು ತಂದುಕೊಟ್ಟವು. ವೈವಿಧ್ಯತೆಯಲ್ಲಿ

ಏಕತೆಯನ್ನು ಕಾಣುವ ದೃಷ್ಟಿಯನ್ನು ಬೆಳೆಸಿದವು. ದೈವಶಕ್ತಿ ಒಂದೇ ಎಂದೂ, ಅದು ತನ್ನ ಲೀಲೆಗಾಗಿ ಅನೇಕ ರೂಪಗಳಲ್ಲಿ ವ್ಯಕ್ತವಾಗುತ್ತದೆ ಎಂಬ ಭಾವನೆ ಜನರಲ್ಲಿ ಬೇರೂರುವುದಕ್ಕೆ ಮಹಾತ್ಮೆಗಳು ಸಹಾಯಗಳಾದವು. ಅವುಗಳಲ್ಲಿ ಇರುವ ಕಥೆಗಳು ಎಷ್ಟೋ ಸಂದರ್ಭಗಳಲ್ಲಿ ಅಸಂಬದ್ಧವಾದ ಕಂತೆಗಳಂತೆ ತೋರಿದರೂ, ಅವುಗಳಲ್ಲಿ ಅಡಕವಾಗಿದ್ದ ಆಧ್ಯಾತ್ಮಕ ಅನುಭವದ ಸುಸಂಬದ್ಧತೆ ಜನರನ್ನು ಆಕರ್ಷಿಸಿದವು. ಭಕ್ತಿ, ಜ್ಞಾನ, ಧರ್ಮಗಳ ಸಮನ್ವಯವನ್ನು ಅಲ್ಲಿನ ಕೆಲವು ಕಥೆಗಳು ಸಾಂಕೇತಿಕವಾಗಿ ಸೂಚಿಸುವುದು ಎಂದು ಶಿವನ ಪಂಚವಿಂಶತಿ ಲೀಲೆಗಳಾಗಲೀ, ವಿಷ್ಣುವಿನ ಹತ್ತು ಅವತಾರದ ಕಥೆಗಳಾಗಲಿ, ದೇವಿಪುರಾಣದಲ್ಲಿ ಬರುವ ಆದಿಶಕ್ತಿಯ ಮಹಿಮೆಯಾಗಲೀ ಸಾಮಾನ್ಯ ಓದುಗರ ಮನಸ್ಸನ್ನು ಮುಟ್ಟದೇ ಇರುವುದಕ್ಕೆ ಸಾಧ್ಯವಿಲ್ಲ. ವೇದಾಂತದ ಮಹಾತತ್ವಗಳು ಕಥಾರೂಪದಲ್ಲಿ ಮೈವೆತ್ತು ಜನಸಾಮಾನ್ಯರ ಜೀವನವನ್ನು ವ್ಯಾಪಿಸಿದವು. "ಸ್ತ್ರೀಯರಿಗೂ-ಶೂದ್ರರಿಗೂ ಮತ್ತು ವೇದವನ್ನು ಓದಲು ಅಧಿಕಾರವಿಲ್ಲದ ಇತರರಿಗೂ ಈ ಪುರಾಣಗಳು ರಚಿತವಾದುವೆಂಬ ಮಾತನ್ನು ದೇವಿಪುರಾಣ ಸ್ಪಷ್ಟವಾಗಿ ಹೇಳುತ್ತದೆ"

ಇಂತಹ ಮಹಾತ್ಮ್ಯೆಗಳಲ್ಲಿ ಆಚರಣೆಗಳು, ವ್ರತಗಳು ತೀರ್ಥಕ್ಷೇತ್ರಾದಿ ವಿಚಾರಗಳಿಂದ ತುಂಬಿ ಹೋಗಿರುವುದು ಸಂಸ್ಕೃತಿಯ ದೃಷ್ಟಿಯಿಂದ ಗಮನಾರ್ಹವಾದ ಬಹುಮುಖ್ಯವಾದ ಅಂಶವಾಗಿದೆ. ಭರತಖಂಡದ ಸಂಸ್ಕೃತಿಯನ್ನು ಒಂದಾಗಿ ಬೆಸೆಯುವುದರಲ್ಲಿ ತೀರ್ಥಕ್ಷೇತ್ರಗಳ ಪಾತ್ರ ಕಡಿಮೆಯದೇನಲ್ಲ. ಉತ್ತರದವರಿಗೆ ದಕ್ಷಿಣದ ತುದಿಯಾದ ರಾಮೇಶ್ವರ ಪವಿತ್ರ ಕ್ಷೇತ್ರವಾದರೆ, ದಕ್ಷಿಣದವರಿಗೆ ಕಾಶಿ ಮತ್ತು ಹಿಮವಕ್ಕೇದರಗಳು ಪೂಜ್ಯವೆನಿಸಿದವು. ಇವುಗಳಿಗೆ ಸರಿಸಮವಾದ ಮೇಲುಕೋಟೆ ನಾರಾಯಣ ಸ್ವಾಮಿ, ಕಕುದ್ಗಿರಿ, ವೆಂಕಟಗಿರಿ, ಶ್ರೀಶೈಲದ ಮಲ್ಲಿಕಾರ್ಜುನ ಇತರೆ ಕ್ಷೇತ್ರಗಳು ಸಮವೆಂದು ಮಹಾತ್ಮ್ಯೆಗಳಲ್ಲಿ ಬಣ್ಣಿತವಾಗಿವೆ. ಈ ಕ್ಷೇತ್ರಗಳ ಆಧ್ಯಾತ್ಮಿಕ ಮೌಲ್ಯವೇನೇ ಇರಲಿ; ಈ ದೇಶ, ಈ ಜನ ಒಂದು ಎಂಬ ಸಾಮಾಜಿಕ ಬಂಧುತ್ವ ಇವುಗಳಿಂದ ಸಾಧಿತವಾಯಿತು. ಇದರಿಂದ ಪರಸ್ಪರ ಜನರು ತಾವೆಲ್ಲಾ ಒಂದೆಂಬ ಭಾವನೆಯನ್ನು ಅರಿತುಕೊಳ್ಳುವ ಅವಕಾಶ ಉಂಟಾಯಿತು. ಇಂತಹ ಅನೇಕ ಕ್ಷೇತ್ರಗಳ ಮಹಿಮೆಯನ್ನು ಪುರಾಣಗಳು ವರ್ಣಿಸಿರುವುದು ಮಾತ್ರ ಕಂಡುಬರುತ್ತದೆ. ಆದರೆ ಚಾರಿತ್ರಿಕ ಅಂಶಗಳ ವಿವರ ವಿರಳವಾಗಿ ಸಿಗುತ್ತದೆ. ಆದ್ದರಿಂದ ಸ್ಥಳ ಮತ್ತು ಕ್ಷೇತ್ರಗಳ ಹಿನ್ನೆಲೆ ಮೂಲಕ ಚಾರಿತ್ರಿಕ ಅಂಶಗಳನ್ನು ಹುಡುಕುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

## ೪.೧ ಅರಸರ ಚರಿತ್ರೆ

ಮೊದಲನೆಯದಾಗಿ ಚಿಕ್ಕದೇವರಾಯನ ಕಾಲದಲ್ಲಿ ಹಲವಾರು ಮಹಾತ್ಮ್ಯೆ ಕೃತಿಗಳು ಹುಟ್ಟಿಕೊಂಡದ್ದನ್ನು ನೋಡಬಹುದು. ಅದರಲ್ಲಿ ಕಮಲಾಚರ ಮಹಾತ್ಮ್ಯೆ, ಹಸ್ತಗಿರಿ ಮಹಾತ್ಮ್ಯೆ, ಯಾದವಗಿರಿ ಮಹಾತ್ಮ್ಯೆ, ವೆಂಕಟಗಿರಿಯ ಮಹಾತ್ಮ್ಯೆ, ಶ್ರೀರಂಗ ಮಹಾತ್ಮ್ಯೆ. ಇವನ ನಂತರ ಮಂತ್ರಿಯಾಗಿ ಬಂದ ಚಿಕ್ಕುಪಾಧ್ಯಾಯ ಹಲವರು ಮಹಾತ್ಮ್ಯೆಯ ಗ್ರಂಥಗಳನ್ನು ರಚಿಸಿದನು. ಹಸ್ತಗಿರಿ, ಕಮಲಾಚಲ ಸೇರಿ ಶ್ರೀರಂಗ ಮಹಾತ್ಮ್ಯೆ, ಯದುಗಿರಿ ಮಹಾತ್ಮ್ಯೆ, ವೆಂಕಟಗಿರಿ ಮಹಾತ್ಮ್ಯೆ, ಪಶ್ಚಿಮರಂಗ ಮಹಾತ್ಮ್ಯೆ ಎಂಬ ಪ್ರಮುಖ ಕೃತಿಗಳು ರಚನೆಯಾದವು. ಅವುಗಳು ಹಲವು ಹಸ್ತಪ್ರತಿ ರೂಪದಲ್ಲೇ ಉಳಿದಿದ್ದರೆ ಇನ್ನೂ ಕೆಲವು ಮೈಸೂರು ವಿಶ್ವವಿದ್ಯಾಲಯದಿಂದ ಪ್ರಕಟವಾಗಿವೆ. ಇದರಲ್ಲಿ ಮುದ್ರಿತವಾಗಿರುವ ಕೃತಿಗಳೆಂದರೆ ಶ್ರೀರಂಗ ಮಹಾತ್ಮ್ಯೆ, ಚಿಕ್ಕುಪಾಧ್ಯಾಯ, ತಿಮ್ಮಕವಿಯ ಪಶ್ಚಿಮ ರಂಗ ಮಹಾತ್ಮ್ಯೆ, ತಿಮ್ಮಕವಿಯ ವೆಂಕಟಗಿರಿ ಮಹಾತ್ಮ್ಯೆ, ತಿಮ್ಮಕವಿಯ ಯಾದವಗಿರಿ ಮಹಾತ್ಮ್ಯೆ ಎಂಬ ಕೃತಿಗಳಲ್ಲಿ ಚಾರಿತ್ರಿಕ ಅಂಶಗಳನ್ನು ನೋಡುಬಹುದಾಗಿದೆ.

ಈ ಮೂರು ಕೃತಿಗಳಲ್ಲಿ ಚಿಕ್ಕದೇವರಾಜನ ವಂಶಾವಳಿಗಳು ಸಿಗುತ್ತವೆ. ಅವನ್ನು ತೌಲನಿಕವಾಗಿ ನೋಡುವುದಾದರೆ ಮೊದಲು ವೆಂಕಟಗಿರಿಯ ಮಹಾತ್ಮ್ಯೆಯಲ್ಲಿ ಪುರಾಣ ಪುರುಷರಿಂದ ಅಂದರೆ ಸೃಷ್ಟಿಯ ಹಿನ್ನೆಲೆಯಿಂದ ಕಥೆಯನ್ನು ಅಥವಾ ವಂಶಾವಳಿಯನ್ನು ಹೇಳಲಾಗಿದೆ. ಶ್ರೀಮನ್ನಾರಾಯಣನ ನಾಭಿ ಕಮಲದಿಂದ ಸುರಾಸುರವಂದ್ಯನು, ಬ್ರಹ್ಮನು ಅತ್ರಿ, ಅವನ ಮಗ ಚಂದ್ರ, ಇವನ ಮಗ ಬುಧ, ಇವನ ಮಗನೇ ಪುರೋರವ– ಆಯು, ನಹುಷ, ಯಯಾತಿ, ಯದು, ತುರ್ವಸು, ದ್ರುಹ್ಯ, ಅನು, ಪುರು, ಯಯಾತಿಯ ಮೊದಲನೆಯ ಮಗನ ವಂಶವೇ ಯದುವಂಶ. ಈ ಯದುವಂಶ ಸಂಜಾತನಾದ ವಸುದೇವ ಎಂಟನೇ ಪುತ್ರನಾಗಿ ದೇವತೆಯಲ್ಲಿ ಕೃಷ್ಣನು ಜನಿಸಿದನು. ಇವನು ದುಷ್ಟ ಸಂಹಾರಕನಾಗಿ, ಯದುವಂಶೋದ್ಧಾರಕನಾದನು ಎಂದು ಪುರಾಣವು ತಿಳಿಸಿದರೆ, ಈ ಪುರಾಣಕ್ಕೆ ಚರಿತ್ರೆ ಹೇಗೆ ಮಿಳಿತವಾಗಿದೆ ಎಂಬುದನ್ನು ಇಲ್ಲಿ ನೋಡಬಹುದು. ಜರಾಸಂಧ ಮುಂತಾದ ರಾಕ್ಷಸರ ಉಪಟಳದಿಂದ ತನ್ನ ಯದುಕುಲವನ್ನು ರಕ್ಷಿಸುವ ಸಲುವಾಗಿ ದ್ವಾರಕೆಯನ್ನು ಸಮುದ್ರ ಮಧ್ಯದಲ್ಲಿ ಸ್ಥಾಪಿಸಿದನು. ಅನಂತರ ಮಾಯೆಯನ್ನು ಕರೆತಂದು ತನ್ನ ಆದಿದೇವನಾದ ನಾರಾಯಣನನ್ನು ಯಾದಗಿರಿಯಲ್ಲಿ (ಮೇಲುಕೋಟೆ) ಸ್ಥಾಪಿಸಿ ಅನಂತರ ಮಹಿಷಾಪುರಕ್ಕೆ (ಮೈಸೂರಿಗೆ) ಬಂದು ಅಲ್ಲಿಯ ಬೆಟ್ಟದಲ್ಲಿ ಚಾಮುಂಡಿಯಾಗಿ ನೆಲೆನಿಂತು, ಯದುವಂಶದವರನ್ನು ಅಲ್ಲಿಯ ರಾಜರನ್ನಾಗಿ ಮಾಡಿದಳು. ನಂತರ ಕೃಷ್ಣನ

ಅನುಮತಿಯಂತೆಯೇ ಯದುಗಿರಿಯನ್ನು ನೋಡಲು ಬಂದವರು ಮೈಸೂರಿನ ಸೌಂದರ್ಯಕ್ಕೆ ಮಾರು ಹೋಗಿ ಅಲ್ಲಿಯೇ ನೆಲೆಸಿದರು. ಚಾಮುಂಡಿಕೆಯ ವರಪ್ರಸಾದದಿಂದ ರಾಜ್ಯವಾಳಿದರು ಎಂಬ ಅಂಶವನ್ನು ಈ ನಾಲ್ಕು ಕೃತಿಗಳಲ್ಲಿ ಹೇಳಲಾಗಿದೆ.

**ಪಶ್ಚಿಮ ರಂಗಕ್ಷೇತ್ರ ಮಹಾತ್ಮೆಯ ಪ್ರಕಾರ ವಂಶಾವಳಿ**




ಚರಿತ್ರೆಕಾರರ ಪ್ರಕಾರ ಮೈಸೂರು ಒಡೆಯರ ಮೂಲ ಪುರುಷರು ಆತ್ರೇಯ ಗೋತ್ರದ ಆಶ್ವಲಾಯನ ಸೂತ್ರದ ಯದುವೀರ. ಅವನಿಂದ ಉದಿಸಿದವರಾದ ಒಡೆಯರಲ್ಲಿ ಯದುರಾಯ ಮೊದಲನೆಯವನು; ಇಲ್ಲವೇ ವಿಜಯ ಹನ್ನೊಂದನೆಯವನಂತೆ. ಯದುರಾಯ (ವಿಜಯ) ೧೩೯೯–೧೪೨೩, ಹಿರಿಯ ಬೆಟ್ಟದ ಚಾಮರಾಜ ಒಡೆಯ ೧೪೨೩–೫೯, ತಿಮ್ಮರಾಜ (೧) ೧೪೫೯–೭೮, ಹಿರಿಯ ಚಾಮರಾಜ ೧೪೭೮–೧೫೧೩ ಎಂದು ಚರಿತ್ರೆಯಿಂದ ತಿಳಿದುಬರುತ್ತದೆ.



ಕಾವ್ಯದಲ್ಲಿ ಉಕ್ತವಾಗಿರುವ ವಂಶಾವಳಿಯು ಚಿಕ್ಕದೇವರಾಯನ ಶ್ರೀರಂಗಪಟ್ಟಣದ ಶಾಸನದಲ್ಲಿ ಉಕ್ತವಾಗಿರುವ ವಂಶಾವಳಿಯನ್ನು ಹೋಲುತ್ತದೆ. ಆದರೆ ದೊಡ್ಡ ದೇವರಾಜನಿಗೆ ಚಿಕ್ಕದೇವರಾಜ ಮತ್ತು ಕಂಠೀರವರಾಜರೆಂಬ ಇಬ್ಬರು ಪುತ್ರರಿದ್ದರೆಂಬುದನ್ನು ಶಾಸನದಲ್ಲಿ ಹೇಳಿಲ್ಲ ಆದರೆ ಚಿಕ್ಕದೇವರಾಜನ ವಂಶಾವಳಿಯಲ್ಲಿ ಮಾತ್ರ ಹೇಳಿದೆ.




ಈ ನಾಲ್ಕು ಕೃತಿಗಳಲ್ಲಿ ಯಾವುದೇ ವ್ಯತ್ಯಾಸವಿಲ್ಲದೆ ವಂಶಾವಳಿಯನ್ನು ಒಂದೇ ರೀತಿಯಲ್ಲಿ ದಾಖಲಿಸಿರುವುದು ತಿಳಿದುಬರುತ್ತದೆ.

ಇದಷ್ಟೇ ಅಲ್ಲದೇ ಯಾದವಗಿರಿ ಮಹಾತ್ಮ್ಯೆಯಲ್ಲಿ ಕರ್ನಾಟಕ ದೇಶದ ವರ್ಣನೆಯನ್ನು ಮಾಡಿದ್ದಾನೆ. ಅಂದಿನ ಕರ್ನಾಟಕವು 'ಮಹಾನಗರ' ಮತ್ತು 'ಮಡಂಬ' ಎಂಬ ಪಟ್ಟಣಗಳಿಂದ ಕೂಡಿದ್ದು; ಸೊಗಸಾದ ಜನಗಳಿಂದಲೂ ಅಷ್ಟೈಶ್ವರ್ಯದಿಂದಲೂ ಕೂಡಿದ್ದಿತೆಂದು ಹೇಳಿದ್ದಾನೆ. ಅನಂತರ ಕಪಾತ ನಂದನ, ಸಜ್ಜನ ಕಾವೇರಿ, ಕಾವೇರಿಯಿಂದ ಇಕ್ಕೇಲದ ಬಯಲು, ಶಾಲೀವನ ವಾಮರಿಯರು ಮೈಸೂರು ನಗರ; ಅಲ್ಲಿಯ ಜನ ಮತ್ತು ಅರಮನೆಯ ವರ್ಣನೆಯನ್ನು ಮಾಡಿರುವುದು ತಿಳಿದುಬರುತ್ತದೆ.

ವೆಂಕಟಗಿರಿ ಮಹಾತ್ಮ್ಯೆಯಲ್ಲಿ ಪ್ರಮುಖವಾಗಿ ಕಂಡುಬರುವ ಚಾರಿತ್ರಿಕ ಅಂಶಗಳನ್ನು ನೋಡುವುದಾದರೆ ಇಲ್ಲಿ ವೆಂಕಟಗಿರಿಗೆ 'ಅಂಜನಾದ್ರಿ' ಎಂದು ಕರೆಯುತ್ತಿದ್ದರೆಂದು ಹೇಳಲಾಗಿದೆ. ಆದರೆ ಅಂಜನಾದ್ರಿ ಇರುವುದು ಹಂಪಿಯ ಹತ್ತಿರ. ಇಲ್ಲಿ ಅಂಜನೆಯು ತಪಸ್ಸು ಮಾಡಿ ಆಂಜನೇಯನನ್ನು ಪಡೆದಳು ಎಂಬುದಾಗಿ ತಿಳಿದುಬರುತ್ತದೆ. 'ಅಂಜನಾದ್ರಿ' ಎಂಬ ಪುರಾಣ ಐತಿಹ್ಯವನ್ನು ಸಹ ನೋಡಬಹುದು.

ನಂತರ ಚೋಳರಾಜನ ಕಥೆಯು ಬರುತ್ತದೆ. ಇವನು ಧರ್ಮಜ್ಞನೂ, ನೀತಿವಿಶಾರದನೂ ಆಗಿದ್ದ. ಒಮ್ಮೆ ಬೇಟೆಗೆಂದು ಕಾಡಿಗೆ ಬಂದಾಗ ಅಲ್ಲಿ ಮನ್ಮಥ ರೂಪಿಯಾದ

ಮೋಹನಾಂಗಿಗೆ ರಾಜನ ಮನಸೆಳೆಯಿತು. ರಾಜನು ಕುಲ-ಶಿಲಾದಿಗಳನ್ನು ಕೇಳಿದಾಗ ಆಕೆ ಧನಂಜಯನೆಂಬ ಪಾತಾಳ ರಾಜನ ಮಗಳೆಂದು ಹೇಳಿದಳು. ಆದರೆ ಧನಂಜಯನನ್ನು ಇನ್ನೊಂದು ಕಥೆಯಲ್ಲಿ ನಾಗರಾಜನೆಂದು ಕರೆಯಲಾಗಿದೆ. ಆದರೆ ಇತಿಹಾಸದಲ್ಲಿ ನೋಡಿದರೆ ಚೋಳರಾಜರಲ್ಲಿ ಪ್ರಮುಖ ರಾಜರುಗಳನ್ನು ಮತ್ತು ಇತರೆ ರಾಜರುಗಳನ್ನು ಇತಿವೃತ್ತ ಜೀವನವನ್ನೂ ನೋಡಿದಾಗ ಅದರಲ್ಲಿ ಯಾರೊಬ್ಬರು ಧನಂಜಯನ ಮಗಳನ್ನು ವಿವಾಹವಾಗಿರುವ ಇತಿಹಾಸ ಸಿಗುವುದಿಲ್ಲ. ಅಲ್ಲದೆ ಈ ಕಾವ್ಯದಲ್ಲಿ ಯಾವ ಚೋಳರಾಜನೂ ಸಹ ತಾನು ವಿವಾಹವಾದ ಸ್ತ್ರೀಯ ಹೆಸರನ್ನು ಉಲ್ಲೇಖ ಮಾಡಿಲ್ಲ. ಹಾಗೆ ಇವನು ವಿವಾಹವಾಗಿ ಆಕೆಯನ್ನು ಬಿಟ್ಟು ಹೋದ ನಂತರ ಅವಳಿಗೆ ಮಗುವಾಗಿ ಆ ಮಗು ತಂದೆಯನ್ನು ಹುಡುಕುತ್ತ ಹೋದ ಎಂಬ ಉಲ್ಲೇಖ ಸಿಗುತ್ತದೆ. ಆ ಮಗನ ಹೆಸರು ಸಹ ಎಲ್ಲಿಯೂ ಪ್ರಸ್ತಾಪಿಸಿಲ್ಲ. ಆದ್ದರಿಂದ ಸರಿಯಾದ ನಿಜಾಂಶವನ್ನು ಇಲ್ಲಿ ನೀಡಲು ಕಷ್ಟಸಾಧ್ಯವಾಗುತ್ತದೆ.

ಹಾಗೆಯೇ ಚಿಕ್ಕುಪಾಧ್ಯಾಯನ ಶ್ರೀರಂಗ ಮಹಾತ್ಮೆಯಲ್ಲಿ ಬೆಟ್ಟದ ಚಾಮರಾಜನು ರಾಜನಾಗಿ ಕಾರ್ಯನಿರ್ವಹಿಸಿದ ಅವನಿಗೆ ತಿಮ್ಮರಾಜ, ಕೃಷ್ಣರಾಜ ಮತ್ತು ಚಾಮರಾಜರೆಂಬ ಮೂವರು ಮಕ್ಕಳಾದರು. ಅದರಲ್ಲಿ "ತಿಮ್ಮರಾಜನಿಗೆ ಬಿರುದೆಂತೆಂಬರ ಗಂಡ"[೧೦] ಎಂಬ ಬಿರುದಿತ್ತು. ಹಾಗೆ ಅವನ ನಂತರ ಪಟ್ಟಕ್ಕೆ ಬಂದುದು ಚಾಮರಾಜ. ಇವನನ್ನು ಗುಣಶಾಲಿ ಎಂದು ಹಾಗೆ ಚಾಮುಂಡಿಯ ದರ್ಶನಕ್ಕೆಂದು ಹೋದಾಗ ಇವನ ತಲೆಯ ಮೇಲೆ ಸಿಡಿಲು ಹೊಡೆದು ಕೂದಲು ಪೂರ್ತಿ ಸುಟ್ಟು ಹೋಯಿತು. ತಲೆ ಬೋಳಾಯಿತು. ಇದರಿಂದ ಇವನಿಗೆ ಬೋಳು ಚಾಮರಾಜನೆಂಬ ಹೆಸರು ಬಂದಿರುವುದನ್ನು ಕಾವ್ಯದಲ್ಲಿ ಉಲ್ಲೇಖಿಸಲಾಗಿದೆ. ಅದೇ ರೀತಿಯಾಗಿ ಇತಿಹಾಸದ ದಾಖಲೆಗಳಲ್ಲಿ "ಚಾಮರಾಜ ಒಡೆಯರು ಕಾಲ ೧೪೨೩ ರಿಂದ ೧೪೫೮ರವರೆಗೆ ಆಳಿದರು ಎಂದಿದೆ. ಆ ನಂತರ ಅವರ ಪುತ್ರ ತಿಮ್ಮರಾಜ ಒಡೆಯರು ಪಟ್ಟಕ್ಕೆ ಬಂದರು; ಅವರು ೧೪೭೮ರವರೆಗೂ ಆಳಿದರು. ಅವರ ಮಗ ಹಿರಿಯ ಚಾಮರಾಜ ಒಡೆಯರ ಆಡಳಿತ ೧೫೧೩ರವರೆಗೂ ನೆಡೆಯಿತು. ಅವನ ಹಿರಿಯ ಮಗ ಬೆಟ್ಟದ ಚಾಮರಾಜ ಒಡೆಯರು ೧೫೫೩ರವರೆಗೂ ಆಳಿದ್ದರು. ಇವನ ಮಗ ತಿಮ್ಮರಾಜ ಒಡೆಯರು, ಅನಂತರ ಬೋಳು ಚಾಮರಾಜ ಒಡೆಯರು, ಬೆಟ್ಟದ ಚಾಮರಾಜ ಒಡೆಯರು ಕ್ರಮವಾಗಿ ಆಳ್ವಿಕೆ ಮಾಡಿದರು"[೧೧] ಎಂದು ತಿಳಿದುಬರುತ್ತದೆ. ಹಾಗೆಯೇ "ದೊಡ್ಡ ದೇವರಾಜನು ರಾಜನಾಗಿ ದಾನದಲ್ಲಿ ಕರ್ಣನಂತೆ, ಪ್ರಜಾಪಾಲನೆಯಲ್ಲಿ ಶ್ರೀರಾಮನಂತೆಯೂ, ಪರಾಕ್ರಮದಲ್ಲಿ ಸೂರ್ಯನಂತೆಯೂ,

ಭೋಗದಲ್ಲಿ ಇಂದ್ರನಂತೆಯೂ, ಸಂತಾನದಲ್ಲಿ ಸೌಭರಿಯಂತೆಯೂ ಇದ್ದನು. ಇವನು ಕುದುರೆಯನ್ನೇರಿ ಖಡ್ಗವಿದ್ಯೆಯಿಂದ ಯುದ್ಧ ಕಣವನ್ನು ಹೊಕ್ಕನೆಂದರೆ ಶತ್ರುಗಳು ಓಡಿ ಬಂದು ಶರಣಾಗುತ್ತಿದ್ದರು. ಇವನು ಅಸಾಧ್ಯ ಪರಾಕ್ರಮಿಯಾಗಿದ್ದನು. ಶ್ರೀರಾಮನಿಗೆ ಸೀತೆಯಂತೆ ಶಿವನಿಗೆ ಗಿರಿಜೆಯಂತೆ, ಬ್ರಹ್ಮನಿಗೆ ಸರಸ್ವತಿಯಂತೆ ದೊಡ್ಡದೇವರಾಜನಿಗೆ ಅಮೃತಪರದೆ ರಾಣಿಯಾಗಿದ್ದಳು. ಸೀತೆ ಲವಕುಶರನ್ನೇ ಹಡೆದಂತ ಇವಳು ಚಿಕ್ಕದೇವರಾಜ ಮತ್ತು ಕಂಠೀರವ ರಾಜರನ್ನೂ ಹಡೆದಳು. ದೊಡ್ಡದೇವರಾಜನು ಹದಿನಾಲ್ಕು ವರ್ಷ ರಾಜ್ಯಭಾರ ಮಾಡಿದನು. ಅವನ ನಂತರ ಚಿಕ್ಕದೇವರಾಜನು ಪಟ್ಟಕ್ಕೆ ಬಂದನು"[೧೨]

ಇದೇ ವಿಷಯವಸ್ತು ಶ್ರೀರಂಗ, ಪಶ್ಚಿಮರಂಗ ವೆಂಕಟಗಿರಿಯ ಮಹಾತ್ಮೆ, ಯದುಗಿರಿಯ ಮಹಾತ್ಮೆಯಲ್ಲೂ ಕಂಡುಬರುತ್ತದೆ. ಈ ಎಲ್ಲಾ ಕೃತಿಗಳಲ್ಲಿ ಮೈಸೂರು ಒಡೆಯರ ಮೂಲದ ಬಗ್ಗೆ ಚರ್ಚಿಸಲಾಗಿದೆ. ಪ್ರಸ್ತುತ ಶ್ರೀರಂಗನಾಥ ಮಹಾತ್ಮೆಯಲ್ಲಿ ಹೀಗೆ ಹೇಳಿದೆ. "ದ್ವಾರಪತಿಯು ಸಮುದ್ರದಲ್ಲಿ ಮುಳುಗುವ ವೇಳೆಯಲ್ಲಿ ಕೃಷ್ಣನು ತನ್ನ ಅನುಜಾತೆಯಾದ ಮಾಯೆಯನ್ನು ಕರೆದು ಅವಳಿಗೆ ತನ್ನ ಆದಿದೇವನಾದ ನಾರಾಯಣನನ್ನು ಯಾದವಗಿರಿಯಲ್ಲಿ ಸ್ಥಾಪಿಸುವಂತೆಯೂ, ಯುದ್ಧ ಸಂತತಿಯನ್ನೂ ಕಾಪಾಡುವಂತೆಯೂ ಹೇಳಿದನು. ಅದರಂತೆ ಮಾಯೆಯು ನಾರಾಯಣನನ್ನು ಯಾದವಗಿರಿಯಲ್ಲಿ ಸ್ಥಾಪಿಸಿ ಅನಂತರ ಮಹಿಷಾಪುರಕ್ಕೆ (ಮೈಸೂರಿಗೆ) ಬಂದು ಅಲ್ಲಿಯ ಬೆಟ್ಟದ ಚಾಮರಾಜ ಮುಂತಾದವರು ರಾಜರಾಗಿ ಆಳುತ್ತಾ ಬಂದಿದ್ದಾರೆ.[೧೩] ಆದರೆ ಇತಿಹಾಸದಲ್ಲಿಯೇ ಭಿನ್ನಾಭಿಪ್ರಾಯಗಳಿವೆ. ಮೈಸೂರುರಸರ ಮೂಲದ ಬಗ್ಗೆ ಅವರಲ್ಲಿಯೇ ನಾಲ್ಕಾರು ಅಭಿಪ್ರಾಯಗಳಿವೆ. ಅವುಗಳಲ್ಲಿ ಮುಖ್ಯವಾದುದು ಎಂದರೆ "೧೩೯೯ರ ಸಮಯದಲ್ಲಿ ಉತ್ತರ ಭಾರತದ ಕಡೆಯಿಂದ ಯದುವಂಶದ ಯದುರಾಯ, ಕೃಷ್ಣರಾಯ ಎಂಬ ಸಹೋದರರು ದಕ್ಷಿಣದ ಕಡೆಗೆ ಬಂದರು. ವಿಜಯನಗರವನ್ನು ದಾಟಿಕೊಂಡು ಮೇಲುಕೋಟೆಯ ಬಳಿಗೆ ಬಂದು, ಅಲ್ಲಿಯ ಕಾವೇರಿಯನ್ನು ದಾಟಿ ಮೈಸೂರು ಭಾಗಕ್ಕೆ ಬಂದರು. ಅಲ್ಲಿ ಆಳುತ್ತಿದ್ದ ಪಾಳೆಯಗಾರರ ವಂಶ ಕಷ್ಟಸ್ಥಿತಿಯದಾಗಿತ್ತು. ಪಾಳೆಯಗಾರನಾದ ಚಾಮರಾಜನು ಮೃತನಾಗಿ ಅವನ ಪತ್ನಿ ಮತ್ತು ಮಲಮಗಳು ಮಾರನಾಯಕ ಎಂಬುವವನ ಹಿಂಸೆಗೆ ಸಿಕ್ಕಿದ್ದರು. ಅದನ್ನು ತಿಳಿದ ಯದುರಾಯ ಕೃಷ್ಣರಾಜರು ಅವರ ಸಹಾಯಕ್ಕೆ ಮುಂದಾದರು. ತಿಮ್ಮರಸಯ್ಯ ಮತ್ತು ನಾರಾಯಣಯ್ಯ ಎಂಬುವವರೂ ಈ ಕಾರ್ಯದಲ್ಲಿ ಅವರಿಗೆ ನೆರವಾದರು. ಅವರಿಂದ ಈ ಸಹೋದರರು

ಮಾರನಾಯಕನನ್ನು ಕೊಂದರು. ಮತ್ತು ಚಾಮರಾಜರ ಮಗಳನ್ನು ಯದುರಾಯರು ಮದುವೆಯಾಗಿ ಮೈಸೂರಿನಲ್ಲಿ ಯದುವಂಶಕ್ಕೆ ಮೂಲಪುರುಷರಾದರು.[೧೪] ಎಂಬ ಮಾಹಿತಿಯು ಸಿಗುತ್ತದೆ.

ಸಾಹಿತ್ಯಿಕವಾಗಿ ಅರಸರ ಮೂಲವನ್ನು ನೋಡುವುದಾದರೆ ರಾಜಾವಳಿಯ ಕಥೆಯಲ್ಲಿ "೧೩೩೬ನೆಯ ಜಯವಂತ್ಸರಾರಭ್ಯ ಪರಾಭವಸಂವತ್ಸದವರೆಗೆ ವಿಜಯನಗರದಲ್ಲಿ ಕ್ಷಾಮ ಬರಲು ಅರಸುಗಳು ಶೆಟ್ಟಿಗಳು ಮೊದಲಾದವರು ಕರ್ನಾಟಕ ಮುಂತಾದ ದೇಶಗಳಲ್ಲಿ ನೆಲೆಸಿದರು. ಯಾದವ ವಂಶದರಸರಲ್ಲಿ ಮೂವರು ನುಗ್ಗೆಹಳ್ಳಿಯಲ್ಲಿದ್ದವರು. ಕಿರಿಯ ವಿಜಯರಾಜರು ಮಹಿಸೂರ ಕುಂಭಕಾರಕೊಪ್ಪಿಲೊಳಿರ್ದು ಮನೆ ಮಾಡಿ ತೋಟ ಗದ್ದೆಗಳನ್ನು ಮಾಡಿಕೊಂಡಿದ್ದನು. ಆತನ ರೂಪವತಿಯಾದ ಕುಲಾಲಸ್ತ್ರೀಯನ್ನು ಮದುವೆಯಾಗಿ ಒಬ್ಬ ಮಗಳನ್ನು ಪಡೆದನು. ವಿಜಯರಾಜನು ತೀರಿಕೊಳ್ಳಲು ಆತನ ಮಗಳನ್ನು ಪ್ರಬಲರಾದ ತೊರೆಯರು ಮದುವೆ ಮಾಡಿಕೊಳ್ಳಲು ಯತ್ನಿಸಿದರು. ಅಷ್ಟರಲ್ಲಿ ಯದುವಂಶದ ವಿಷ್ಣುವರ್ಧನನ ಸಂತತಿಯವರಾದ ದೇವರಾಜ, ತಿಮ್ಮರಾಜ, ಶಾಂತರಾಜರು ಬಂದು ಇದನ್ನು ತಿಳಿದು ಉಪಾಯದಿಂದ ತೊರೆಯರನ್ನು ಸಂಹರಿಸಿ ತಾವೇ ಪ್ರಭುಗಳಾದರು. ದೇವರಾಜನು ಮಹಿಸೂರಿಗೆ ಸೇರಿದ ಕೆಲವು ಗ್ರಾಮಗಳನ್ನು ಸ್ವಾಧೀನ ಮಾಡಿಕೊಂಡು ಹುಲ್ಲನಹಳ್ಳಿಯ ರಾಜಪುತ್ರಿ ಕೃಷ್ಣಾಜಮ್ಮಣ್ಣಿಯನ್ನು ಮದುವೆಯಾದನು. ಕೆಲವು ದಿನಗಳಲ್ಲಿ ಅತಿ ಪ್ರಬಲವಾದ ಮಾರನಾಯಕನೆಂಬುವನು ದೇವರಾಜನನ್ನು ಕೊಂದನು. ಗರ್ಭವತಿಯಾಗಿದ್ದ ಆತನ ಪತ್ನಿಯನ್ನು ಪದುಮಣ್ಣನೆಂಬುವವನು ತವರು ಮನೆಯನ್ನು ಸೇರಿಸಿದನು. ಅಲ್ಲಿ ಆಕೆ ಗಂಡು ಮಗುವನ್ನು ಹಡೆದಳು. ಹೀಗೆ ಹುಟ್ಟಿದ ರಾಜ ಒಡೆಯನು ಬಾಲಕನಾಗಿದ್ದಾಗಲೇ ಪದುಮಣ್ಣಯ್ಯನು ಇತರರ ನೆರವನ್ನು ಪಡೆದು ಮಾರನಾಯಕನನ್ನು ಸಂಹರಿಸಿದನು. ರಾಜ ಒಡೆಯರ ಮಗ ಚಾಮರಾಜ ಒಡೆಯರು ದನಿಗನಹಳ್ಳಿಯಲ್ಲಿ ನೆಲೆನಿಂತರು. ರಾಜ ಒಡೆಯರು ಶ್ರೀರಂಗಪಟ್ಟಣಕ್ಕೆ ಅಧೀನರಾಗಿದ್ದು ಕಾಲಂಗಾಣಲು ರಾಮರಾಯನೆಂಬುವನು ಪಟ್ಟಣವನ್ನು ಕೈವಶ ಮಾಡಿಕೊಂಡಿದ್ದನು. ಮೈಸೂರಲ್ಲಿ ಹಿರಿಯ ಆರುವೆರಳ ಚಾಮರಸರು ಬೆಳುಗೆರೆಯ ಪದ್ಮಮ್ಮಜನನ್ನು ಮದುವೆಯಾಗಿ ಚಾಮರಸ ಒಡೆಯರು ಹುಟ್ಟಿದರು. ಮುಂದೆ ತಿಮ್ಮರಾಜ, ಕೃಷ್ಣರಾಜ, ಚೋಳ ಚಾಮರಾಜ ಮೊದಲಾದವರು ಆಳಿದರು"[೧೫] ಎಂಬ ಮಾಹಿತಿಯು ದೊರೆಯುತ್ತದೆ.

ಹಾಗೆಯೇ ಮೈಸೂರು ರಾಜವಂಶದ ಮೂಲವನ್ನು ಶಾಸನಗಳು ನಿರೂಪಿಸುವ ರೀತಿ ಬೇರೆಯಾಗಿದೆ. ಮೈಸೂರು ಒಡೆಯರು ಚಂದ್ರವಂಶೀಯರೆಂದು ಶಾಸನಗಳಿಂದ

ತಿಳಿದುಬರುತ್ತದೆ. ಶಾಸನಗಳೂ ಕಾವ್ಯ ಮತ್ತು ಪುರಾಣಗಳನ್ನೇ ಅನುಸರಿಸಿದೆ. ಶ್ರೀಕೃಷ್ಣನ ಕೆಲವರು ರಾಜಕುಮಾರರು ಶಾಧಿಯವಾಡದ ದ್ವಾರಕೆಯಿಂದ ವಿಹಾರಾರ್ಥವಾಗಿಯೇ ಅಥವಾ ಮೇಲುಕೋಟೆಯಲ್ಲಿ ತಮ್ಮ ಕುಲದೇವರಾದ ನಾರಾಯಣನ ದರ್ಶನಾರ್ಥವಾಗಿಯೋ ಕರ್ನಾಟಕಕ್ಕೆ ಬಂದು, ಅಲ್ಲಿಯ ನಿಸರ್ಗ ಸೌಂದರ್ಯದಿಂದ ಆಕರ್ಷರಾಗಿ, ಮಹಿಷಾಪುರದಲ್ಲಿ ನೆಲೆಸಿ, ಈಗಿನ ಮೈಸೂರು ರಾಜವಂಶದ ಮೂಲಪುರುಷರಾದರೆಂದು ಶಾಸನಗಳಿಂದ ತಿಳಿದುಬರುತ್ತದೆ.

ಈ ಎಲ್ಲಾ ಆಧಾರಗಳಿಂದ ಮೈಸೂರು ಒಡೆಯರ ಮೂಲವನ್ನು ಕ್ವಚಿತ್ ಆಗಿ ಹೇಳಲಾಗದು. ಏಕೆಂದರೆ ಒಂದೊಂದು ಅಭಿಪ್ರಾಯವೂ ಮತ್ತೊಂದಕ್ಕಿಂತ ಭಿನ್ನವಾಗಿದೆ. ಒಟ್ಟಿನಲ್ಲಿ ಈ ಅರಸರು "ಐತಿಹ್ಯದ ಪ್ರಕಾರ ಚಂದ್ರಲೋಕದಿಂದ ಭೂಲೋಕಕ್ಕೆ ಇಳಿದು ಬಂದಿರಲಿ ಅಥವಾ ದ್ವಾರಾವಸಿ-ಯಾದವಗಿರಿ ಅಥವಾ ಮೇಲುಕೋಟೆಯ ಮೂಲಕ ಮೈಸೂರಿಗೆ ನಡೆದು ಬಂದಿರಲಿ; ಚರಿತ್ರೆಯ ಪ್ರಕಾರದಿಂದಲ್ಲಂತೂ ಅವರು ಮೈಸೂರು ದಕ್ಷಿಣದ ಅಥವಾ ಅದರ ಸುತ್ತಮುತ್ತಲ ಹಳ್ಳಿಯೊಂದರ ಸ್ಥಳೀಯರೇ ಹೊರತು ಹೊರಗೆಲ್ಲಿನಿಂದಲೂ ಬಂದವರಲ್ಲವೆನಿಸುವುದು"[೧೬] ಎನ್ನುವ ಡಾ.ಎಲ್.ಬಸವರಾಜು ಅವರ ಮಾತನ್ನು ಇಲ್ಲಿ ಒಪ್ಪಬೇಕಾಗುತ್ತದೆ.

ಮೈಸೂರು ಅರಸರ ಕಾಲಘಟ್ಟದಲ್ಲೇ ಬಂದ ಇತರೆ ಕೃತಿಗಳನ್ನು ಚಾರಿತ್ರಿಕವಾಗಿ ನೋಡಬಹುದು.

### ೪.೨ ಸ್ಥಳ ಚರಿತ್ರೆ

ಕಕುದ್ಗಿರಿ ಮಹಾತ್ಮ್ಯೆ ಅಥವಾ ಶಿವಗಂಗೆ ಮಹಾತ್ಮ್ಯೆ ಇದೊಂದು ಸ್ಥಳ ಚರಿತ್ರೆ ಕೃತಿಯಾಗಿದ್ದು, ಈ ಕೃತಿಯ ಕತೃವಿನ ಬಗ್ಗೆ ಕರ್ನಾಟಕ ಕವಿ ಚರಿತ್ರೆಯಲ್ಲಿ ಕಳಲೆ ನಂಜರಾಜನನ್ನು ಕುರಿತು "ಮೈಸೂರು ರಾಜರ ಸೇನಾಪತಿಗಳ ವಂಶಕ್ಕೆ ಸೇರಿದವನು ಭಾರದ್ವಜಗೋತ್ರದನು ಋಗ್ವೇದಿ" ಎಂಬ ಮಾಹಿತಿ ಸಿಗುತ್ತದೆ. ತನ್ನ ವಂಶ ಪರಂಪರೆಯನ್ನು ಹೇಳುತ್ತಾ ಅದರಲ್ಲಿ 'ತಿಮ್ಮನರೇಂದ್ರನು' ಕಳಲೆ ಕುಲದಲ್ಲಿ ಪ್ರಸಿದ್ಧನಾಗಿದ್ದನು. ಇವನ ಮಗ ಕಾಂತರಾಜ. ಇವನ ಮಗ ಕಳಲೆ ದೊಡ್ಡರಾಜ. ಇವನು ಯುದ್ಧದಲ್ಲಿ ಶತ್ರುಗಳ ಸೊಕ್ಕನ್ನು ಮುರಿದು ಮರಾಠರಾಯರ ನೊಕ್ಕಲಿಕ್ಕೆ ಅನ್ಯರಿಗೆ ದಕ್ಕಲರಿಯದ ಕಪಿ ಪತಾಕೆಯನ್ನೂ ಸಿಂಹಲಲಾಟ ಪಲ್ಲಕ್ಕಿಯನ್ನು ಪಡೆದು ಅಸಮವೀರನೆನಿಸಿದನು. ಮರಾಠ ಜಯಘಾಟಿ ಮೊದಲಾದವರನ್ನು ರೂಧಾಪಿಯಿಂದ ಅಡ್ಡಹಾಯ್ದು ತಾನೇ ಖಡ್ಗದಲ್ಲಿ ಕಡಿದನು. ಇವನ ಮಗ ವೀರರಾಜ (೧೭೫೦ ಇವನ ಮಕ್ಕಳು ದೇವರಾಜ ನಂಜರಾಜರು

ಈ ದೇವರಾಜನನ್ನು ಕೆಣಕಿ ಮಾಗಡಿಯ ಭೂವರನು ನಿಜದುರ್ಗ ರಾಷ್ಟ್ರವನ್ನು ನೀಗಿಕೊಂಡನು. ಈ ದೇವರಾಜನ ತಮ್ಮನೇ ಕವಿ ನಂಜರಾಜ"[೧೭] ನೆಂದು ಕವಿಚರಿತೆಯಲ್ಲಿ ಮತ್ತು ಕಾವ್ಯದಲ್ಲೂ ಸಿಗುತ್ತದೆ.)

"ಇವನಿಗೆ ಗರಳಪುರಾಧಿನಾಥ ಚರಣಾರವಿಂದ ಸೇವಾಸಮಾಸಾಧಿತ ಗೀರ್ವಾಣಾಂಧ್ರ ಕರ್ನಾಟಕಾದಿ ನಾನಾ ಭಾಷಾ ವಿಶೇಷ ಕಾವ್ಯ ರಚನಾಚಾತುರೀ, ಧುರೀಣೆ, ದಾನಕ್ಷಾತ್ರಾರ್ಥಿಶ್ವರ ಹಾಗೂ ಮದ್ವಜ ಬಿರುದಾಂಕಿತ ಎಂಬ ವಿಶೇಷಣಗಳು ಇವೆ. ಅಲ್ಲದೆ ಈತನು ಕವಿಗಳಿಗೆ ಪೋಷಕನಾಗಿ ನೂತನ 'ಭೋಜರಾಜನೆಂಬ' ಬಿರುದನ್ನು ಪಡೆದಿದ್ದಂತೆಯೂ; ಸಂಗೀತ ಗಂಗಾಧರವೇ ಮೊದಲಾದ ಸಂಸ್ಕೃತ ಗ್ರಂಥಗಳನ್ನು ಬರೆದಂತೆಯೂ ಇವನ ಆಶ್ರಿತನಾದ ನೃಸಿಂಹ ಕವಿಯ 'ಚಂದ್ರಕಲಾ ಪರಿಣಯ' ಎಂಬ ನಾಟಕದಿಂದ ತಿಳಿಯುತ್ತದೆ"[೧೮] ಎಂದು ಕಕುದ್ಗಿರಿ ಮಹಾತ್ಮೆಯಲ್ಲಿ ಉಲ್ಲೇಖವಾಗಿದೆ.

ನಂತರದಲ್ಲಿ ತನ್ನ ತಂದೆ ವೀರರಾಜ 'ವೈದ್ಯಸಂಹಿತಾ ಸಾರುವರ್ಣ'ದ ಕರ್ತೃ ಎಂದು ಚಿಕ್ಕದೇವರಾಜರಲ್ಲಿ ೧೮೨೨-೧೭೦೪ ದಳವಾಯಿಯಾಗಿದ್ದ ದೊಡ್ಡೇಂದ್ರನು ಮಹಾನ್ ಕೀರ್ತಿವಂತನೆಂದು ಹೊಗಳಿದ್ದಾನೆ. ತನ್ನನ್ನು ತಾನು 'ವೀರರಾಜ ಭೂಪಾಲಂ' ಎಂದು ಈತನು ದಳವಾಯಿಯಾಗಿ ಕವಿಯಾಗಿ ಪ್ರಸಿದ್ಧನಾದವನು ಎಂದು ತಿಳಿದು ಬರುತ್ತದೆ. ಹಾಗೆ ಇವನ ತಂದೆಗೆ ಮೂರು ಜನ ಪತ್ನಿಯರು. ನಂಜರಾಜನ ತಾಯಿ ತಾರುಗಹಳ್ಳಿ ಚೆನ್ನಾಜಮ್ಮಣ್ಣಿ, ನಂಜರಾಜನಿಗೆ ನಾಲ್ಕು ಮಂದಿ ಪತ್ನಿಯರು. ಡೆಂಕಣಿಕೋಟೆ ಅಮ್ಮಣ್ಣಿಯವರ ಮಗಳು ಚೆನ್ನಾಮ್ಮಣ್ಣಿಯನ್ನು ಜನಿಸಿದ ಪುಟ್ಟಮ್ಮಣ್ಣಿಯನ್ನು ಇಮ್ಮಡಿ ಕೃಷ್ಣರಾಜರಿಗೆ ಕೊಟ್ಟು ವಿವಾಹ ಮಾಡಲಾಯಿತು. ಆದರೆ ಕವಿ ಚರಿತೆಯಲ್ಲಿ ಮೈಸೂರು ಸೇನಾಪತಿಗಳ ವಂಶಕ್ಕೆ ಸೇರಿದವನು ಹಾಗೆ "ನಂಜರಾಜನು ಮೈಸೂರು ದೊರೆಯಾದ ಇಮ್ಮಡಿ ಕೃಷ್ಣರಾಜನ (೧೭೩೪-೧೭೬೬) ಸೇನಾಪತಿಯಾಗಿಯೂ, ಮಂತ್ರಿಯಾಗಿಯೂ ಇದ್ದನು. ಇವನಿಗೆ 'ಕರಾಚುರಿ ನಂಜರಾಜ' ಎಂಬ ಹೆಸರೂ ಇದ್ದಂತೆ ತಿಳಿಯುತ್ತದೆ. ಇವನ ಕಾಲವು ಸುಮಾರು ೧೭೪೦ ಆಗಬಹುದು"[೧೯] ಎಂದು ಕವಿಚರಿತೆಕಾರರು ಅಭಿಪ್ರಾಯಪಡುತ್ತಾರೆ.

ಕಾವ್ಯದಲ್ಲಿ ತನ್ನ ಮೂಲ ಮತ್ತು ತಂದೆ ವೀರರಾಜನೆಂದು ಹೇಳಿರುವಂತೆ ಕವಿಚರಿತೆಯಲ್ಲಿಯೂ ಕೂಡಾ ಉಲ್ಲೇಖವಿದೆ. "ವಿನರಾಜ ೧೭೨೦ ಈತನು ವೈದ್ಯಸಂಹಿತಾ ಸಾರಾರ್ಣವವನ್ನು ಬರೆದಿದ್ದಾನೆ. ಇವನು ಕಳಲೆ ರಾಜರಲ್ಲಿ ಒಬ್ಬನು. ಇವನ ಪಿತಾಮಹನು ಕಾಂತಯ್ಯ; ತಂದೆ ಮೈಸೂರು ರಾಜನಾದ ಚಿಕ್ಕದೇವರಾಜನಲ್ಲಿ (೧೯೭೨-೧೭೦೪) ದಳವಾಯಿಯಾಗಿದ್ದ ಇವನೇ ದೊಡ್ಡೇಂದ್ರನು"[೨೦] ಇವನು 'ವೈದ್ಯ ಸಂಹಿತಾ ಸಾರಾರ್ಣವ' ಎಂಬ ಕೃತಿಯನ್ನು ರಚಿಸಿದನೆಂದು ತಿಳಿದುಬರುತ್ತದೆ.

ಕಳಲೆ ನಂಜರಾಜನು ಅನೇಕ ಕೃತಿಗಳನ್ನು ಬರೆದನು. ಈ ಯಾವ ಕೃತಿಗಳು ಸಹ ಪ್ರಕಟವಾಗಿಲ್ಲ. ಕನ್ನಡ ಅಧ್ಯಯನದ ಸಂಸ್ಥೆಯಿಂದ ಹಲವು ಮಹಾತ್ಮ್ಯೆಗಳನ್ನು ಪ್ರಕಟಿಸಲಾಗಿದೆ. ಅದರಲ್ಲಿ ನಂಜರಾಜನ ಶಿವಗಂಗೆ ಮಹಾತ್ಮ್ಯೆಯು ಒಂದಾಗಿದೆ. ಇದು ದಕ್ಷಿಣದ ಕಾಶಿ ಎಂದು ಪ್ರಸಿದ್ಧವಾಗಿದೆ. ಗಂಗಾಧರೇಶ್ವರ ಪಾರ್ವತಿದೇವಿಯರು ನೆಲೆಸಿದ್ದರಿಂದ, ನಂಜರಾಜ ಅಪಾರ ಭಕ್ತಿಯಿಂದ ಈ ಕ್ಷೇತ್ರ ಮಹಿಮೆ ಹೇಳಿದ್ದನೆಂದು ತಿಳಿದುಬರುತ್ತದೆ. ಹಾಗೆ ಇಲ್ಲಿನ ದೇವಾಲಯಗಳು ಗುಹಾಂತ ದೇವಾಲಯಗಳಾಗಿರುವುದು. ಆ ಗಿರಿಯ ಪ್ರಾಚೀನತೆಯ ಕುರುಹಾಗಿರುವುದಲ್ಲದೆ ಚರಿತ್ರೆ ಪುರಾಣಗಳಲ್ಲಿಯೂ ಸಹ ಇದರ ಮಹಿಮೆಗೆ ಸಂಬಂಧಿಸಿದ ಅನೇಕ ಸಂಗತಿಗಳು ದೊರಕುತ್ತವೆ. ಆದ್ದರಿಂದಲೇ ಆತನ ಮನೋಭಾವಕ್ಕೆ ಸಹಜವಾಗಿ ಈ ಕ್ಷೇತ್ರದ ಮಹಿಮೆಯನ್ನು ವಿಸ್ತರಿಸುವುದು ಸಹಜವಾದುದಾಗಿದೆ. ಈ ಎಲ್ಲಾ ಕಾರಣಗಳಲ್ಲದೆ ಅವನಲ್ಲಿರುವ ಅಪಾರ ಭಕ್ತಿಯೇ ಮುಖ್ಯ ಕಾರಣವಾಗಿ ಈ ಕೃತಿ ರಚಿತವಾಗಿದೆ ಎಂದು ಕಾವ್ಯದಿಂದ ತಿಳಿದುಬರುತ್ತದೆ.

ಗೋವಿಂದ ಕವಿಯ ನಂದಿಮಹಾತ್ಮ್ಯಂ ಇದೊಂದು ವರ್ಣನಾತ್ಮಕ ಕಾವ್ಯವಾದರೂ ಈ ಕ್ಷೇತ್ರ ಹಲವಾರು ರಾಜರ ಆಳ್ವಿಕೆಗೆ ಒಳಪಟ್ಟಿರುವುದು ಇತಹಾಸದಿಂದ ತಿಳಿದುಬರುತ್ತದೆ. ಹಾಗೆ ಕವಿಯ ಬಗ್ಗೆ ನೋಡುವುದಾದರೆ ಇವನು ವಿಶ್ವಮಿತ್ರಾ ಗೋತ್ರದವನು. ಇವನಿಗೆ ಗೋಪಾಲ–ಗೋವಿಂದ ಎಂಬ ಹೆಸರೂ ಉಂಟು. ಇವನು ಭೀಮರಥಿ ತೀರದಲ್ಲಿರುವ ಖೇದ ಬುಯ್ಯರದವನು. ಅಲ್ಲಿನ ಕರಣಿಕ ಜ್ಯೋತಿಯು ಈತನ ತಂದೆ. ಇವನು ಕಾವ್ಯವನ್ನು ಮದನ ಗೋಪಾಲನ ಕರುಣದಿಂದ ಕಾವ್ಯ ರಚಿಸಿದನೆಂದು ಕಾವ್ಯದಲ್ಲಿ ತಿಳಿದುಬರುತ್ತದೆ. ಹಾಗೆ ಕೇಸಣ್ಣ ಜಹಾಗೀರದಾರ ಭೂಯಾರ ಅವರು ವಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಭೂಯಾರದ ಗೋಪಕವಿಯ ವಂಶಕ್ಕೆ ಸೇರಿದ ಕರಣಿಕ ಮನೆತನದವನು ಎಂದು ತಿಳಿದುಬರುತ್ತದೆ. ಆದರೆ ಕವಿ ಚರಿತೆಯಲ್ಲಿ ಈತನ ಬಗ್ಗೆ ಕಾವ್ಯದಲ್ಲಿ ಹೇಳಿರುವಂತೆಯೇ ಮಾಹಿತಿ ಸಿಗುತ್ತದೆ. ಹಾಗೆ "ಪೂರ್ವ ಕವಿಗಳಲ್ಲಿ ಕುಮಾರವ್ಯಾಸ (ಶುಕರೂಪ ಸು.೧೪೩೦) ಸ್ತುತಿಸಿರುವುದರಿಂದ ಅವನಿಗಿಂತ ಈಚೆಯವನೆಂಬುದು ವ್ಯಕ್ತವಾಗಿದೆ. ಸುಮಾರು ೧೯೫೦ ಇದ್ದಿರಬಹುದೆಂದು ಊಹಿಸುತ್ತದೆ"[೨೧] ಎಂದು ಕವಿ ಚರಿತೆಕಾರರು ಹೇಳಿದ್ದಾರೆ. ಅಲ್ಲದೆ ಕೇಸಣ್ಣ ಜಹಾಗೀರದಾರ, ಭೂಯಾರ ಅವರು ನಂದಿಮಹಾತ್ಮ್ಯೆ ೧–೧೪ ಮತ್ತು ೧೫ನೆಯ ಪದ್ಯಗಳ ಆಧಾರದ ಮೇಲೆ ಕುಮಾರವ್ಯಾಸ, ಚತುರಾಸ್ಯ, ಬೊಮ್ಮರಸ, ಕರಸ್ಥಲನಾಗಲಿಂಗನ ಚರಿತ್ರೆಯನ್ನು ಬರೆದ ರುದ್ರ, ಲಕ್ಷ್ಮೀಶರನ್ನು ಕವಿ ಸ್ತುತಿಸಿದ್ದಾನೆ ಎಂದು ಊಹಿಸಿರುವುದಲ್ಲದೆ ಗೋಪಕವಿಯು

ರಾಜಶೇಖರ ವಿಳಾಸವನ್ನು ಚೆನ್ನಾಗಿ ಓದಿಕೊಂಡಿರುವನೆಂದು ಷಡಕ್ಷರಿಗಿಂತ ಈಚಿನವನೆಂದೂ, ತಾವು ೧೬೭೯ರಲ್ಲಿ ಸಂದರ್ಶಿಸಿದ ಗೋವಿಂದ ಕವಿಯ ವಂಶಜನಾದ ಕರುಣಿಕನು ಗೋಪಕವಿಗಿಂತ ಈಚಿನ ೧೨ನೆಯ ತಲೆಯವನೆಂದು ತಿಳಿದುಬರುವುದರಿಂದ ಸುಮಾರು ೧೬೫೦ ರಿಂದ ೧೭೦೦ರ ಮಧ್ಯ ಕಾಲವು ಸೂಚಿತವಾಗುತ್ತದೆ ಎಂದಿದ್ದಾರೆ. ಅಲ್ಲದೆ ಭುಯ್ಯಾರ, ಅಗರಖೇಡ ಮುಂತಾದ ಕೆಲವು ಹಳ್ಳಿಗಳು ಸುಮಾರು ೨೦೦ ವರ್ಷಗಳಿಂದ ವೈಷ್ಣವ ಆದ್ಯ ಆಚಾರ್ಯರಿಗೆ ದತ್ತಿಗಳಾಗಿ ಬಂದಿದ್ದದರಿಂದಲೂ, ಆಗಿನಿಂದ ನಡೆದುಬಂದ ಕರಣಿಕ ವಂಶವು ೧೭ನೇ ಶತಮಾನದ ಅಂತ್ಯ ಅಥವಾ ೧೮ರ ಆದಿಯಲ್ಲಿ ಆರಂಭವಾಗಿರಬೇಕು. ಅಂತೂ ಮಥಿಥಾರ್ಥವೇನೆಂದರೆ, ಸುಮಾರು ೧೬೫೦ ಎನ್ನುವುದಕ್ಕಿಂತ ೧೭೦೦ ಅಥವಾ ೧೭೨೫ ಎನ್ನುವುದರಿಂದ ಗೋವಿಂದನ ಕಾಲವು ಲಕ್ಷ್ಮೀಶ, ಷಡಕ್ಷರರ ಸಮಕಾಲದಲ್ಲಾಗಲಿ ಅನಂತರವಾಗಲಿ ನಿಂತು 'ಸುಮಾರು' ಆದರೂ ಸಮಂಜಸವಾಗುತ್ತದೆ ಎಂದು ಸಂಪಾದಕರು ಅಭಿಪ್ರಾಯಪಟ್ಟಿದ್ದಾರೆ.

ಆದರೆ "ಎಸ್.ಬಿ.ನರಸಿಂಹಾಚಾರ್ ಮತ್ತು ಎಂ.ಎ.ರಾಮಾನುಜೈಂಗಾರ್ ಅವರು ತಾವು ಪ್ರಕಟಿಸಿರುವ ನಂದಿಮಹಾತ್ಮೆಯ (೧೨ ಸಂಧಿಗಳು) ಪೀಠಿಕೆಯಲ್ಲಿ ಗೋಪಕವಿಯ ಕಾಲವನ್ನು ಕುರಿತು 'ಗ್ರಂಥ ಶೈಲಿಯು ಲಕ್ಷ್ಮೀಶನ ಜೈಮಿನಿಭಾರತ (ಸಂ. ೧೭ನೇ ಶತಮಾನ) ಶೈಲಿಯ ಛಾಯೆಯಾಗಿರುವುದರಿಂದಲೂ, ಅಭಿಪ್ರಾಯವೂ ಆದರಿಂದ ತೆಗೆದಂತೆ ಇರುವುದರಿಂದಲೂ (ಸಂಧಿ ೧-೧೧-೧೩-೨೮೨೭-೪-೫-೭ ಇತ್ಯಾದಿ) ಕವಿಯು ಆ ಜೈಮಿನಿಯನ್ನು ನೋಡಿಯೇ ಈ ಗ್ರಂಥವನ್ನು ಬರೆದಿರಬಹುದೆಂದು ತೋರುತ್ತದೆ. ಅಲ್ಲದೆ ಈ ಗ್ರಂಥಕರ್ತನ ಹೆಸರನ್ನು ಈಚಿನ ಕವಿಗಳಾರೂ ಹೇಳಿಲ್ಲ. ಈ ಕಾರಣಗಳಿಂದಲೂ ಮತ್ತು ಈ ಗ್ರಂಥದ ಮೂಲ ಪ್ರತಿಯು ಮದ್ರಾಸ್ ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿ ಭಂಢಾರದಲ್ಲಿ ಸಿಕ್ಕಿದುದರಿಂದಲೂ ಈ ಕವಿಯು ಹದಿನೇಳನೆಯ ಶತಮಾನದ ಅಂತ್ಯಭಾಗದಲ್ಲಿ ಇದ್ದನೆಂದು ವ್ಯಕ್ತವಾಗುತ್ತದೆ"[೨] ಎಂದಿದ್ದಾರೆ.

ಡಿ.ಎಲ್.ನರಸಿಂಹಾಚಾರ್ ಅವರು ಪೀಠಿಕಾ ಸಂಧಿ ಷಷ್ಪಿ ೧೫ಕ್ಕೆ ಹೀಗೆ ಅರ್ಥೈಸುತ್ತಾರೆ. "ಮೇಲಿನ ಕವಿಗಳಲ್ಲಿ ಚತುರಾಸ್ಯನು ಚತುರಾಸ್ಯ ನಿಂಘಟು"ವಿನ ಕರ್ತನಾಗಿರಬಹುದು; ರುದ್ರನು ರುದುಭಟ್ಟ; ಲಕ್ಷ್ಮೀಪತಿಯು ಲಕ್ಷ್ಮೀಶ; ಅಸಿಂತನೆಂಬುವನು ಯಾರೋ ತಿಳಿಯದು. ಈ ಕವಿಗಳೆಲ್ಲರೂ ಬ್ರಾಹ್ಮಣರಿರಬೇಕಂದು ತೋರುತ್ತದೆ ಎಂದು ಊಹಿಸಿದ್ದಾರೆ. ಮುಂದುವರೆದು ಗೋವಿಂದ ಕವಿಯ ಆಶ್ರಯದಾತ ಇಮ್ಮಡಿ ಹಾವಳೀಂದ್ರ ಎಂದು ಗುರುತಿಸಿ, ಈ ಇಮ್ಮಡಿ ಹಾವಳೀಂದ್ರ ಭೈರನು ಆವತಿಯ ನಾಡಪ್ರಭು. ಇವನ

ಎರಡು ಶಾಸನಗಳು ದೊರೆಯುತ್ತವೆ ಎಂದಿದ್ದಾರೆ. ಮೊದಲನೆಯದು ೧೫೯೮ ಬರೆದದ್ದು, ೨ನೆಯವ ೧೯೧೨ರಲ್ಲಿ ಬರೆದದ್ದು ಆದುದರಿಂದ ಇವನ ಆಶ್ರಯವನ್ನು ಪಡೆದಿದ್ದ ಗೋವಿಂದ ಕವಿಯ ಕಾಲವು ಸುಮಾರು ೧೬೦೦ ಎಂದು ದೃಢವಾಗಿ ಹೇಳಬಹುದು ಎಂದಿದ್ದಾರೆ."[೨೩]

ನಂತರ ದ.ರಾ.ಬೇಂದ್ರೆಯವರು ಗೋಪಕವಿಯ ಕಾಲವನ್ನು ಚಿತ್ರಭಾರತದ ೩೦-೧೬ ಪದ್ಯದ ಆಧಾರದ ಮೇಲೆ "ಈ ವಿಷ್ಣು ಸಂವತ್ಸರವು ಕ್ರಿ.ಶ. ೧೫೮೧ಕ್ಕೆ ಸರಿ ಹೋಗುವುದು. ಪಿಳ್ಳೆಯವರ ಪಂಚಾಂಗದಿಂದ ವಿಷ್ಣು, ಮಾರ್ಗಶಿರ, ಶುದ್ಧ ಪಂಚಮಿ ಶ್ರವಣ ನಕ್ಷತ್ರದ ದಿನ 'ಗುರುವಾರ'ವೆಂದು ಇದೆ. ಇಲ್ಲಿ ವಿಧುವಾರ ಎಂದರೆ ಬುಧುವಾರವೆಂದು ಇದೆ. ಇಷ್ಟಭೇದ ಇದು ಗಣ್ಯವಲ್ಲ"[೨೪] ಎಂದಿದ್ದಾರೆ. ಇವೆಲ್ಲಾ ಆಧಾರಗಳಿಂದ ಡಿ.ಎಲ್.ನರಸಿಂಹಾಚಾರ್ ಅವರು ನೀಡುವ ಶಾಸನಗಳ ಆಧಾರದಿಂದ ಮತ್ತು ದ.ರಾ.ಬೇಂದ್ರೆಯವರು ನೀಡುವ ಚಿತ್ರಭಾರತದ ರಚನಾಕಾಲ ೧೫೮೧ ಎನ್ನುವ ಆಧಾರದಿಂದ ಗೋಪಕವಿಯ ಕಾಲ ಸುಮಾರು ೧೫೬೦ ರಿಂದ ೧೬೨೦ರವರೆಗೆ ಜೀವಿಸಿರಬಹುದೆಂದು ಸಂಪಾದಕರು ಊಹಿಸಿದ್ದಾರೆ.

ಹಾಗೆಯೇ ಎಸ್.ಬಿ.ನರಸಿಂಹಾಚಾರ್ ಮತ್ತು ಮಾ.ಆ.ರಾಮಾನುಜೈಯಂಗಾರ್ ಅವರು ಈ ಖೇಡಬುಯ್ಯರವು "ಭೀಮ ರಥಿ ಲೇಕ" ಎಂಬುದರಿಂದ ಒಂದು ವೇಳೆ ಪೋಲಾಪುರದ ಜಿಲ್ಲೆಯೇ ಈತನ ದೇಶವಾಗಿರಬಹುದು. "ಬುಯ್ಯರವೆಂಬುವುದು ಆ ಜಿಲ್ಲೆಯಲ್ಲಿ ಪ್ರಸಿದ್ಧವಾದ ಈಗಿನ ಬಾರ್ಸಿ ಎಂಬ ಗ್ರಾಮವಾಗಿ ಇದ್ದರೂ ಇರಬಹುದು."[೨೫] ಎಂದು ಊಹಿಸಿದ್ದಾರೆ. ಹಾಗೆ ಎಸ್.ಜಿ.ನರಸಿಂಹಾಚಾರ್ ಮತ್ತು ಮಂ.ಆ. ರಾಮಾನುಜೈಂಗಾರ್ ಇವನ ಆರಾಧ್ಯ ದೈವವನ್ನು ಕುರಿತಂತೆ "ಆ ಜಿಲ್ಲೆ(ಘೋಲಾಪುರ)ಯಲ್ಲಿರುವ ಪ್ರಸಿದ್ಧವಾದ ಪಾಂಡುರಂಗನೇ ಈತನಿಗೆ ಪ್ರಸನ್ನವಾದ ಶ್ರೀಪಾದನ ಗೋಪಾಲನಾಗಿದ್ದರೂ ಇರಬಹುದು"[೨೬] ಎಂದಿದ್ದಾರೆ. ಆದರೆ ಇಲ್ಲಿನ ವಿದ್ವಾಂಸರುಗಳ ಪ್ರಕಾರ ಬರೀ ಊಹೆಗಳಿಂದ ಇವನ ಕಾಲವನ್ನು ನಿರ್ಧರಿಸಲಾಗುವುದಿಲ್ಲ. ಆದರೆ ಗೋಪಕವಿಯು ಆವತಿನಾಡ ಪ್ರಭುಗಳ ಆಶ್ರಯದಲ್ಲಿದ್ದವನು. ಇಮ್ಮಡಿ ಹಾವಳಿ ಭೈರೇಂದ್ರನ ಆಶಯದಂತೆ 'ನಂದಿ ಮಹಾತ್ಮೈ'ಯನ್ನು ಬರೆದುದಾಗಿ ಕಾವ್ಯದಲ್ಲಿ ಹೇಳಿಕೊಂಡಿದ್ದಾನೆ. ಇಮ್ಮಡಿ ಹಾವಳಿ ಭೈರೇಗೌಡನ ರಾಜಧಾನಿಯಾದ ದೊಡ್ಡಬಳ್ಳಾಪುರದಲ್ಲಿ ಆದಿನಾರಾಯಣ ಮತ್ತು ವೇಣುಗೋಪಾಲಸ್ವಾಮಿ ದೇವಸ್ಥಾನಗಳಿವೆ. ದೇವನಹಳ್ಳಿಯಲ್ಲಿ ಕೂಡ ವೇಣುಗೋಪಾಲಸ್ವಾಮಿಯ ದೇವಸ್ಥಾನವಿದೆ. ಆದರೆ ಆವತಿನಾಡ ಪ್ರಭುಗಳ ವಂಶಸ್ಥನಾದ ಗೋಪಾಲಗೌಡನು ಹಾಕಿಸಿರುವ ಶಾಸನಗಳಲ್ಲಿ "ದೇವನಹಳ್ಳಿಯ

ವೇಣುಗೋಪಾಲ ಸ್ವಾಮಿಯನ್ನೇ ಮದನ ಗೋಪಾಲ"[೨೭] ಎಂದು ಕರೆಯಲಾಗಿದೆ. ಆದ್ದರಿಂದ ಗೋಪಕವಿ ಹೇಳಿರುವ 'ಶ್ರೀ ಮದನ ಗೋಪಾಲಕನ ಕರುಣದಿಂ' ಎನ್ನುವ ಮಾತು ದೇವನಹಳ್ಳಿಯ ದೇವಸ್ಥಾನದ ದೈವವನ್ನು ಕುರಿತು ಹೇಳಿದುದು.

ಈ ಕೃತಿಯು ಸಂಧಿ ೨೫ರ ಪದ್ಯ ೨೯ರಲ್ಲಿ ಬರುವ "ಇಮ್ಮಡಿ ಹಾವಳೀಂದ್ರ ಸತ್ಕೀರ್ತಿ ಸಾಂದ್ರ ವರಸು ಕವಿ ಸೇವ್ಯಕರ ಸೇವಸ್ಯರ ಸಾಲನಲೆ ಪರಿತೋಷದಿಂ ಕೃತಿಯ ಕೇಳ್ದೊಲ್ದು ವಿರುಪಾಕ್ಷಪುರವ ಧಾರಾದತ್ತ ಮಾಗಿತ್ತನಾ ಚಂದ್ರತಾರಾರ್ಕ ಚಿರಮಿಪೊಲು"[೨೮] ಎನ್ನುವ ಮಾತಿನಿಂದ ಗೋಪಕವಿಗೆ ವಿರೂಪಾಕ್ಷಪುರ ಉಂಬಳಿಯಾಗಿ ದೊರಕಿತ್ತೆಂಬುದು ತಿಳಿಯುತ್ತದೆ. ಈ ಊರು ಹೀಗೆ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಹೋಬಳಿ ಕೇಂದ್ರವಾಗಿರುವ ವಿರೂಪಾಕ್ಷಪುರವಾಗಿದೆ.

ಐತಿಹಾಸಿಕವಾಗಿ ನಂದಿಗ್ರಾಮ ಮತ್ತು ನಂದಿದುರ್ಗದ ಇತಿಹಾಸದಲ್ಲಿ ಬಾಣ, ನೊಳೆಂಬ, ಚೋಳ, ಹೊಯ್ಸಳ, ವಿಜಯನಗರ, ಚಿಕ್ಕಬಳ್ಳಾಪುರದ ಪಾಳೆಯಗಾರರು, ಮೈಸೂರು ದೊರೆಗಳು, ಹೈದರ್, ಟಿಪ್ಪು, ಮರಾಠರು ಮತ್ತು ಬ್ರಿಟೀಷರು ಆಳ್ವಿಕೆ ಮಾಡಿರುವುದು ತಿಳಿದುಬರುತ್ತದೆ. ಆದರೆ ಕಾವ್ಯದಲ್ಲಿ ಯಾವುದೇ ಮಾಹಿತಿಯು ಸಿಗುವುದಿಲ್ಲ.

'ಮಹಾಕೂಟ ಮಹಾತ್ಮ್ಯೆ' ಇದನ್ನು ಸದಾಶಿವ ಕವಿಯು ಬರೆದಿದ್ದಾರೆ. "ಇದು ಸ್ಕಂದ ಪುರಾಣೋಕ್ತವಾದ ಮಹಾಕೂಟ ಕ್ಷೇತ್ರದ ವಿಷಯದ ಕನ್ನಡ ಅನುವಾದ. ಬಸವನ ಕೃಪೆಯಿಂದ ಚರಿತ್ರೆಯನ್ನು ರಚಿಸಿದಂತೆ ಹೇಳಿಕೊಂಡಿದ್ದಾನೆ"[೨೯] ಎಂದು ಕವಿ ಚರಿತೆಕಾರರು ಹೇಳಿದ್ದಾರೆ.

ಈ ಕಾವ್ಯದಲ್ಲಿ ಅನೇಕ ಕೆರೆಗಳನ್ನು ಹೆಸರಿಸಿದ್ದಾರೆ. (ಸೂಳೆಕೆರೆ, ಹರಿದ್ರಾ, ಆನೆಕೆರೆ ಇತ್ಯಾದಿ) ಈ ಕೆರೆಗಳಲ್ಲಿನ ತೀರ್ಥಕ್ಷೇತ್ರಗಳ ಕುರಿತು ಚರಿತ್ರೆಯನ್ನು ಈ ಮಹಾತ್ಮ್ಯೆಯು ತಿಳಿಸುತ್ತದೆ. ಈ ಕೃತಿಯ ಕೇಂದ್ರ ಬಿಂದು ಕೆರೆ. ಚಾರಿತ್ರಿಕ ಸಂಗತಿಗಳಿಗೆ ಪೌರಾಣಿಕ ಅಂಶಗಳನ್ನು ಸೇರಿಸಿ ಕಾವ್ಯ ಬರೆಯಲಾಗಿದೆ. ಸೂಳೆಕೆರೆ ದಕ್ಷಿಣ ಭಾರತದ ಅತ್ಯಂತ ಪ್ರಸಿದ್ಧವಾದ ಕೆರೆಯಾಗಿದೆ. ಇದು ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ ಕೇಂದ್ರದಿಂದ ಸುಮಾರು ೨೦ ಕಿ.ಮೀ. ದೂರದಲ್ಲಿದೆ. ದಕ್ಷಿಣ ಭಾರತದ ನೀರಾವರಿ ಇತಿಹಾಸದಲ್ಲಿ ಮಧ್ಯಯುಗದ ಎರಡು ದೊಡ್ಡ ಯೋಜನೆಗಳೆಂದು ಹೆಸರಾಗಿರುವ ಕಾವೇರಿ ಮುಖಜಭೂಮಿ ಯೋಜನೆ ಮತ್ತೊಂದು ಸೂಳೆಕೆರೆಯ ಯೋಜನೆ ಮುಖ್ಯವಾಗಿವೆ.

ಈ ಕಾವ್ಯದ ಪ್ರಕಾರ ಭೋಜಪುರ ಕೆರೆಯನ್ನು ಬಿಟ್ಟರೆ ಅತಿದೊಡ್ಡ ಕೆರೆ ಸೂಳೆಕೆರೆ ಎಂದು ಪರಿಗಣಿತವಾಗಿದೆ. ಇದರ ಸುತ್ತಳತೆ ೬೪ ಕಿ.ಮೀ. ಎಂದು ಹೇಳುತ್ತಾ, ಇದನ್ನು

ನಿರ್ಮಿಸಿದವರು ವಿಕ್ರಮರಾಜನೆಂದು ತಿಳಿದುಬರುತ್ತದೆ. ಆದರೆ ಇತಿಹಾಸದಲ್ಲಿ ಈತ ಯಾರೆಂಬುದು ಸ್ಪಷ್ಟವಿಲ್ಲ. ಕೆಲವು ವಿದ್ವಾಂಸರ ಪ್ರಕಾರ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿರಬೇಕೆಂದು ಊಹೆ ಮಾಡಿದ್ದಾರೆ.

ಕಾವ್ಯದಲ್ಲಿ ಉಲ್ಲೇಖವಿರುವ ಪ್ರಕಾರ ತೂಬುಗಳು ಕಲ್ಲಿನಿಂದ ನಿರ್ಮಾಣಗೊಂಡಿದ್ದು ನೋಡುಗರ ಕಣ್ಮನ ಸುರಂಗದಂತೆ ಭಾವಿಸಲು ಅನುಮತಿ ಕೊಡುತ್ತದೆ. ಇವು ವ್ಯವಸಾಯಕ್ಕೆ ಹೆಚ್ಚಿನ ಅನುಕೂಲವನ್ನು ಮಾಡಿಕೊಟ್ಟಿದೆ. ಇನ್ನೂ ಕಾವ್ಯದಲ್ಲಿ ಬರುವ ಸಿದ್ಧೇಶ್ವರದ ದೇವಸ್ಥಾನ ಕೆರೆಯ ಪೂರ್ವದ ಕೊನೆಯಲ್ಲಿದೆ. ಅದರ ಮುಂದೆ ೧೬ನೇ ಶತಮಾನಕ್ಕೆ ಸೇರಿದ ಶಾಸನಗಳಿವೆ. ಇದರಲ್ಲಿ ಗರ್ಭಗೃಹ, ಸುಕನಾನ ಮತ್ತು ನವರಂಗಗಳಿವೆ. ಮಹಾದ್ವಾರದ ಒಳಗೆ ಭಗತಿ ಇದೆ. "ದೇವಾಲಯದ ವಸ್ತುವನ್ನು ಗಮನಿಸಿದರೆ ಅಲ್ಲಿ ಹೊಯ್ಸಳ ಮತ್ತು ಕೆಳದಿ ಅರಸರ ಕಾಲದ ಲಕ್ಷಣಗಳು ಕಾಣುತ್ತವೆ"[೩೦] ಎಂದು ವೈ.ಸಿ.ಭಾನುಮತಿಯವರು ಅಭಿಪ್ರಾಯಪಡುತ್ತಾರೆ.

ಚೆಲುವಾಂಬೆಯವರ 'ವೆಂಕಟಾಚಲ ಮಹಾತ್ಮ್ಯಂ' ಲಾಲಿಪದ ಚಾರಿತ್ರಿಕವಾದ ಅಂಶಗಳನ್ನು ವೆಂಕಟಗಿರಿಯ ಮಹಾತ್ಮ್ಯೆಯಲ್ಲಿ ಬರುವಂತಹ ವಿಷಯ ವಸ್ತುವನ್ನು ಕುರಿತು ಹೇಳುತ್ತದೆ. ಕನಕಗಿರಿಯು ಶೇಷಾದ್ರಿಯಾಗಿ ಮರುನಾಮಕರಣ ಪಡೆದುದು. ನಂತರ ನಾರಾಯಣಾದ್ರಿ ಎಂದು ನಾರಾಯಣನೆಂಬ ಬ್ರಾಹ್ಮಣನಿಂದ ಬಂದಿದ್ದು ಆ ನಂತರ ವೃಷಭಾದ್ರಿ ಎಂಬುದಾಗಿ ಹೆಸರು ಬಂದಿದ್ದು. ನಂತರ ಇಲ್ಲಿ ಅಂಜನೆಯು ತಪ ಮಾಡಿ ಆಂಜನೇಯನನ್ನು ಪಡೆದಿದ್ದು, ವೃಷಭಾದ್ರಿಯು ಹೀಗೆ ಅಂಜನಾದ್ರಿಯಾಯಿತು. ನಂತರ 'ವೆಂಕಟಗಿರಿ' ಎಂಬ ಹೆಸರು ಬಂದಿತು ಎಂಬುದನ್ನು ಪುರಾಣ ಕಥನಗಳ ಜೊತೆಗೆ ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಳ್ಳುತ್ತಿರುವುದು ತಿಳಿದುಬರುತ್ತದೆ. ಆದರೆ ಅಂಜನಾದ್ರಿ ಎಂಬುವುದು ಹಂಪಿಯ ಹತ್ತಿರವಿರುವ ಅಂಜನಾದ್ರಿಯಾಗಿದೆ. ಆದರೆ ಆಂಧ್ರದ ಬಳಿಯಿರುವುದು 'ವೆಂಕಟಗಿರಿ'ಯಾಗಿದೆ ಎಂದು ಇತಿಹಾಸದಲ್ಲಿ ತಿಳಿಸಲಾಗಿದೆ. ಚೆಲುವಾಂಬೆಯು ಮೈಸೂರು ದೊರೆಯಾದ ದೊಡ್ಡ ಕೃಷ್ಣರಾಜನ ಹೆಂಡತಿ (೧೭೧೩-೧೭೩೧) ದಳವಾಯಿ ದೊಡ್ಡೇಂದ್ರನ ತನುಜ ಕಳಲೆ ಕಾಂತನೃಪನ ಮಗಳು ಎಂದು ತಿಳಿಯುತ್ತದೆ.

ಹಾಗೆಯೇ ಈಕೆಯ ಇನ್ನೊಂದು ಕಾವ್ಯ 'ತಲಕಾವೇರಿ ಮಹಾತ್ಮ್ಯೆ' ಗದ್ಯರೂಪವಾದ ಕನ್ನಡ ವ್ಯಾಖ್ಯಾನ ಇವೆರಡು ವ್ಯಾಖ್ಯಾನ ಕೃತಿಗಳೇ ಆಗಿವೆ. ಇದಕ್ಕೆ ಚೆಲುವಾಂಬೆಯ ವಾಣಿವಿಲಾಸ ಎಂಬ ಹೆಸರು ಗ್ರಂಥದಲ್ಲಿರುವ ಒಂದು ಶ್ಲೋಕ ಪದ್ಯದಿಂದ ತಿಳಿಯುತ್ತದೆ.

ಹಾಗೆ ಈ ಕೃತಿಯನ್ನು ಚೆಲುವಾಂಬೆ ಬರೆದಿಲ್ಲ ಎಂಬ ವಾದವಿದೆ. ಅದಕ್ಕೆ ಪುಷ್ಠಿ ನೀಡುವಂತೆ ಕವಿಚರಿತೆಕಾರರು ಸಹ "ಮೌದ್ಗಲ್ಯಗೋತ್ರದ ವೆಂಕಟಾಚಾರ್ಯನ ಮಗನಾದ ಶ್ರೀನಿವಾಸನು ಈ ಟೀಕೆಯನ್ನು ಬರೆದಂತೆ ತೋರುತ್ತದೆ."[೩] ಎಂದು ಅಭಿಪ್ರಾಯಪಟ್ಟಿದ್ದಾರೆ.

ಚೆಲುವಾಂಬೆಯ ಯಾವ ಕೃತಿಯು ಅಷ್ಟೊಂದು ಪ್ರಾಮುಖ್ಯತೆಯನ್ನು ಪಡೆದಿಲ್ಲ ಎನ್ನುವುದು ಈ ಮೇಲಿನ ಅಂಶಗಳಿಂದ ತಿಳಿಯುತ್ತದೆ. ಈಕೆಯ ಕೃತಿಗಳಲ್ಲಿ ಅತಿಯಾದ ಧರ್ಮ ಶ್ರೇಷ್ಠತೆಯನ್ನು ಕಾಣಬಹುದು. ಅಲ್ಲದೆ ಸ್ತ್ರೀಯರಿಗೂ ಯಾವುದೇ ಮಾನ್ಯತೆಯನ್ನು ನೀಡಿಲ್ಲ. ಐತಿಹಾಸಿಕವಾಗಿಯೂ ಅಷ್ಟೊಂದು ಪ್ರಮುಖವಾದುದೆಂದು ಅನಿಸುವುದಿಲ್ಲ.

ಪಂಚಬಾಣ ವಿರಚಿತ 'ಭುಜಬಲಿಯ ಚರಿತೆ'ಯಲ್ಲಿ ಪಂಚಬಾಣನು ಐತಿಹಾಸಿಕ ಸ್ಥಳ, ಐತಿಹಾಸಿಕ ವ್ಯಕ್ತಿ, ಐತಿಹಾಸಿಕವಾದ ಬಾಹುಬಲಿಯ ಪ್ರಸಿದ್ಧವಾದ ಪ್ರತಿಮೆಯನ್ನು ಪ್ರಸ್ತಾಪಿಸಿದ್ದರೂ ಇವೆಲ್ಲವನ್ನು ಪೌರಾಣಿಕ ನೆಲೆಯಲ್ಲಿ ಹಾಗೂ ಧಾರ್ಮಿಕ ನೆಲೆಯಲ್ಲಿ ಪರಿಭಾವಿಸಿದ್ದಾರೆ. ಅದರಾಚೆಗೂ ಕೃತಿಯಲ್ಲಿ ಕವಿ ಪಂಚಬಾಣ ಶ್ರವಣಬೆಳಗೊಳದವನಾಗಿದ್ದನೆಂದು ಮೌಖಿಕ ಇತಿಹಾಸದ ಅನೇಕ ವಿಚಾರಗಳು ಕಾವ್ಯದಲ್ಲಿ ಅಂತರ್ಗತವಾಗಿ ಬಂದಿವೆ. ಅದರಲ್ಲಿ ಉಲ್ಲೇಖಗೊಂಡಿರುವ ಶ್ರವಣಬೆಳಗೊಳ ಐತಿಹಾಸಿಕ ಪ್ರಸಿದ್ಧ ಜೈನರ ಪ್ರೇಕ್ಷಣೀಯ ಸ್ಥಳ. ಅಲ್ಲದೆ ಚಾವುಂಡರಾಯನ ಬಗ್ಗೆ ಇವನು ಕೆಲವು ಬಸದಿಗಳನ್ನು ಕಟ್ಟಿಸಿದನೆಂದು, ಗೊಮ್ಮಟಮೂರ್ತಿಯನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ. ಅಲ್ಲದೆ ಮಹಾಮಸ್ತಾಭಿಷೇಕದಂತಹ ಹಲವಾರು ಸಂಗತಿಗಳು ಈ ಕೃತಿಯ ಮಹತ್ವವನ್ನು ಸೆಳೆದಿದೆ.

ಶ್ರವಣಬೆಳಗೊಳ ಭೌಗೋಳಿಕವಾಗಿ ಹಾಸನ ಜಿಲ್ಲೆಯ ಚೆನ್ನರಾಯಪಟ್ಟಣದ ದಕ್ಷಿಣಕ್ಕೆ ಹದಿನಾರು ಕಿಲೋಮೀಟರ್ ದೂರದಲ್ಲಿದೆ. ಈ ಹೆಸರು ಬರಲು ಒಂದು ಐತಿಹ್ಯವನ್ನು ಹೇಳುತ್ತಾರೆ. ಅದು 'ಗುಳ್ಳಕಾಯಿ ಅಜ್ಜಿಯದು'; ಅದೇನೆಂದರೆ ಮಹಾಮಸ್ತಾಭಿಷೇಕ ಮಾಡಿದಾಗ ಹಾಲು ಕೆಳಗೆ ಬೀಳದೆ ಮಂಡಿಯ ಹತ್ತಿರವೇ ನಿಂತುಬಿಡುತ್ತದೆ. ಬಿಳಿಯ ಗುಳ್ಳದ ಕಾಯದಲ್ಲಿ ಹಾಲು ತಂದಿದ್ದ ಅಜ್ಜಿಯು ಮೂರ್ತಿಯ ಮೇಲೆ ಹಾಲು ಸುರಿದಾಗ ಅದು ತೊರೆಯಾಗಿ ಹರಿಯುತ್ತದೆ. ಕೃತಜ್ಞತೆಯ ದ್ಯೋತಕವಾಗಿ ಚಾವುಂಡರಾಯ ಬೆಳಗೊಳ ಎಂದು ಹೆಸರಿಡುತ್ತಾನೆ ಎಂಬ ಸ್ಥಳ ಐತಿಹ್ಯವನ್ನು ಆಧರಿಸಿ ಕವಿಯು ಕಥೆಯನ್ನು ಪ್ರಾರಂಭಿಸುತ್ತಾನೆ.

ಆದರೆ ಆರಂಭ ಮತ್ತು ಅಂತ್ಯಭಾಗದಲ್ಲಿ ಕವಿ ಕೆಲವೊಂದು ವೈಯಕ್ತಿಕ ಸಂಗತಿಗಳನ್ನು ಹೇಳಿಕೊಂಡಿದ್ದರೂ ಸಹ ಎಲ್ಲಿಯೂ ತನ್ನ ಕಾಲದ ಬಗ್ಗೆ ನೇರವಾಗಿ ಹೇಳಿಕೊಂಡಿಲ್ಲ. ಆದರೆ ಕನ್ನಡ ಅಧ್ಯಯನ ಸಂಸ್ಥೆಯ ಕೆ.೧೪೪೮೩ ಸಂಖ್ಯೆ ಹಸ್ತಪ್ರತಿಯ ಅಂತ್ಯದಲ್ಲಿ "ಆನಂದ ಸಂವತ್ಸರದ ಮಾರ್ಗಶಿರ ಶು॥೫ ಬುಧವಾರ ಬೆಳಗುಳದ ಸ್ಥಾನಿಕ ಚೆನ್ನಪ್ಪಯ್ಯನ ಮಗ ಕವಿ ಪಂಚಬಾಣನು ಕವಿತ್ವವ ಹೇಳಿ ತನ್ನ ಸ್ವಹಸ್ತದಲ್ಲಿ ಬರೆದ ಪುಸ್ತಕಕ್ಕೆ ಮಂಗಳ ಮಹಾಶ್ರೀ"[೩೩] ಎಂದಿದೆ ಎಂದು ಸಂಪಾದಕರಾದ ವೈ.ಸಿ.ಭಾನಾಮತಿಯವರು ಪ್ರಸ್ತಾವನೆಯಲ್ಲಿ ಹೇಳಿಕೊಂಡಿದ್ದಾರೆ. ಆದರೆ ಕವಿ ಚರಿತೆಕಾರರ ಪ್ರಕಾರ ೧೬೧೪ ಇವನ ಕಾಲವೆಂದು ಗುರುತಿಸುತ್ತಾರೆ. ಅದಕ್ಕೆ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾರೆ. "ಕನ್ನಡ ಜಾಣನೆನಿಸಿದ ದೇಪ್ಪಯ್ಯ, ಗ್ರಂಥದ ಕೊನೆಯ ಸಂಧಿಯಲ್ಲಿ ಶಾಂತವರ್ಣಿ ಗೊಮ್ಮಟೇಶ್ವರನಿಗೆ ಶಕ ೧೫೩೫ ಪರೀಧಾವಿಯಲ್ಲಿ ಎಂದರೆ ೧೬೧೨ರಲ್ಲಿ ಮಸ್ತಕಾಭಿಷೇಕವನ್ನು ಮಾಡಿಸಿದಂತೆ ಹೇಳುತ್ತಾನೆ. ಈ ಶಾಂತವರ್ಣಿ ಕವಿಯ ಸಮಕಾಲದವನೆಂದು ಆ ಸಂಧಿಯಿಂದಲೇ ವ್ಯಕ್ತವಾಗುತ್ತದೆ. ನಮಗೆ ದೊರೆತ ಈ ಗ್ರಂಥದ ಪ್ರತಿಯ ಕೊನೆಯಲ್ಲಿ 'ಆನಂದ ಸಂವತ್ಸರ ಮಾರ್ಗಶಿರ ಶು॥೫ ಬುಧವಾರ ಬೆಳಗುಳದ ಸ್ಥಾನಿಕ ಚೆನ್ನಪ್ಪಯ್ಯನ ಮಗ ಕವಿ ಪಂಚಬಾಣನು ಕವಿತ್ವದ ಹೇಳಿ ತನ್ನ ಸ್ವಹಸ್ತದಲ್ಲಿ ಬರೆದ ಪುಸ್ತಕಕ್ಕೆ ಮಂಗಳ ಮಹಾಶ್ರೀ"[೩೪] ಎಂದಿದೆ. ಈ ಆನಂದ ಸಂವತ್ಸರವು ೧೬೧೪ ಆಗಿರಬೇಕು ಎಂದು ಕವಿಚರಿತೆಕಾರರ ಅಭಿಪ್ರಾಯವಾಗಿದೆ.

ಪಂಚಬಾಣನು ಭುಜಬಲಿಯ ಚರಿತೆಯಲ್ಲಿ ಕೆಲವು ಜೈನ ಹಾಡುಗಳು ದೊರೆಯುತ್ತವೆ. ಅವು ಸಹ ಕವಿಚರಿತೆಯಲ್ಲಿ ಉಲ್ಲೇಖವಾಗಿರುವ ಮಾಹಿತಿ ಸಿಗುತ್ತದೆ. ಹಾಗೆ "ಭುಜಬಲಿ ಚರಿತೆಯ ಅಂತ್ಯದಲ್ಲಿ ಶಾಂತವರ್ಣಿ ನಡೆಸಿದ ಮಸ್ತಕಾಭಿಷೇಕದ ಕಾಲವು.

*ವರ ಶತವರುಷ ಸಾವಿರದ್ಯೇನೂವ್ವಾಲ್ವತ್ತ । ಪರಿಧಾವಿ ಸಂವತ್ಸರದ*
*ನರೆ ಚೈತ್ರಮಾಸ ಪೌರ್ಣಮಿಯಿಂದುವಾರದಿ । ಅರುಹ ಗುಮ್ಮಟಜಿನೇಶ್ವರನಿಗೆ-೧೦೭*

ಎಂದಿದೆ. ಮಸ್ತಕಾಭಿಷೇಕದ ಕಾಲವನ್ನು ಕ್ರಿ.ಶ. ೧೬೧೮ ಎಂದು ತಿಳಿಯಬಹುದು. ಆದರೆ ಕವಿಚರಿತೆಕಾರರಲ್ಲಿ ಭಿನ್ನಪಾಠವಿರುವಂತೆ ತೋರುತ್ತದೆ"[೩೫] ಎಂದು ವೈ.ಸಿ.ಭಾನುಮತಿ ಅವರು ತಿಳಿಸುತ್ತಾರೆ. ಹಾಗೆ ಮುಂದುವರೆದು "ಶಾಂತವರ್ಣಿ ಮತ್ತು ಗೊಮ್ಮಟೇಶ್ವರನಿಗೆ ಶಕ ೧೫೩೫ ಪರಿಧಾವಿಯಲ್ಲಿ ಎಂದರೆ ೧೬೧೨ರಲ್ಲಿ ಮಸ್ತಾಕಾಭಿಷೇಕ ಮಾಡಿಸಿದಂತೆ ಕವಿ ಹೇಳುತ್ತಾನೆ." ಈ ಕಾಲದ ಸೂಚನೆಯಂತೆ ಕ್ರಿ.ಶ.೧೬೧೨ರಲ್ಲಿ ಮಸ್ತಕಾಭಿಷೇಕ ನಡೆಯಿತೆಂದು ಊಹಿಸಬಹುದು. ಇದಕ್ಕೆ ಸಾಕ್ಷಿಯಾಗಿದ್ದ ಕವಿ ಪಂಚಬಾಣನು

ತರುವಾಯದಲ್ಲಿ ಅಂದರೆ ಮಸ್ತಕಾಭಿಷೇಕ ಮುಗಿದೊಡನೆಯೇ ಕೃತಿ ರಚನೆಯಲ್ಲಿ ತೊಡಗಿರುವ ಸಾಧ್ಯತೆಯಿದೆ. ಈ ಹಿನ್ನೆಲೆಯಲ್ಲಿ ಅಧ್ಯಯನ ಸಂಸ್ಥೆಯ ಹಸ್ತಪ್ರತಿಯಲ್ಲಿ ಐದು ವರ್ಷ ಹೆಚ್ಚಾಗಿದ್ದರೂ ಕವಿಚರಿತೆಕಾರರು ನಿರ್ಣಯಿಸಿರುವ ಕಾಲವಿಚಾರವನ್ನು ಅಂಗೀಕರಿಸಬಹುದು. ಹಾಗೆಯೇ ಪಂಚಬಾಣನು ಕ್ರಿ.ಶ.೧೬೦೦ರಿಂದಲೂ ಜೀವಿಸಿದ್ದನೆಂದು ಭಾವಿಸಬಹುದೆಂತಲೂ"[೩೬] ವೈ.ಸಿ.ಭಾನುಮತಿಯವರು ಅಭಿಪ್ರಾಯಪಟ್ಟಿದ್ದಾರೆ.

ಒಟ್ಟಿನಲ್ಲಿ ಪಂಚಬಾಣನು ಭುಜಬಲಿಯ ಕೃತಿ ರಚಿಸಿರುವುದು ನಿಜ. ಈತನ ತಂದೆ ಚೆನ್ನಪ್ಪಯ್ಯ. ಈತ ಶ್ರವಣಬೆಳಗೊಳದಲ್ಲಿ ಸ್ಥಾನಿಕನಾಗಿದ್ದ. ಕವಿ ತನ್ನ ತಂದೆಯ ಬಳಿಯಲ್ಲಿಯೇ ಶಿಕ್ಷಣವನ್ನು ಪಡೆದಿದ್ದನು. ಹಾಗೆ ವಿದ್ಯಾಗುರು ಬೆಳಗುಳದ ಸ್ಥಾನಿಕ ಚೆನ್ನಪ್ಪಯ್ಯನ ಪಾದಕ್ಕೆ ನಮಸ್ಕಾರ' ಎಂದು ತಂದೆಯನ್ನು ಸ್ಮರಿಸಿದ್ದಾನೆ. ಕೆಲವು ಸಂಧಿಯ ಕಡೆಯಲ್ಲಿಯೂ 'ಇದು ಜಿನಪದಭಕ್ತಿ ಚೆನ್ನಪೇಂದ್ರನ ಸುತ ಚದುರಿ ಸಕ್ಕವಿ ಪಂಚಬಾಣ' ಎಂಬ ನುಡಿಯು ನಿಯತವಾಗಿ ಬಂದಿರುವುದನ್ನು ನೋಡಬಹುದು. ಹಾಗೆ ಶ್ರವಣಬೆಳಗೊಳದ ಭಟ್ಟಾಂಕರಾದ ಪಂಡಿತಾರ್ಯರ ಬಗ್ಗೆ ಅಪಾರ ಗೌರವವಿರಬೇಕು. ಆದ್ದರಿಂದಲೇ ಪಂಪನು 'ಪರಮ ಜಿನೇಂದ್ರವಾಣಿಯ ಸರಸ್ವತಿ' ಎಂದಂತೆ ಈತ ಗುರು ಪಂಡಿತಾಚಾರ್ಯರನ್ನು 'ಗಂಡುಶಾರದೆ' (೧-೨೩) ಎಂದು ಕರೆದುಕೊಂಡಿದ್ದಾನೆ. ಕವಿಯು ತನ್ನ ಆರಾಧ್ಯದೇವತೆಯಾದ 'ಅನಂತಮತಿಯಮ್ಮ' ಈಕೆಯನ್ನು ಆಪ್ಯಂತ್ಯಗಳಲ್ಲಿ ಭಕ್ತಿಯಿಂದ ಸ್ತುತಿಸಿದ್ದಾನೆ. ಹಾಗೆ ಗೊಮ್ಮಟನ ಬಗ್ಗೆ ಭಕ್ತಿಯಂತೂ ಹೊನಲಾಗಿ ಹರಿದಿದೆ ಎಂಬ ರೂಪಕವನ್ನು ಕೊಟ್ಟರೆ ತಪ್ಪಾಗದು. ಪ್ರತಿ ಸಂಧಿಗೂ ಚಾಲನೆ ನೀಡುವ ಅಂಶ ಕೂಡ ಗೊಮ್ಮಟನ ಸ್ತುತಿಯೇ. ಇದರಿಂದಲೇ ಈತನಿಗೆ ಗೊಮ್ಮಟನ ಬಗ್ಗೆ ಇರುವ ಭಕ್ತಿಯ ಬಗೆಗೆ ಅರಿವಾಗುತ್ತದೆ. ಇವೆಲ್ಲವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಲು ಈತನು ಸ್ಥಳಿತನಾಗಿರುವುದರಿಂದ ಐತಿಹ್ಯ, ಪೂಜಾ ವಿಧಿಗಳು, ಸ್ಥಳ ಪುರಾಣಗಳನ್ನು ನೋಡುತ್ತಾ ಮತ್ತು ಕೇಳುತ್ತಾ ಬೆಳೆದಿರಬೇಕು. ಆದ್ದರಿಂದಲೇ ತುಂಬಾ ಸೊಗಸಾದ ಸ್ಥಳೀಯ ಪುರಾಣ ಐತಿಹ್ಯಗಳ ಮೂಲಕ ಗೊಮ್ಮಟನನ್ನು ಚಿತ್ರಿಸಿದ್ದಾನೆ.

ಗಣಜಿಲೆಯ ಚೆನ್ನವೀರಾಂತ ರಚಿಸಿದ ಪರ್ವತ ಮಹಾತ್ಮ್ಯೆಯಲ್ಲಿ ಕೆಲವು ಚಾರಿತ್ರಿಕ ಸಂಗತಿಗಳು ದೊರೆಯುತ್ತವೆ. ಆದರೆ ಇತಿಹಾಸದ ಪುಟಗಳನ್ನು ನೋಡಿದರೆ ಅವುಗಳಿಗೆ ದಾಖಲೆಗಳೇ ಸಿಗುವುದಿಲ್ಲ. ಆದರೆ ಇಲ್ಲಿ ಬರುವ ಕವಿಯ ಕುಲಗೋತ್ರ ಮತ್ತು ಕಾಲದ ಬಗ್ಗೆ ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ. ಅದನ್ನು ಈ ಕೆಳಗಿನ ಪದ್ಯದಲ್ಲಿ ಸ್ಪಷ್ಟಪಡಿಸಲಾಗಿದೆ.

*ಕೃತದಲ್ಲಿ ಸ್ಕಂದ ಪುರಾಣದಲಿ ಪೇಳ್ದುದೀ*
*ಕೃತಿಗೆಯಭಿದಾನ ಶ್ರೀ ಪರ್ವತ ಮಹಾತ್ಮೆಸ*
*ನ್ನುತಮಾಪ ಕರ್ನಾಟ ಭಾಷೆಯಿಂದ ತಿಳಿಯ ಪೇಳ್ದವನ ದಾರೆಂದೊಡೆ ।*
*ಕೃತ ಕೃತ್ಯ ಗಣಜಿಲೆಯ ಬ್ರಹ್ಮೇಶ ಗುರುವರನ*
*ಸುತ ವೀರಭದ್ರನ ತನೂಭವನುಯೆನಿಪಲು*
*ಶ್ರುತ ಸುವೃತಿ ಚನ್ನವೀರಾಂಶನಾಗಸ್ತ್ಯ ಗೋತ್ರೋದ್ಭೂತ ವಿಖ್ಯಾತನು (೧-೫೮)*

ಎಂಬ ಪದ್ಯದಿಂದ ಇವನು ಸ್ಕಂದ ಪುರಾಣದಲ್ಲಿ ಹೇಳಿರುವ 'ಶ್ರೀ ಪರ್ವತ ಮಹಾತ್ಮೆ' ಎಂಬ ಕೃತಿಯನ್ನು ಕರ್ನಾಟ ಭಾಷೆ ಅಂದರೆ ಕನ್ನಡ ಭಾಷೆಯಲ್ಲಿ ಹೇಳಿದವನು. ಗಣಜಿಲೆಯು ಚೆನ್ನವೀರಾಂತನೆಂತಲೂ, ಬ್ರಹ್ಮೇಶ ಗುರುವೆಂತಲೂ ಅಗಸ್ತ್ಯ ಗೋತ್ರದವನೆಂದು ಹಾಗೆ ತಂದೆ ವೀರಭದ್ರನೆಂದು ಹೇಳಿಕೊಂಡಿದ್ದಾನೆ. ಕವಿ ತನ್ನ ಕಾಲವನ್ನೂ ಸಹ ತಾನೇ ಹೇಳಿಕೊಂಡಿದ್ದಾನೆ.

*ಶತ ವರುಷ ಸಾವಿರದ ಮುನ್ನೂರ ಮೂವತ್ತೈ*
*ದಕೆ ಸಲುವ ವಿಜಯ ಸಂವತ್ಸರದೊಳೆಸೆವ ಕಾ*
*ರ್ತಿಕ ಶುದ್ಧ ದಶಮಿ ಶಶಿವಾರದಿ... ಪ್ರಕಟಿಸಿದೆ (೨೧-೨೩)*

ಇದರಿಂದ ಈತನ ಕಾಲ ಕ್ರಿ.ಶ. ೧೪೧೩ ಎಂದಾಗುತ್ತದೆ. ಅದೇ ರೀತಿಯಾಗಿ ಇದರಲ್ಲಿ ಬರುವ ಚಾರಿತ್ರಿಕ ವಿಷಯಗಳು ಪುರಾಣದಿಂದ ಕೂಡಿವೆ. ಪುರಾಣದಿಂದ ಭಿನ್ನವಾಗಿ ಚರಿತ್ರೆಯನ್ನು ಬಿಡಿಸಿ ನೋಡುವುದು ಕಷ್ಟವಾದರೂ ಕೆಲವು ಅಂಶಗಳನ್ನು ಚಾರಿತ್ರಿಕವಾಗಿ ಇಲ್ಲಿ ನೋಡಲಾಗಿದೆ. ಸಮುದ್ರದಿಂದಾವೃತವಾದ ಧರಣಿ ಮಧ್ಯದಲ್ಲಿ ಭರತಭೂಮಿ ಇದೆ. ಅದರಲ್ಲಿ ಅಧಿಕ ವಿಸ್ತಾರವಾದ ಕೈಲಾಸದಂತೆ ಶ್ರೀಶೈಲ ಪರ್ವತವಿದೆ. ಅದರ ಸುತ್ತಲ ದೇಶದಲ್ಲಿ ಕಂಗು, ತೆಂಗು ಬೆಳೆಯದ ತೋಟಗಳಿಲ್ಲ. ಮದಿಸಿದ ಆನೆ ಹುಟ್ಟದ ಬೆಟ್ಟಗಳಿಲ್ಲ. ಸ್ವರ್ಗಕ್ಕೆ ಸರಿಮಿಗಿಲೆನ್ನುವಂತಹ ಹೇಮಾಂಗದ (ಶ್ರೀರಂಗಪಟ್ಟಣ) ರಾಜಧಾನಿ. ಮೇಲೆ ನಿರೂಪಿತವಾದ ಕಥಾವಸ್ತುವನ್ನು ನೋಡಿದರೆ ಹೇಮಾಂಗದ ಪಟ್ಟಣವು ತುಂಬಾ ಸಂಪತ್ಭರಿತವಾದ ರಾಜ್ಯವಾಗಿತ್ತೆಂದು ತಿಳಿಯಬಹುದು.

ಆ ರಾಜ್ಯವನ್ನು ಗುಪ್ತವಂಶದ ಸಂಸ್ಥಾಪಕನೂ, ಇತಿಹಾಸ ಪ್ರಸಿದ್ಧನೂ, ಅತ್ಯಂತ ಪರಾಕ್ರಮಿಯೂ ಆದ ಚಂದ್ರಗುಪ್ತನು ರಾಜ್ಯವಾಳುತ್ತಿದ್ದನು. ಅವನ ಸತಿ ಸ್ವಯಂಪ್ರಭಾದೇವಿ. ಈ ರಾಜದಂಪತಿಗಳಿಗೆ ಚಂದ್ರಾವತಿ ಕುವರಿಯಾಗಿ ಜನಿಸಿದಳು. ಆಕೆ ಶಿವನ

ಭಕ್ತಿಯಾಗಿದ್ದಳೆಂದು ತಿಳಿದುಬರುತ್ತದೆ. ಹಾಗೆ ಚಂದ್ರಾವತಿಯು ಒಡ್ಡೋಲಗದಲ್ಲಿ ನೃತ್ಯ ಮಾಡಲು ಅಲಂಕರಿತಭರಿತಳಾಗಿ ಬಂದರೆ ಸಂದನೆ ಆಕೆಯುನ್ನು ನೋಡಿ ಮೋಹಿತನಾಗುತ್ತಾನೆ.

*ಇಂತೆಸೆವ ಹಾವ ಭಾವ ವಿಲಾಸ ವಿಭ್ರಮದಿ*
*ಸಂತು ಭಾವವರನ ದೇಹದ ಮೃಗದ ತೆರದಿ ನೃಪ*
*ನಂತರಂಗ ವನಾಂಕುರದೆಲು ಸಲೆ ಗೋರಿಗೊಳಿಸಲು ಕರಣಮೃಗಗಳ ।*
*ನಂತರಿಸದಾರ್ದು ಕುಸುಮಾಸ್ತ್ರದಿಂ ಧೈರ್ಯಮೃಗ*
*ಮಂ ತಗುಳ್ದೆಸೆಯ ಮನ್ಮೇದಾ ಶರಾಹತದಿಯೇ*
*ರಂತೆ ತಕ್ಕಂತೆಯಂ ಒಡದೀಕ್ಷಿಸುತ ಗುಪ್ತನೃಪ*

*–ಕಾಮಕಪ್ತನಾನೆ ॥ (೮–೯೧)*

ಹೀಗೆ ಮೋಹಿತನಾದ ತಂದೆ ತಿವಿದೊಡ್ಡೋಲಗದಲ್ಲಿ ಮೂರ್ಛೆ ಹೋದ. ಅದನ್ನು ನೋಡಿದ ಮಗಳು ಹೆದರುತ್ತ ಭಯಭೀತಳಾಗಿ ಆ ಸ್ಥಳವನ್ನು ಬಿಟ್ಟೇ ಹೋದಳು. ಇತ್ಯಾದಿ ಮಾಹಿತಿ ಕಾವ್ಯದಲ್ಲಿ ಸಿಗುತ್ತದೆ.

ಆದರೆ ಇತಿಹಾಸದ ದಾಖಲೆಗಳಲ್ಲಿ ಮೇಲೆ ನಿರೂಪಿಸುವಂತೆ ಉಲ್ಲೇಖಗಳು ಸಿಗುವುದಿಲ್ಲ. ಸಿಕ್ಕರೂ ಕೆಲವು ದ್ವಂದ್ವಾತ್ಮಕವಾಗಿಯೇ ಸಿಗುತ್ತವೆ. ಇಲ್ಲಿ ಹೇಳಿರುವ ಗುಪ್ತವಂಶ ಸಂಸ್ಥಾಪಕ ಚಂದ್ರಗುಪ್ತನೆಂದಿದೆ. ಆದರೆ ಗುಪ್ತ ವಂಶದ ಸ್ಥಾಪಕ ಶ್ರೀ ಗುಪ್ತನೆಂದು ತಿಳಿದುಬರುತ್ತದೆ. ಹಾಗೆಯೆ ಗುಪ್ತವಂಶದಲ್ಲಿ ಪ್ರಮುಖ ರಾಜರುಗಳ ಒಂದನೇ ಚಂದ್ರಗುಪ್ತ, ೨ನೇ ಚಂದ್ರಗುಪ್ತ, ಸ್ಕಂದ ಗುಪ್ತ, ಸಮುದ್ರಗುಪ್ತ ಎಂಬ ರಾಜರುಗಳಲ್ಲಿ ಯಾವ ಗುಪ್ತನೆಂದು ಸರಿಯಾದ ಮಾಹಿತಿ ದೊರಕುವುದಿಲ್ಲ. ನಮಗೆ ಸಿಗುವ ಆಧಾರಗಳ ಮೇಲೆ "೨ನೇ ಚಂದ್ರಗುಪ್ತನ ಮಗಳಾದ ಪ್ರಭಾವತಿ ಗುಪ್ತಳು ತಾನು ಧರಣ ಗೋತ್ರದವಳೆಂದು ಹೇಳಿಕೊಂಡಿರುವುದು"[೩೭] ಹಾಗೆ ಪ್ರಸಿದ್ಧ ದೊರೆಯಾದ ಮೊದಲನೇ ಚಂದ್ರಗುಪ್ತನು "ಲಿಚ್ಚವಿಯ ರಾಜಕುಮಾರಿಯನ್ನು ವಿವಾಹವಾದನು"[೩೮] ಎಂದು ಈ ಲಿಚ್ಚವಿದೇವಿ, ಅವನ ಮಡದಿಯೆಂದು ಸಾರಲು "ಗುಪ್ತನು ನಾಣ್ಯಗಳನ್ನು ಹೊರಡಿಸಿ ಆ ನಾಣ್ಯಗಳಲ್ಲಿ ಕುಮಾರದೇವಿಯನ್ನು ಮಹಾದೇವಿಯೆಂದು ಸಂಬೋಧಿಸಿರುವುದಲ್ಲದೆ ನಾಣ್ಯದ ಒಂದು ಭಾಗದಲ್ಲಿ ತಮ್ಮಿಬ್ಬರ ಪ್ರತಿಮೆಗಳನ್ನೇ ಕೆತ್ತಿಸಿ ನಾಣ್ಯದ ತಳಭಾಗದಲ್ಲಿ 'ಲಿಚ್ಚೆವೀಯ' ಹಾಕಿರುವೆನು"[೩೯] ಎಂಬ ದಾಖಲೆಗಳು ಸಿಗುತ್ತವೆ. ಆದ್ದರಿಂದಲೇ ಲಿಚ್ಚೇವಿದೇವಿಯೇ ಅವನ ಮಡದಿ ಎನ್ನಬಹುದು.

ಆದರೆ ಪರ್ವತ ಮಹಾತ್ಮ್ಯೆಯಲ್ಲಿ ಹೇಳಿರುವ ಚಂದ್ರಗುಪ್ತನು, ಅವನ ಮಡದಿ ಸ್ವಯಂಪ್ರಭಾದೇವಿ ಮತ್ತು ಆತನ ಮಗಳು ಚಂದ್ರಾವತಿ ಯಾರೆಂಬುದನ್ನು ನಿರ್ಧರಿಸಲು ಕಷ್ಟವಾಗುತ್ತದೆ. ಇದು ಚರಿತ್ರೆಯೇ ಅಲ್ಲ, ಪುರಾಣ ಎಂದು ನಿರ್ಧರಿಸಲು ಚಂದ್ರಗುಪ್ತನ ಹೆಸರು ಗುಪ್ತರ ಇತಿಹಾಸದಲ್ಲಿ ಅಳಿಯದೇ ಉಳಿದಿರುವ ಪ್ರಮುಖ ಹೆಸರಾಗಿದೆ.

ಅದಕ್ಕೆ ಸಂಪೂರ್ಣವಾಗಿ ಪುರಾಣವೆಂದು ಅಥವಾ ಇತಿಹಾಸವೆಂದು ನಿರ್ಧರಿಸಲು ಕಷ್ಟವಾಗುತ್ತದೆ ಎಂದು ಹೇಳಬಹುದಾಗಿದೆ.

ನಂತರ ಕವಿಯು ಗುರುಪ್ರಿಯ 'ಚೆನ್ನಮಲ್ಲಿಕಾರ್ಜುನ' ಎಂಬ ಅಂಕಿತದಲ್ಲಿ ತನ್ನ ಇಷ್ಟದೇವತಾ ಪ್ರಾರ್ಥನೆಯನ್ನು ಸಲ್ಲಿಸಿದ್ದಾನೆ. ಆರಂಭದ ಏಳು ಪದ್ಯಗಳಲ್ಲಿ ಚೆನ್ನಮಲ್ಲಿಕಾರ್ಜುನ ಅಥವಾ ಶಿವನನ್ನೇ ಸ್ತುತಿಸಿ, ಮುಂದೆ ವೀರೇಶನನ್ನು ಎರಡು ಪದ್ಯಗಳಲ್ಲಿ, ವೀರಭದ್ರನನ್ನು ಒಂದು ಪದ್ಯದಲ್ಲಿ ಸ್ತುತಿಸಿದ್ದಾನೆ. ನಂತರ ಪಂಡಿತಾರಾಧ್ಯನನ್ನು ಆರು ಪದ್ಯಗಳಲ್ಲಿ ಹೃದಯ ತುಂಬಿ ಸ್ತುತಿಸಿದ್ದಾನೆ. ನಂತರ ಆದಿಕವಿಗಳಾದ ಹರಿಹರ, ಅವನ ಅಳಿಯ ರಾಘವಾಂಕ, ಪಾಲ್ಕುರಿಕೆ ಸೋಮನಾಥ ಇವರುಗಳನ್ನು ಸ್ತುತಿಸಿದ್ದಾನೆ. ಹಾಗೆ ರಾಘವಾಂಕನ ಹರಿಶ್ಚಂದ್ರ ಕಾವ್ಯದ 'ಶ್ರೀಪತಿಗೆ ಸೊಬಗನುಡಪತಿಗೆ...' ಎಂಬ ಪದ್ಯವನ್ನು ಅನುಸರಿಸಿದ್ದಾನೆ.

*ಕ್ಷಿತಿಗೆ ಸೈರಣೆ ಸರಸ್ವತಿಗೆ ಗಂಭೀರ ವಾ*
*ಕ್ಷತಿಗೆ ಚಾತುರ್ಯ ಸುರಪತಿಗೆ ಭೋಗದಿವ್ಹಾ*
*ಪತಿಗೆ ರೂಪಂ ನಿಶಾಪತಿಗೆ ಶಾಂತಿಯುಮಳಕಾಪತಿಗೆ ವಿಭೂತಿ ಸಿರಿಯ ।*
*ಪಡಿನೆ ಸೊಬಗಂ ಸ್ವಾಹಾಪತಿಗೆ ತೇಜಂಗಳು*
*ನ್ನತಮಾಗಿ ಯರವಿಲ್ಲದಂದದಿಂದಾ ಚಂದ್ರ*
*ವತಿನೆ ಸ್ವಭಾವ ಸೌಂದರ್ಯಮೊಚ್ಚಾಸಮೆಂದು ಸರ್ವಜ್ಞಸದೆ*
*– ನೃತಿಸಲು ॥ (೮–೯೫)*

ಹೀಗೆ ಹರಿಶ್ಚಂದ್ರ ಕಾವ್ಯವಲ್ಲದೆ ಚಾಮರಸನ 'ಪ್ರಭುಲಿಂಗ ಲೀಲೆ'ಯ "ಕಾಳಸಿದ ಕಥೆಯಲ್ಲಿ..." ಎಂಬ (೧–೧೨) ಪದ್ಯವನ್ನು ನೆನಪಿಗೆ ತರುವ ಪರ್ವತ ಮಹಾತ್ಮ್ಯೆಯಲ್ಲೂ ಅಂತಹದ್ದೇ ಹೋಲಿಕೆ ಇರುವ ಇನ್ನೊಂದು ಪದ್ಯವನ್ನು ನೋಡಬಹುದು.

*ಕಾಳಗದ ಕಥೆ ಬೇಟೆ ತೋಟ ತುತ್ತದಿ ಕುದಿದು*
*ಬೀಳುವರ ಕಥೆಯಲ್ಲ ಜಾರ ಚೋರರ ಕಥೆಯ*

*ಹೇಳುವುದಿದಲ್ಲ ಮಿಕ್ಕಿನ ಕಾವ್ಯಾರಜನಾ ವಿಡಂಬನದ ಹೊಲಬಿದಲ್ಲ ॥*

*ಭಾಳ ಲೋಚನನ ನಿಜನಿಳೆಯವೆನ ಲೆಸೆವ ಶ್ರೀ*

*ಶೈಲದ ಮಹಾತ್ಮೆ ಕರಮಸೆಯ ಪಿಡಿದಿಪ್ಪರಸ*

*ದಾಳಿ ಸವಿದರಿಗೆ ಸುಖಮಾವಂತೆ ಕೇಳಿದಂಗಿರಿಹಪರದ ಸುಖಮೀವರು (೧-೩೭)*

ಇಲ್ಲಿ ಯಾರು ಯಾರನ್ನು ಅನುಕರಿಸಿದರು ಎಂದು ಹೇಳುವುದು ಕಷ್ಟವಾದರೂ ಚೆನ್ನವೀರಾಂಕ, ಚಾಮರಸ ಇಬ್ಬರು ಸಮಕಾಲೀನರೆಂಬುದು ಸ್ಪಷ್ಟವಾಗುತ್ತದೆ. ಹಾಗೆ ಕ್ರಿ.ಶ. ೧೪೧೩ ರ ಹೊತ್ತಿಗಾಗಲೇ ಚಾಮರಸನು ಸಾಕಷ್ಟು ಪ್ರಸಿದ್ಧಿಗೆ ಬಂದಿರಬೇಕೆಂದು ತೋರುತ್ತದೆ. ಹಾಗೆಯೇ ನೇಮಿಚಂದ್ರನ 'ಲೀಲಾವತಿ ಪ್ರಬಂಧ'ದಿಂದ ಮಲ್ಲಿಕಾರ್ಜುನನ 'ಸೂಕ್ತಿ ಸುಧಾರ್ಣವ'ದಿಂದ ಹಲವು ಪದ್ಯಗಳನ್ನು ಅನುಕರಿಸಿದಂತೆಯೂ ಕಂಡುಬರುತ್ತದೆ. ನಂತರ ಕಾವ್ಯದ ಉದ್ದಕ್ಕೂ ಪುರಾಣದ ವಸ್ತುವಿಷಯವೇ ಇದ್ದರೂ ಅತಿಯಾದ ವರ್ಣನೆಗಳಿಂದ ಹಾಗೂ ರೂಪಕಗಳಿಂದ ತುಂಬಿಹೋಗಿದೆ ಎನ್ನಬಹುದು.

ಸಹ್ಯಾದ್ರಿ ಖಂಡ ಹಲವಾರು ಕ್ಷೇತ್ರಗಳ, ತೀರ್ಥಗಳ ಕೈಪಿಡಿಯಾಗಿದೆ. ಕರ್ನಾಟಕ ರಾಜ್ಯಕ್ಕೆ ಸೇರಿದ ಉತ್ತರ ಕನ್ನಡ, ದಕ್ಷಿಣ ಕನ್ನಡ, ಶಿವಮೊಗ್ಗ, ಕೊಡಗು ಜಿಲ್ಲೆಯ ಮತ್ತು ಕೇರಳದಲ್ಲಿ ವ್ಯಾಪಿಸಿರುವ ಸಹ್ಯಾದ್ರಿ ಪ್ರದೇಶದ ಹಲವು ಕ್ಷೇತ್ರಗಳ ಸಮೀಕ್ಷೆಯಿಂದ ಕೂಡಿದೆ. ಈ ಎಲ್ಲಾ ಕ್ಷೇತ್ರಗಳ ಸುದೀರ್ಘವಾದ ವಿವರವನ್ನು ನೀಡುವ ಒಂದೇ ಕೃತಿಯೆಂದರೆ ಸಹ್ಯಾದ್ರಿಖಂಡ. ಇದರ ಕರ್ತೃ ಯಾರೆಂಬುವುದು ಇನ್ನೂ ನಿಕಟವಾಗಿ ತಿಳಿದುಬಂದಿಲ್ಲ. ಆದರೆ "ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಹಸ್ತಪ್ರತಿಗಳ ವರ್ಣನಾಕ್ಷರ ಸೂಚಿ ಭಾಗ-೪ರಲ್ಲಿ ಸಹ್ಯಾದ್ರಿ ಖಂಡದ ಕರ್ತೃ ಬಾಲಭಾಸ್ಕರ (?) ಎಂದು ನಮೂದಿಸಲಾಗಿದೆ. ಅದನ್ನು ಸಹ್ಯಾದ್ರಿ ಖಂಡದಲ್ಲಿ ಬರುವ ಆರಂಭ ಪದ್ಯದಲ್ಲಿ ಬರುವ ಬಾಲಭಾಸ್ಕರ ಶಬ್ದದ ಅರ್ಥವನ್ನು ಸೂಚಿಕಾರರು ತಪ್ಪಾಗಿ ಗ್ರಹಿಸಿರುವಂತಿದೆ. ಇಲ್ಲಿ ಬಾಲಭಾಸ್ಕರ ಎಂದರೆ 'ಎಳೆಯ ಸೂರ್ಯ' ಎಂಬ ಅರ್ಥವೇ ಹೊರತು ಕವಿಯ ಹೆಸರಾಗುವುದಿಲ್ಲ. ಕವಿ ತನ್ನ ಕಾವ್ಯವು ಮೂಲಕ್ಕೆ ಎಷ್ಟು ನಿಷ್ಠವಾಗಿದೆ ಅಥವಾ ಸಂಗ್ರಹವಾಗಿದೆ ಎಂದು ತಿಳಿಸುವುದಕ್ಕಾಗಿ 'ಬಾಲಕರು ಕನ್ನಡಿ ಹಿಡಿದರೆ ಅಲ್ಲಿ ಬಾಲಭಾಸ್ಕರ ಹೊಳೆಯುವಂತೆ' ಎಂಬ ದೃಷ್ಟಾಂತವನ್ನು ಪ್ರಯೋಗಿಸಿದ್ದಾನೆ"[೪೦] ಎಂದು ವೈ.ಸಿ.ಭಾನುಮತಿಯವರು ಪ್ರಸ್ತಾವನೆಯಲ್ಲಿ ಹೇಳಿಕೊಂಡಿದ್ದಾರೆ. ಆದ್ದರಿಂದ ಇಲ್ಲಿ ಕವಿಯ ಹೆಸರು ಗುರುತಿಸಲು ಆಧಾರಗಳಿಲ್ಲದಿರುವುದರಿಂದ ಆತ ಅನಾಮಧೇಯನಾಗಿಯೇ ಉಳಿದಿದ್ದಾನೆ. ಈ ಕೃತಿಯ ಕೆಲವು ಕಡೆಗಳಲ್ಲಿ ತುಂಬಾ ಸಂದಿಗ್ಧವಾಗಿದೆ. ಏಕೆಂದರೆ ಸಹ್ಯಾದ್ರಿಖಂಡದ

ತರುವಾಯ ಬಂದ ಕನ್ನಡ ಕೃತಿಗಳಲ್ಲಿ ಈ ಗ್ರಂಥದ ಉಲ್ಲೇಖವಿಲ್ಲ. ಈತ ಕೂಡ ಯಾವ ಹಿರಿಯ ಕನ್ನಡ ಕವಿಗಳನ್ನು ಹೆಸರಿಸಿಲ್ಲ. ಕೆಲವು ಹಸ್ತಪ್ರತಿಗಳ ದೃಷ್ಟಿಯಿಂದ ಕೃತಿಯ ಕಾಲವನ್ನು ಕ್ರಿ.ಶ. ೧೭೮೦ ಎಂದು ತಾತ್ಕಾಲಿಕವಾಗಿ ಅಂಗೀಕರಿಸಲಾಗಿದೆ ಎಂಬುದನ್ನು ಸಂಪಾದಕರು ಹೇಳಿಕೊಂಡಿದ್ದಾರೆ.

ಈ ಕೃತಿಯಲ್ಲಿ ಉಕ್ತವಾಗಿರುವ ಕ್ಷೇತ್ರಗಳಲ್ಲಿ ಪ್ರಸಿದ್ಧ ರಾಜಮನೆತನಗಳನ್ನು ಗುರುತಿಸಬಹುದು. ಕದಂಬ, ಆಲೋಪ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ ಮೊದಲಾದ ರಾಜಮನೆತನಗಳು, ಪಾಳೆಯಗಾರರು ಮತ್ತು ಬ್ರಿಟೀಷರ ಆಡಳಿಕ್ಕೆ ಸಂಬಂಧಪಟ್ಟಿವೆ ಎಂದು ರಾಜಕೀಯವಾಗಿ ಗುರುತಿಸಿಕೊಂಡರೆ, ಭೌಗೋಳಿಕವಾಗಿ ಭಾರತದ ಭೂಗೋಳದಲ್ಲಿ 'ಪಶ್ಚಿಮ ಘಟ್ಟಗಳ ಉತ್ತರ ಭಾಗವನ್ನು ಸಹ್ಯಾದ್ರಿ' ಎಂದು ಕರೆಯಲಾಗಿದೆ. ಸಹ್ಯಾದ್ರಿಯು ಉತ್ತರದಿಂದ ದಕ್ಷಿಣಕ್ಕೆ ಸುಮಾರು ೯೬೬ ಕಿ.ಮೀ. ಹರಡಿದೆ. ಕರ್ನಾಟಕ ರಾಜ್ಯದಲ್ಲಿ ಜಿಲ್ಲೆಯ ಖಾನಾಪುರದಿಂದ ಆರಂಭವಾಗಿ ಕೊಡಗು ಜಿಲ್ಲೆಯ ಬ್ರಹ್ಮಗಿರಿಯವರೆಗಿನ ಪಶ್ಚಿಮ ಘಟ್ಟಗಳಿಗೆ ಸಹ್ಯಾದ್ರಿ ಎಂಬ ಹೆಸರು ಪಡೆದಿದೆ. ಇದು ದಖನ್ ಪ್ರಸ್ಥಭೂಮಿ ಮತ್ತು ಕರಾವಳಿಯ ಮೈದಾನ ಪ್ರದೇಶಗಳ ನಡುವೆ ಗೋಡೆಯಂತಿದೆ. ಸಹ್ಯಾದ್ರಿಯ ಉತ್ತರ ಭಾಗ ದಟ್ಟವಾದ ಅರಣ್ಯಗಳಿಂದ ಕೂಡಿದೆ. ಅರಬ್ಬಿ ಸಮುದ್ರ ಕೆಲವೆಡೆ ಸಹ್ಯಾದ್ರಿಯ ಸಮೀಪದಲ್ಲಿದೆ. ಅಂದರೆ ಕೇವಲ ೮ ರಿಂದ ೧೬ ಕಿ.ಮೀ. ಅಂತರದಲ್ಲಿದೆ. ಉಳಿದೆಡೆಗಳಲ್ಲಿ ಸಮುದ್ರದಿಂದ ೮೦–೧೬೧ ಕಿ.ಮೀ. ದೂರದಲ್ಲಿದೆ. ಸಹ್ಯಾದ್ರಿ ಶೃಂಗವು ಸಮುದ್ರ ಮಟ್ಟದಿಂದ ಸುಮಾರು ೧೫೦೦ ಮೀ. ಎತ್ತರದಲ್ಲಿದೆ. ಇದು ದಕ್ಷಿಣದಲ್ಲಿ ನೀಲಗಿರಿ ಶ್ರೇಣಿಯೊಡನೆ ಸೇರಿಕೊಳ್ಳುತ್ತದೆ.

ಆದರೆ ಈ ಪ್ರದೇಶಕ್ಕೆ ಸ್ಥಳಪುರಾಣವನ್ನು ಕಟ್ಟಿಕೊಡಲಾಗಿದೆ. ಅದೆಂದರೆ ಸಹ್ಯಾದ್ರಿಯ ತೀರ ಪ್ರದೇಶವು ಪರಶುರಾಮ ಸೃಷ್ಟಿ ಎಂದು ಪುರಾಣಗಳ ಅಭಿಮತ. ಸಾಗರನೆಂಬ ರಾಜನು ಅವನು ಒಮ್ಮೆ ಅಶ್ವಮೇಧಯಾಗ ಮಾಡಲು ನಿಶ್ಚಯಿಸಿದ. ಈ ಯಾಗ ಮಾಡಲು ಇಡೀ ಭೂಮಂಡಲವನ್ನೇ ಜಯಿಸಿರಬೇಕೆಂಬ ನಿಯಮವಿದೆ. ಅಂತೆಯೇ ಸಾಗರನು ಸೈನ್ಯದ ಸಮೇತ ಯಾಗದ ಕುದುರೆಯನ್ನು ಕಳಿಸಿದನು. ಅದನ್ನು ದೇವತೆಗಳು ಅಪಹರಿಸಿದರು. ಕಾರಣ ಆ ಯಾಗವನ್ನು ಮಾಡಿದರೆ ಸಾಗರನು ಬಲಿಷ್ಠನಾಗುವನೆಂದು ಮುಂಚಿತವಾಗಿ ಅರಿತು, ಈ ಯಾಗದ ಕುದುರೆಯನ್ನು ಹುಡುಕಿ ತರಲು ಅವನು ತನ್ನ ಮಕ್ಕಳಿಗೆ ಹೇಳಿದನು. ಆತನ ಮಕ್ಕಳು ಎಲ್ಲ ಕಡೆಗಳಲ್ಲೂ ಹುಡುಕಿದರು. ಕುದುರೆ ಸಿಗಲಿಲ್ಲ. ಆದ್ದರಿಂದ ಭೂಮಿಯನ್ನು ಅಗಿಯಲಾರಂಭಿಸಿದರು. ಆಗ ಸಮುದ್ರ

ಭೂಮಿಯೊಳಕೆ ನುಗ್ಗಿತು. ಅಲ್ಲದೆ ಸಹ್ಯಾದ್ರಿಯ ಪಶ್ಚಿಮಕ್ಕೆ ಇರುವ ಪ್ರದೇಶ ಸಮುದ್ರದ ಪಾಲಾಯಿತು. ಇದರಿಂದ ಪರಶುರಾಮನನ್ನು ಮುನಿಗಳು ಸಮುದ್ರ ರಾಜನಿಂದ ತಾವು ನೆಲೆಸಿದ್ದ ಬಹುಭಾಗವನ್ನು ಬಿಡಿಸಿ ಕೊಡು ಎಂದು ಕೇಳಿಕೊಂಡರು. ಆಗ ಪರಶುರಾಮನು ಕುಟಚ ಪರ್ವತದಲ್ಲಿ ನಿಂತು ಸಮುದ್ರರಾಜನನ್ನು ಸ್ತುತಿಸಿದನು. ಸಮುದ್ರರಾಜನು ಪ್ರತ್ಯಕ್ಷನಾಗಿ ವಿಚಾರಿಸಿದಾಗ ಪರಶುರಾಮನು ಆತನಿಗೆ 'ನಾನು ಈ ಪರ್ವತದಿಂದ ಕೊಡಲಿಯನ್ನು ಎಸೆಯುತ್ತೇನೆ. ಅದು ಎಲ್ಲಿಗೆ ಹೋಗಿ ಬೀಳುವುದೋ ಅಷ್ಟು ಪ್ರದೇಶವನ್ನು ನೀಡಬೇಕು' ಎಂದನು. ಅಂತೆಯೇ ಕೊಡಲಿಯನ್ನು ಸಮುದ್ರದೆಡೆಗೆ ಎಸೆದನು. ಸಮುದ್ರವು ಆ ಸ್ಥಳದಿಂದ ಹಿಂದೆ ಸರಿಯಿತು ಎಂದು ಪುರಾಣದಲ್ಲಿ ಸಹ್ಯಾದ್ರಿಯು ಪ್ರಸಿದ್ಧಿಯಾಗಿದೆ. ಅದಕ್ಕೆ ಪೂರಕವಾಗಿ 'ಕಾರವಾರದ ಹಾಲಕ್ಕಿಗೌಡ' ಜನಾಂಗದಲ್ಲಿ ಸಹ ಈ ಕತೆ ಪ್ರಚಲಿತದಲ್ಲಿರುವುದು ಕಂಡುಬರುತ್ತದೆ.

ಆದರೆ ಭೌಗೋಳಿಕವಾಗಿ ಭೂ ವೈಜ್ಞಾನಿಕ ವ್ಯತ್ಯಾಸಗಳು ಈ ಕಥೆಗೆ ಕಾರಣವಾಗಿರಬಹುದು. ಸುಮಾರು ವರ್ಷಗಳ ಹಿಂದೆ ಸಮುದ್ರ ಮತ್ತು ಘಟ್ಟ ಪ್ರದೇಶ ಸಮಾನಾಂತರ ರೇಖೆಯಲ್ಲಿದ್ದವು. ಪಶ್ಚಿಮ ಘಟ್ಟ ಪ್ರದೇಶ ಮತ್ತು ಸಮುದ್ರದ ಮಧ್ಯೆ ಸ್ತರ ಭಾಗಗಳು ಉಂಟಾಗಿ ಘಟ್ಟ ಪ್ರದೇಶ ಮೇಲೆದ್ದು ಸಹ್ಯಾದ್ರಿಯ ಸೃಷ್ಟಿಗೆ ಕಾರಣವಾಯಿತೆಂದು ಭೂವೈಜ್ಞಾನಿಕ ಸಂಶೋಧನೆಗಳು ತಿಳಿಸುತ್ತವೆ. ಇಂತಹ ಸಹ್ಯಾದ್ರಿಯು ಐತಿಹಾಸಿಕವಾಗಿಯೂ ಮಹತ್ವ ಪಡೆದಿದೆ. ಒಂದು ಕಾಲದಲ್ಲಿ ಇದು ತುಳುನಾಡಿನ ಮೇರೆಯಾಗಿತ್ತು. ರಾಜ ಕೇಸರಿ ಪಿಮ್ಮ ಕುಲೋತ್ತುಂಗ ಚೋಳ ದೇವನರಾಜ್ಯ ಸಹ್ಯಾದ್ರಿಯ ಮಧ್ಯಭಾಗದವರೆಗೆ ವಿಸ್ತರಿಸಿಕೊಂಡಿತ್ತೆಂದು ತಿಳಿದುಬರುತ್ತದೆ. ಸಹ್ಯಾದ್ರಿಯನ್ನು ಶಾತವಾಹನ ವಂಶದ ಅರಸನೊಬ್ಬ ಸಹ್ಯವನ್ನು ಗೆದ್ದಿದ್ದನೆಂದು ತಿಳಿದುಬರುತ್ತದೆ. ಹಾಗೆ ಈ ಕೃತಿಯಲ್ಲಿ ಬರುವ ಅನೇಕ ಪಟ್ಟಣಗಳು, ಕ್ಷೇತ್ರಗಳು, ನದಿಗಳು ಪುರಾತನ ಕಾಲದಿಂದಲೂ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಇವು ಪ್ರಾದೇಶಿಕವಾಗಿ, ಐತಿಹಾಸಿಕವಾಗಿ, ಪೌರಾಣಿಕವಾಗಿಯೇ ಪ್ರಸಿದ್ಧಿಯನ್ನು ಪಡೆದಿವೆ. "ಇಲ್ಲಿ ಬರುವ ಪ್ರದೇಶಗಳನ್ನು ಬಲಿಷ್ಠರಾದ ರಾಜರು ತಮ್ಮ ಅಧೀನದಲ್ಲಿರಿಸಿಕೊಂಡಿದ್ದರು. ಹಾಗೆಯೇ ತಮಗಿಂತಲೂ ಬಲಿಷ್ಠವಾದ ರಾಜಮನೆತನಗಳ ಏಳುಬೀಳಿಗನುಸಾರವಾಗಿ ತಮ್ಮ ನಿಷ್ಠೆಯನ್ನು ಮಾರ್ಪಡಿಸಿಕೊಳ್ಳುತ್ತಿದ್ದರು. ಅದರಲ್ಲಿ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು, ಬಿಜಾಪುರದ ರಾಜರು, ಮರಾಠರು ಈ ರಾಜರುಗಳು ಬಲಾಬಲಗಳ ಕ್ರಮವನ್ನನುಸರಿಸಿ ಆಗಾಗ್ಗೆ ತಮ್ಮ ಧೋರಣೆಗಳನ್ನು ಬದಲಾವಣೆ ಮಾಡಿಕೊಂಡು ಶಕ್ತಿಯುತ ಬಣಗಳನ್ನು ಸೇರುತ್ತಿದ್ದರು.

ಈ ಪಟ್ಟಣ ಪ್ರದೇಶದ ಐತಿಹಾಸಿಕ ಕಾಲದ ಸಾಂಸ್ಕೃತಿಕ ಅಭಿವೃದ್ಧಿ ಬಹು ಉನ್ನತವಾಗಿತ್ತು"[೪೧] ಎಂದು ಸಹ್ಯಾದ್ರಿ ಮಧ್ಯಂತರದ ಪ್ರದೇಶಗಳ ಬಗೆಗೆ ಮತ್ತು ರಾಜಕೀಯ ಚರಿತ್ರೆ ಬಗೆಗೆ ತಿಳಿಸಲಾಗಿದೆ.

"ಕೇರಳದ ಉತ್ತರಕ್ಕಿರುವ ಎತ್ತರವಾದ ಪಶ್ಚಿಮ ಘಟ್ಟಕ್ಕೆ ಸಹ್ಯಾದ್ರಿ ಎಂಬ ಪದ ಉಪಯೋಗಿಸಿ 'ಸಹ್ಯಾದ್ರಿ ಖಂಡವೆಂದು' ಕರೆದಿರುವುದು ಕರ್ನಾಟಕದ ಕರಾವಳಿಗೆ ಅನ್ವಯಿಸುವಂತೆ ಅಶೋಕನ ಕಾಲದ ಸತಿಯ ಪುತ್ರವು ಸಂಸ್ಕೃತದ 'ಸಹ್ಯಪುತ್ರ' ಪ್ರಕೃತ ರೂಪವಾಗಿರಬೇಕು. ಆದರೆ ಪಾಲಿಭಾಷೆಯಲ್ಲಿ ಪುತ ಎಂದರೆ 'ಪುತ್ರ' ಎಂಬ ಅರ್ಥವಿದ್ದು ಜನಾಂಗಕ್ಕೆ ಸೇರಿದವನೆಂದು ಅರ್ಥ. ಆದುದರಿಂದ ಸಹ್ಯಪುತ್ರವು ಸಹ್ಯಾದ್ರಿಯಲ್ಲಿ ಮತ್ತು ಅದರ ಪಶ್ಚಿಮ ಕರಾವಳಿ ಪ್ರದೇಶದಲ್ಲಿ ಪ್ರಾಚೀನ ಕಾಲದಿಂದ ನೆಲೆಸಿರುವ ತುಳುವರಿರಬಹುದು"[೪೨] ಎಂಬುದು ವಿದ್ವಾಂಸರ ಅಭಿಮತವಾಗಿದೆ. ಆದರೆ ಮಂಜೇಶ್ವರ ಗಣಪತಿ ರಾವ್ ಐಗಳ್ "ಪರಶುರಾಮನು ಪ್ರಾಗಿತಿಹಾಸ ಕಾಲದವನು"[೪೩] ಎಂದು ಅಭಿಪ್ರಾಯಪಡುತ್ತಾರೆ. ಸಹ್ಯಾದ್ರಿ ಖಂಡದಲ್ಲಿ ಬರುವ ಹಲವಾರು ಕ್ಷೇತ್ರಗಳನ್ನು ಪ್ರಮುಖ ರಾಜರು ಆಳ್ವಿಕೆ ಮಾಡಿದರು. ಜೊತೆಗೆ ದಾನದತ್ತಿಗಳನ್ನು ನೀಡಿರುವ ಬಗ್ಗೆ ಕೃತಿಗಳಲ್ಲಿ ಯಾವುದೇ ಮಾಹಿತಿ ಇಲ್ಲ. ಆದರೂ ಐತಿಹಾಸಿಕವಾಗಿ ಈ ಮಹಾತ್ಮೈಯನ್ನು ಗುರುತಿಸಲಾಗಿದೆ.

"ಕ್ರಿ.ಶ. ೨ನೇ ಶತಮಾನದ ಪೂರ್ವಾರ್ಧದಲ್ಲಿ ಆಳಿದ ಶಾತವಾಹನರ ಚಕ್ರವರ್ತಿ ಗೌತಮೀಪುತ್ರ ಶಾತಕರ್ಣಿಯು ನಾಸಿಕ್ ಶಿಲಾಶಾಸನದಲ್ಲಿ ಮಲಯಾದ್ರಿ ಮತ್ತು ಸಹ್ಯಾದ್ರಿಗಳು ಅವನ ಅಧೀನದಲ್ಲಿದ್ದವೆಂದು ದಾಖಲಾಗಿದೆ."[೪೪] ಹಾಗೆ ನಂತರದಲ್ಲಿ ಬಂದ ರಾಜಮನೆತನವೆಂದರೆ ಕದಂಬರು. ಇವರು "ಕ್ರಿ.ಶ. ೪ನೇ ಶತಮಾನದಲ್ಲಿ ಬನವಾಸಿಯಲ್ಲಿ ಸ್ಥಾಪಿತವಾದ ಮಯೂರಶರ್ಮನ ರಾಜ್ಯವು ತುಳುನಾಡನ್ನು ತನ್ನ ಆಡಳಿತದ ಎಲ್ಲೆಯಲ್ಲಿ ಹೊಂದಿತ್ತೆಂದು ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ. ಅಲ್ಲದೆ ಕ್ರಿ.ಶ. ೫ನೇ ಶತಮಾನದ ಮಧ್ಯಭಾಗದಲ್ಲಿ ತುಳುವ ನಾಡು ಕದಂಬರ ಅಧೀನದಲ್ಲಿತ್ತೆಂದು ತಿಳಿದುಬರುತ್ತದೆ. ಸಹ್ಯಾದ್ರಿ ಖಂಡದಲ್ಲಿ ಮಯೂರಶರ್ಮನು ಅಹಿಚ್ಛೇತ್ರದಿಂದ ಬ್ರಾಹ್ಮಣರನ್ನು ತುಳುನಾಡಿಗೆ ಕರೆತಂದು ಅವರನ್ನು ಅಲ್ಲಿಯೇ ೩೨ ಗ್ರಾಮಗಳಲ್ಲಿ ನೆಲೆಗೊಳಿಸಿದರೆಂದು ಸ್ಥಳ ಪುರಾಣಗಳಲ್ಲಿ ದಾಖಲಾಗಿದೆ."[೪೫] ಸಹ್ಯಾದ್ರಿ ಖಂಡದಲ್ಲಿ ಬರುವ ಪ್ರಮುಖ ಕ್ಷೇತ್ರಗಳಲ್ಲಿ ಬನವಾಸಿಯು ಒಂದು. ಇದರಲ್ಲಿ ವರದಾ ನದಿಯ ದಡದಲ್ಲಿ ಮಧುಕೇಶ್ವರ ದೇವಾಲಯ ಪ್ರಸಿದ್ಧವಾದುದು. ಕದಂಬರು ಈ ದೇವಾಲಯವನ್ನು ಕಟ್ಟಿದ್ದರೆಂದು ವಿದ್ವಾಂಸರು ಊಹಿಸಿದ್ದಾರೆ. ಹಾಗೆ

ಈ ದೇವಾಲಯದ ಗರ್ಭಗುಡಿ ಹೊಯ್ಸಳಶೈಲಿಯನ್ನು, ಕದಂಬರ, ಚಾಲುಕ್ಯರ ರಚನೆಗೆ ಶಿಖರವು ಕದಂಬ ಶಿಲ್ಪವನ್ನು ಪ್ರತಿನಿಧಿಸುತ್ತಿವೆ. ಮಧುಕೇಶ್ವರ ದೇವಾಲಯವು ಪೂರ್ವದಲ್ಲಿ ವೈಷ್ಣವ ದೇವಾಲಯ. ಇಲ್ಲಿಯ ಮೂಲಮೂರ್ತಿ ಚೆನ್ನಕೇಶವ.

ಆದರೆ ವೀರಶೈವ ಧರ್ಮದ ಪ್ರಭಾವದಿಂದ ಮಧುಕೇಶ್ವರ ಸ್ಥಾಪನೆಯಾಗಿರಬಹುದೆಂಬ ಊಹೆಗಳಿವೆ. ಹಾಗೆ ಸ್ವಾದಿ ಅರಸರ ಆರಾಧ್ಯದೈವ ಬನವಾಸಿಯ ಮಧುಕೇಶ್ವರ. ಅವರು ಮಧುಕೇಶ್ವರ ದೇವಾಲಯಕ್ಕೆ ಹಲವು ಕಾಣಿಕೆಗಳನ್ನು ನೀಡಿರುವುದು ಇತಿಹಾಸದಿಂದ ತಿಳಿಯುತ್ತದೆ. ಹಾಗೆ ಕ್ರಿ.ಶ. ೧೭೬೪ಳ ಮೈಸೂರಿನ ದೊರೆ ಹೈದರಾಲಿ ಸೊದೆಯ ಮೇಲೆ ಮುತ್ತಿಗೆ ಹಾಕಿ ಆಗ ಸ್ವಾದಿ ಅರಸ ಸದಾಶಿವನು ಗೋವಾದ ಕಡೆಗೆ ಓಡಿ ಹೋದನು. ನಂತರ ಸ್ವಾದಿ ರಾಜರ ಪತನವಾಯಿತು. ಈಗ ಅಲ್ಲಿ ಜೀರ್ಣದ್ಧಾರವಾದ ಕೋಟೆಯನ್ನು ನಿರ್ಮಿಸಲಾಗಿದೆ. ಹಾಗೆ ದಕ್ಷಿಣ ಕಾಶಿಯೆಂದು ಪ್ರಸಿದ್ಧ ಗೋಕರ್ಣದ ಮಹಾಬಲೇಶ್ವರ ದೇವಾಲಯವು ಕರ್ನಾಟಕದ ಕಡಲ ತೀರದ ದೇವಾಲಯಗಳಲ್ಲಿ ಮುಖ್ಯವಾದುದು. ಇದರ ನಿರ್ಮಾತೃ ಕದಂಬ ವಂಶದ ಮಯೂರವರ್ಮನೆಂಬ ಹೇಳಿಕೆಯಿದೆ. ಆದರೆ ಈ ದೇವಾಲಯದ "ಸಭಾಮಂಟಪ ಮತ್ತು ಚಂದ್ರಶಾಲೆಯಲ್ಲಿ ಕುಂದಾಪುರದ ಹಲಸಿನಾಡು ಕುಟುಂಬಕ್ಕೆ ಸೇರಿದ ವಿಶ್ವೇಶ್ವರಯ್ಯನೆಂಬ ಬ್ರಾಹ್ಮಣ ಸುಮಾರು ೩೦೦ ವರ್ಷಗಳ ಹಿಂದೆ ಕಟ್ಟಿಸಿದನೆಂದು ದ್ವಾರದ ಮೇಲಿನ ಶಿಲಾಶಾಸನದಿಂದ ವ್ಯಕ್ತವಾಗಿದೆಯಂತೆ"[೪೬]

ಕದಂಬರಷ್ಟೇ ಅಲ್ಲದೆ ಅಳುಪರ, ಚೋಳರು, ಪಾಂಡ್ಯರು, ಹೊಯ್ಸಳರು, ಮೈಸೂರು ಅರಸರು, ಕೆಳದಿ ಅರಸರು ಆಳ್ವಿಕೆ ಮಾಡಿರುವುದು ಮತ್ತು ದಾನದತ್ತಿ ದೇವಾಲಯಗಳ ನಿರ್ಮಾಣ ಮಾಡಿರುವುದು ತಿಳಿಯಬರುತ್ತದೆ. ಗೋಕರ್ಣದಲ್ಲಿ ಹೊಯ್ಸಳರ ಕಾಲಕ್ಕೆ ಸೇರಿದ ಯೋಗಾ ನರಸಿಂಹನ ದೇವಾಲಯವಿದೆ. ಇದು ಕೋಟಿತೀರ್ಥದ ಬಳಿಯಿದೆ. ಇಲ್ಲಿ ವಿಜಯನಗರದ ಅರಸರ ಕಾಲಕ್ಕೆ ಸೇರಿದ ಹಲವು ಶಿಲ್ಪಗಳು ಸಿಗುತ್ತವೆ ಎಂದು ಶಾಸನಗಳಲ್ಲಿ ಉಲ್ಲೇಖವಿದೆ. ಶಂಕರಾಚಾರ್ಯರು ಮತ್ತು ಮಧ್ವಾಚಾರ್ಯರು ಈ ಕ್ಷೇತ್ರವನ್ನು ಸಂದರ್ಶಿಸಿದ್ದರು. ಹಾಗೆ ವಿಜಯನಗರದ ಅರಸರು ಇಲ್ಲಿನ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಿರುವುದಕ್ಕೆ ಚರಿತ್ರೆಯಲ್ಲಿ ಮಾಹಿತಿಗಳು ಅಲ್ಲಲ್ಲಿ ಸಿಗುತ್ತವೆ.

ನಂತರ "ಕೊಲ್ಲೂರಿನಲ್ಲಿ ಮೂಕಾಂಬಿಕೆಯ ಮೂರ್ತಿಯನ್ನು ಶಂಕರಾಚಾರ್ಯರು ಪ್ರತಿಷ್ಠಾಪಿಸಿದರೆಂದು ಸ್ಥಳಕತೆಯಿದೆ. ಆದರೆ ಈ ಬಗೆಯ ಶಿಲ್ಪ ೧೪ನೇ ಶತಮಾನಕ್ಕಿಂತ ಪ್ರಾಚೀನವಲ್ಲವೆಂದು ಪಿ.ಗುರುರಾಜಭಟ್ಟರು ಅಭಿಪ್ರಾಯಪಟ್ಟಿದ್ದಾರೆ."[೪೭] ಹಾಗೆ ಶಂಕರಾಚಾರ್ಯರು ಕೊಡಚಾದ್ರಿಯಲ್ಲಿ ಸರಸ್ವತಿಯನ್ನು ಕುರಿತು ತಪಸ್ಸು ಮಾಡಿ ಅಷ್ಟ

ಸಿದ್ಧಿ ಪಡೆದರೆಂದು ಪ್ರತೀತಿ ಇದೆ. ಅದಕ್ಕೆ ಪ್ರತಿಯಾಗಿ ಮೂಕಾಂಭಿಕಾ ದೇವಾಲಯದ ಗರ್ಭಗುಡಿಯ ಹಿಂದಿರುವ ಒಂದು ಕೋಣೆಯನ್ನು ಶಂಕರಾಚಾರ್ಯರು ಕುಳಿತು ತಪಸ್ಸು ಮಾಡಿದ ಸ್ಥಳವೆಂದು ಇಂದಿಗೂ ಹೇಳುತ್ತಾರಂತೆ.

ಆದರೆ ಕೊಲ್ಲೂರು ದೇವಾಲಯ ಹೊನ್ನ ಕಂಬಳಿಯ ಪಾಳೆಗಾರ ಬಂಕಿ ಅರಸನ ವಂಶದ ಸಂಕಣ್ಣ ಸಾಮಂತರ ಅಳಿಯ ವೆಂಕಣ್ಣ ಸಾಮಂತ ಕ್ರಿ.ಶ.೧೨೧೮ರಲ್ಲಿ ದೇವಾಲಯವನ್ನು ಕಟ್ಟಿಸಿದನೆಂದು ಉಲ್ಲೇಖ ದೊರೆಯುತ್ತದೆ. ನಂತರ ಕೆಳದಿ ಅರಸರ ಆರಾಧ್ಯ ದೇವತೆಯಾಗಿದ್ದಳು. ಆದ್ದರಿಂದ ಹಲವಾರು ದಾನದತ್ತಿಗಳನ್ನು ನೀಡಿದ್ದಾರೆ ಎಂದು ತಿಳಿದುಬರುತ್ತದೆ. ಆದರೆ "ಕ್ರಿ.ಶ.೧೭೫೫ರಲ್ಲಿ ಕಣ್ಣಸೂರಿನ ಆರ್ಕಲ್ ಸುಲ್ತಾನ ಆಲಿರಾಜ ಮತ್ತು ಮರಾಠಿಯ ಮುರಾರಿರಾಯರು ಕೊಲ್ಲೂರನ್ನು ಮುತ್ತಿಗೆ ಹಾಕಿದ್ದರು. ಆಗ ದೇವಾಲಯದ ಮುಖ್ಯಸ್ಥನ ಹೆಂಡತಿ ಪ್ರಾಣಾರ್ಪಣೆ ಮಾಡಿ ದೇವಾಲಯದ ಆಭರಣಗಳನ್ನು ರಕ್ಷಿಸಿದಳೆಂದು ಪ್ರಚಲಿತವಿರುವ ಘಟನೆಯನ್ನು ಆಧರಿಸಿ ಶ್ರೀನಿವಾಸರಾವ್ ಕೊರದೆ ಅವರು 'ಕೊಲ್ಲೂರು ಮೂಕಾಂಭಿಕಾ' ಎಂಬ ಕಥೆಯನ್ನು ಬರೆದಿದ್ದಾರೆ."[೮೮]

ಶಂಕರನಾರಾಯಣ ದೇವಾಲಯ ಕರ್ತೃ ಗೋರಾಷ್ಟ್ರದ ರಾಜ ಸುಲೋಚನ ಎಂಬ ಹೇಳಿಕೆಯಿದೆ. ಆತ ರತ್ನಖಚಿತ ಪಲ್ಲಕ್ಕಿ ಮಂಟಪಗಳನ್ನು ದಾನವಾಗಿ ನೀಡಿದನೆಂಬ ನಂಬಿಕೆಯಿದೆ. ಕ್ರಿ.ಶ. ೧೫೬೩ರಲ್ಲಿ ಕೆಳದಿ ನಾಯಕರು ಈ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿದ್ದರೆಂಬುದಕ್ಕೆ ದಾಖಲೆಗಳಿವೆ. ದೇವಾಲಯದ ಮುಂದೆ ಒಂದು ಭವ್ಯವಾದ ಗಂಟೆ ಇದೆ. ಇದನ್ನು ಟಿಪ್ಪುಸುಲ್ತಾನ್ ಕ್ರಿ.ಶ. ೧೭೮೨ರಲ್ಲಿ ಅರ್ಪಿಸಿದನೆಂದು ತಿಳಿದುಬರುತ್ತದೆ. ಹಾಗೆ ಬಸುರೂರಿನ ಪ್ರಧಾನ ದೇವಾಲಯವಾಗಿ ಮಹಲಿಂಗೇಶ್ವರ ಲಿಂಗವಿದೆ. ಸಹ್ಯಾದ್ರಿ ಖಂಡದಲ್ಲಿ 'ವಸುಪುರ' ಎಂಬ ರೂಪದಲ್ಲಿ ಉಲ್ಲೇಖವಾಗಿದೆ. ಈ ಊರಲ್ಲಿ ಏಳು ಕೆರೆಗಳಿಂದ ಅವು ವಿಜಯನಗರದ ಅರಸರ ಕಾಲದಲ್ಲಿ ನಿರ್ಮಾಣವಾದವೆಂದು ತಿಳಿದುಬರುತ್ತವೆ.

ತುಳುನಾಡಿನ ಸಪ್ತಕ್ಷೇತ್ರಗಳಲ್ಲಿ ಕುಂಭಾಸಿಯು ಒಂದು. ಇಲ್ಲಿ ಹರಿಹರ ದೇವಾಲಯವಿದೆ. ಇದಕ್ಕೆ ಪುರಾಣದಲ್ಲಿ ಗೌತಮಕ್ಷೇತ್ರವೆಂದು ಖ್ಯಾತವಾಗಿದೆ. ಆದರೆ ಇದು ಕಲ್ಯಾಣದ ಚಾಲುಕ್ಯರ ಕಾಲದ ದೇವಾಲಯವೆಂಬ ಅಭಿಪ್ರಾಯವಿದೆ. ನಂತರ ಸುಬ್ರಹ್ಮಣ್ಯ ಕ್ಷೇತ್ರ ಅಥವಾ ಪುಷ್ಪಗಿರಿ ಎಂಬ ಹೆಸರುಗಳಿವೆ. ಈ ಕ್ಷೇತ್ರಕ್ಕೆ ಹಲವಾರು ಐತಿಹ್ಯಗಳಿವೆ. ಅದರಾಚೆಗೆ ಚರಿತ್ರೆಯನ್ನು ನೋಡುವುದಾದರೆ "ವಿಜಯನಗರದ ೨ನೇ ರಾಜಬುಕ್ಕನಿಗೆ ಸಂಬಂಧಿಸಿದ ಶಾಸನದ ಪ್ರಕಾರ ಕುಕ್ಕೆಸುಬ್ರಹ್ಮಣ್ಯ ದೇವರಿಗೆ ದೇವಸ್ಥಾನವನ್ನು ಕಟ್ಟಿಸಿದನೆಂದು

ಸಂದರ್ಶಿಸಿದ್ದರೆಂಬುದಕ್ಕೆ ಮಾಹಿತಿಗಳಿವೆ. ಇಲ್ಲಿ ಶಂಕರಾಚಾರ್ಯರು ಅನ್ಯಧರ್ಮೀಯರನ್ನು ವಾದದಲ್ಲಿ ಸೋಲಿಸಿದ್ದರು. ಮಧ್ವಾಚಾರ್ಯರು ಕ್ರಿ.ಶ. ೧೩ನೇ ಶತಮಾನದಲ್ಲಿ ಇಲ್ಲಿಗೆ ಬಂದು ಸುಬ್ರಹ್ಮಣ್ಯ ಮಠವನ್ನು ಸ್ಥಾಪಿಸಿ ನರಸಿಂಹ ವಿಗ್ರಹ, ಪಾಂಡುರಂಗ ವಿಗ್ರಹ ಮತ್ತು ವ್ಯಾಸ ಸಾಲಿ ಗ್ರಾಮಗಳನ್ನು ಪ್ರತಿಷ್ಠೆ ಮಾಡಿದರು"[೪೯] ಹಾಗೆ ದೇವಾಲಯದ ಮಹಾದ್ವಾರದ ಸಮೀಪ ಹೊಯ್ಸಳ ಬಲ್ಲಾಳರಾಯನ ವಿಗ್ರಹವಿದೆ. ಇದು ಚರಿತ್ರೆಯಲ್ಲಿ ಸಿಗುವುದಕ್ಕಿಂತ ಐತಿಹ್ಯದಲ್ಲಿ ಈ ಮಾಹಿತಿ ಸಿಗುತ್ತದೆ.

ನಂತರ ಕೊಡಗು ಜಿಲ್ಲೆಯ ಭಾಗಮಂಡಲದಲ್ಲಿರುವ ದೊಡ್ಡ ದೇವಾಲಯ ಭಗಂಡೇಶ್ವರ. ಈ ದೇವಾಲಯಗಳನ್ನು ಬೋಧರೂಪ ಭಾಗವರ್ ನಿರ್ಮಿಸಿದನೆಂದು ಮಾಹಿತಿಯಿದೆ. ಕ್ರಿ.ಶ. ೧೭೮೫ರಲ್ಲಿ ಟಿಪ್ಪು ಸುಲ್ತಾನ್ ಭಗಂಡೇಶ್ವರ ದೇವಾಲಯದ ಕೋಟೆಯನ್ನಾಗಿ ಪರಿವರ್ತಿಸಿ ಸೈನ್ಯದ ತುಕಡಿಯನ್ನಿಟ್ಟು ಅಫ್‌ಜಲ್‌ಬಾದ್ ಎಂದು ಈ ಕ್ಷೇತ್ರಕ್ಕೆ ನಾಮಕರಣ ಮಾಡಿದ್ದನು. "ಕ್ರಿ.ಶ. ೧೭೯೦ ರಲ್ಲಿ ದೊಡ್ಡ ವೀರರಾಜೇಂದ್ರನು ಟಿಪ್ಪುವನ್ನು ಪರಾಭವಗೊಳಿಸಿ ಭಗಂಡೇಶ್ವರ ದೇವಾಲಯವನ್ನು ಹಿಂತಿರುಗಿ ಪಡೆದನು"[೫೦] ಹಾಗೆ ಆ ಸಮಯದಲ್ಲಿ ದೊಡ್ಡ ವೀರರಾಜೇಂದ್ರನು ಹಾರಿಸಿದ ಫಿರಂಗಿ ಗುಂಡಿಗೆ ಸಿಕ್ಕಿ ದೇವಾಲಯದ ಎರಡು ತಾಮ್ರದ ಹೆಂಚು ಒಡೆದುಹೋದವು. ರಾಜ ಅವುಗಳ ಸ್ಥಾನದಲ್ಲಿ ಹಾಕಿಸಿದ ಬಿಳಿಯ ಹೆಂಚುಗಳು ಈಗಲೂ ದೇವಾಲಯದಲ್ಲಿದೆ. ಒಟ್ಟಾರೆಯಾಗಿ ಇಲ್ಲಿ ಬರುವ ಹಲವು ಕ್ಷೇತ್ರಗಳು ಪುರಾಣದಿಂದ ಕೂಡಿದ್ದರೆ, ಮತ್ತೆ ಕೆಲವು ಐತಿಹ್ಯದಿಂದ ಕೂಡಿವೆ. ಇಂತವುಗಳನ್ನು ಚರಿತ್ರೆಯೊಂದಿಗೆ ಮುಖಾಮುಖಿ ಮಾಡಿದಾಗ ಸತ್ಯಾಸತ್ಯತೆಯನ್ನು ನಿರ್ಧರಿಸಲು ಕೆಲವು ಸಲ ಕಷ್ಟಸಾಧ್ಯವಾಗಿ ವಿದ್ವಾಂಸರೇ ಊಹೆ ಎಂದು ಚರಿತ್ರೆಯಲ್ಲಿ ದಾಖಲಿಸಿರುವುದನ್ನು ನೋಡಬಹುದು.

ಆದಿಚುಂಚನಗಿರಿ ಮಹಾತ್ಮ್ಯೆಯ ಕರ್ತೃ ಅನಾಮಧೇಯದಿಂದ ಕೂಡಿದೆ. "ಒಂದು ಕಾಲದಲ್ಲಿ ಇದೊಂದು ನಾಥ ಪಂಥ ತಾಣವಾಗಿತ್ತು. ಇಲ್ಲಿ ಸ್ಥಾಪಿತವಾದ ಮಠ ಈ ಸಂಪ್ರದಾಯದ ಆದಿಪೀಠವಾಗಿತ್ತೆಂದು ಹೇಳಲಾಗಿದೆ."[೫೧] ಇದನ್ನು ಜೋಗಿಮಠವೆಂದು ಕರೆಯುತ್ತಾರೆ. ಇಲ್ಲಿ ಭೈರವೇಶ್ವರ ದೇವಾಲಯ ಪ್ರಮುಖ ದೇವಾಲಯವಾಗಿದೆ. "ಒಕ್ಕಲಿಗರ ಜನಾಂಗದವರ ಒಂದು ಪ್ರಮುಖ ಧಾರ್ಮಿಕ ಸ್ಥಳ ಇದಾಗಿದ್ದು ಅವರ ಮಠವೂ ಇಲ್ಲಿದೆ"[೫೨]

ಆದಿ ಚುಂಚನಗಿರಿ ಕ್ಷೇತ್ರ ವರ್ಣನೆಯಲ್ಲಿ ಇಲ್ಲಿ ಸುತ್ತಮುತ್ತ ಪರಿಸರವನ್ನು ವರ್ಣನೆ ಮಾಡಲಾಗಿದೆ. ಇಲ್ಲಿ ರಾಷ್ಟ್ರವು ಮಯೂರಧಾಮವನ್ನು ಈಚೆಗೆ ಆರಂಭಿಸಲಾಗಿದೆ. ಎಂಬ ಮಾಹಿತಿ ಸಿಗುತ್ತದೆ.

ಕಾವೇರಿ ಮಹಾತ್ಮೆ ಎನ್ನುವುದು ಹಲವು ಕ್ಷೇತ್ರಗಳ ಕೈಪಿಡಿಯಂತಿದೆ. ಇದನ್ನು ದಕ್ಷಿಣ ಭಾರತದ ಮುಖ್ಯ ನದಿಗಳಲ್ಲೊಂದು ಎಂದು ಕರೆಯುತ್ತಾರೆ. ಈ ನದಿಯ ಹುಟ್ಟಾಗಿರುವ ಕೊಡಗನ್ನು ಬೆಳಗಿಸಿದ ಜಿಲ್ಲೆ ಎಂದು ಕರೆಯುತ್ತಾರೆ. ಕಾವೇರಿ ನದಿ ತಲಕಾವೇರಿಯಿಂದ ಉಗಮವಾಗಿ ಭಾಗಮಂಡಲ ಕಡೆ ಹರಿದು, ತಲಕಾವೇರಿಯಲ್ಲಿ ಉಗಮವಾಗುವ ಕನ್ನಿಕ ಮತ್ತು ಗುಪ್ತಗಾಮಿನಿಯಾದ ಸುಜ್ಯೋತಿ ನದಿಗಳು ಕಾವೇರಿಯನ್ನು ಸೇರುವುದರಿಂದ ತ್ರಿವೇಣಿ ಸಂಗಮವಾಗಿದೆ. ಅಲ್ಲದೇ ಈ ಸ್ಥಳ ಪವಿತ್ರ ಪ್ರಸಿದ್ಧವಾದ ತಾಣವಾಗಿದೆ. ನಂತರ ಕುಶಾಲನಗರದಿಂದ ಹಾಸನ ಜಿಲ್ಲೆಯಲ್ಲಿ ಪ್ರವೇಶಿಸಿದ ಹೇಮಾವತಿಯೊಡನೆ ಸಂಗಮವಾಗುತ್ತದೆ. ನಂತರ ಮಂಡ್ಯ, ಮೈಸೂರು, ಜಿಲ್ಲೆಗಳಿಂದ ಸಾಗುತ್ತ ಕಾವೇರಿಗೆ ಅಡ್ಡಲಾಗಿರುವ ಕೃಷ್ಣರಾಜಸಾಗರ ಎಂಬ ದೊಡ್ಡ ಆಣೆಕಟ್ಟನ್ನು ಕಟ್ಟಿದ್ದಾರೆ. ಇದು ಬೃಂದಾವನದಂತೆ ಇದ್ದು ವಿದೇಶದಲ್ಲೂ ಪ್ರಖ್ಯಾತಿ ಪಡೆದಿದೆ. ಕಾವೇರಿ ತನ್ನ ಸುದೀರ್ಘ ಪಯಣದಲ್ಲಿ ಶ್ರೀರಂಗಪಟ್ಟಣ, ಶಿವನಸಮುದ್ರ, ಮೊದಲಾದ ಐತಿಹಾಸಿಕ ಸ್ಥಳಗಳಲ್ಲಿ ಹಾದುಹೋಗಿದೆ. ಶಿವನ ಸಮುದ್ರದಲ್ಲಿ ಕಾವೇರಿ ಎರಡು ಕವಲಾಗಿ ಹರಿದು ದ್ವೀಪವನ್ನುಂಟು ಮಾಡಿದೆ. ಇಲ್ಲಿ ಗಗನ ಚುಕ್ಕಿ ಮತ್ತು ಭರಚುಕ್ಕಿ ಎಂಬ ರಮಣೀಯವಾದ ಜಲಪಾತವನ್ನು ನಿರ್ಮಿಸಿ ವಿದ್ಯುತ್ ಉತ್ಪಾದನಾ ಶಕ್ತಿ ಕೇಂದ್ರವಿದೆ.

ನಂತರ ಬೆಂಗಳೂರಿನಿಂದ ಕನಕಪುರ ತಾಲೂಕಿನ ಸಂಗಮದಲ್ಲಿ ಅರ್ಕಾವತಿ ನದಿಯನ್ನು ಸೇರುತ್ತದೆ. ಅದಾದ ನಂತರ ಮೇಕೆದಾಟುವಿನಲ್ಲಿ ಕಾವೇರಿ ಕಿರಿದಾಗಿ ಹರಿದು ಸುಂದರವಾದ ಸೌಂದರ್ಯ ತಾಣವನ್ನು ನಿರ್ಮಿಸಿ, ಕರ್ನಾಟಕ ಬಿಟ್ಟು ತಮಿಳುನಾಡನ್ನು ಪ್ರವೇಶಿಸುತ್ತದೆ. ಮದ್ದೂರಿನಲ್ಲಿ ಕಾವೇರಿಗೆ ಅಡ್ಡಲಾಗಿ ನಿರ್ಮಿಸಿರುವ ಅಣೆಕಟ್ಟು ಕಾವೇರಿಯ ನದಿಯ ಆಣೆಕಟ್ಟುಗಳಲ್ಲೆಲ್ಲಾ ದೊಡ್ಡದು. ಆ ಬಳಿಕ ಕಾವೇರಿ ಈ ರೋಡು, ಭವಾನಿ, ಶ್ರೀರಂಗಂ, ಕುಂಭಕೋಣ ಮೊದಲಾದ ಕ್ಷೇತ್ರಗಳನ್ನು ದಾಟಿ ತಂಜಾವೂರು ಜಿಲ್ಲೆಯ ಪೂಂಪಟ್ಟಣದಲ್ಲಿ ಬಂಗಾಳಕೊಲ್ಲಿಯನ್ನು ಸೇರುತ್ತದೆ. ಹಿಂದೆ ಈ ಸ್ಥಳ ದೊಡ್ಡ ಬಂದರಾಗಿ ವಾಣಿಜ್ಯ ಕೇಂದ್ರವಾಗಿತ್ತು ಎಂದು ತಿಳಿದುಬರುತ್ತದೆ. ಹಾಗೆ ಚೋಳರ ರಾಜಧಾನಿ ಪೊಂ ಪಟ್ಟಣವಾಗಿತ್ತು. ಶಾಸನಗಳಲ್ಲಿಯೂ ಕಾವೇರಿಯ ಪ್ರಸ್ತಾಪವಿದ್ದು ಕ್ರಿ.ಶ. ೫೫೦ಕ್ಕೆ ಸೇರಿದ ಬಾದಾಮಿ ಚೋಳರ 'ಯಳಂದೂರು ಶಾಸನ' ಕಾವೇರಿಗೆ ಸಂಬಂಧಿಸಿದ ಅತ್ಯಂತ ಪ್ರಾಚೀನ ಶಾಸನವಾಗಿದೆ. ಹಾಗೆಯೇ ಈ ಪ್ರಾಂತ್ಯದಲ್ಲಿ ಹಲವಾರು ರಾಜರು ಆಳಿದರು. ಕದಂಬರ ಕಾಲದಲ್ಲಿ "ಕರ್ನಾಟಕದ ದಕ್ಷಿಣ ಭಾಗವನ್ನು ಮಹೀಷಮಂಡಲವೆಂದು ಇದನ್ನು ಕರೆಯಲಾಗಿದೆ. ಶ್ರೀಲಂಕಾದ ಬೌದ್ಧರ ಮಹಾವಂಶ

ಗ್ರಂಥವು ಅಶೋಕನು ಬೌದ್ಧಧರ್ಮ ಪ್ರಸಾರಕ್ಕೆ ತಂಡವೊಂದನ್ನು ಬನವಾಸಿಗೂ, ಇನ್ನೊಂದನ್ನು ಮಹಿಷಮಂಡಲಕ್ಕೂ ಕಳಿಸಿದನೆಂದು ತಿಳಿಸುತ್ತದೆ. ಈ ಮಹಿಷಮಂಡಲವೆಂಬುದು ಮೈಸೂರು ಪ್ರಾಂತ್ಯವಲ್ಲವೆಂದೂ ಅದು ನರ್ಮದಾನದಿ ಪ್ರದೇಶದಲ್ಲಿರುವ ಮಾಹಿಷ್ಮತಿ ಅಥವಾ ಮಾಂಧಾತ ಪ್ರದೇಶವೆಂದು ಫ್ಲೀಟ್‌ರು ತಿಳಿಸುತ್ತಾರೆ. ಆದರೆ ರೈಸರು ಇದನ್ನು ಒಪ್ಪದೆ ಇಂದಿನ ಮೈಸೂರು ಪ್ರದೇಶವೇ ಮಹಿಷಮಂಡಲವೆಂದು ಅಭಿಪ್ರಾಯಪಡುತ್ತಾರೆ"[೫೩]

ಸಾಹಿತ್ಯಿಕವಾಗಿಯೂ ಕಾವೇರಿಯ ಬಗ್ಗೆ ಉಲ್ಲೇಖವಿದೆ. ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷನ ಆಸ್ಥಾನ ಕವಿಯಾದ ಶ್ರೀವಿಜಯನು ಕವಿರಾಜಮಾರ್ಗವೆಂಬ ಶಾಸ್ತ್ರಗ್ರಂಥವನ್ನು ರಚಿಸಿದ ಇದು ಕರ್ನಾಟಕ ರಾಜ್ಯವು ಕಾವೇರಿ ನದಿಯಿಂದ ಗೋದಾವರಿಯವರೆಗೂ ವಿಸ್ತಾರವಾಗಿದ್ದ ವಿಷಯವನ್ನು ತಿಳಿಸುತ್ತದೆ. ಅನಂತರ ವಿಜಯನಗರ ಸಾಮ್ರಾಜ್ಯದ ಅರಸರ ಕಾಲದಲ್ಲಿ ಕಾವೇರಿ ನದಿಯ ಬಗ್ಗೆ ಹಲವಾರು ಕೃತಿಗಳು ರಚನೆಯಾಗಿವೆ. ಅದರಲ್ಲಿ ಮುಮ್ಮಡಿ ಕೃಷ್ಣರಾಜರ ಅಖಂಡ ಕಾವೇರಿ ಮಹಾತ್ಮ್ಯೆ, ತಲಕಾವೇರಿ ಮಹಾತ್ಮ್ಯೆ ಎಂಬ ಕೃತಿಗಳನ್ನು ನೋಡಬಹುದು. ನಂತರ ಹರಿದಾಸರು, ಗುಬ್ಬಿಯ ಮಲ್ಲಣಾರ್ಯ, ಷಡಕ್ಷರಿ ಮೊದಲಾದವರ ಕೃತಿಗಳಲ್ಲಿ ಪ್ರಾಸಂಗಿಕವಾಗಿ ಕಾವೇರಿ ನದಿಯ ವರ್ಣನೆ ಬಂದಿದೆ.

ಕಾವೇರಿಯ ದಡದಲ್ಲಿ ಪ್ರಸಿದ್ಧವಾದ ಶೈವ ವೈಷ್ಣವ ಕ್ಷೇತ್ರಗಳು ಬರುತ್ತವೆ. ವೈಷ್ಣವ ಕ್ಷೇತ್ರಗಳಲ್ಲಿ ಆದಿರಂಗ, ಮಧ್ಯರಂಗ, ಅಂತ್ಯರಂಗ ಎಂದು ಜನಪ್ರಿಯವಾಗಿರುವ ಶ್ರೀರಂಗಪಟ್ಟಣ, ಶಿವನ ಸಮುದ್ರ ಮತ್ತು ಶ್ರೀರಂಗಗಳನ್ನು ಹೆಸರಿಸಬಹುದು. ಐತಿಹಾಸಿಕವಾಗಿಯೂ ಈ ಸ್ಥಳಗಳು ಪ್ರಸಿದ್ಧಿಯನ್ನು ಪಡೆದಿವೆ. ಕ್ರಿ.ಶ. ೧೫೭೮–೧೬೧೭ ರಾಜ ಒಡೆಯರ ಆಳ್ವಿಕೆಯಲ್ಲಿ ರಾಜ ಒಡೆಯರ್ ಕ್ರಿ.ಶ. ೧೬೧೦ರಲ್ಲಿ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡು ಮೈಸೂರಿನಿಂದ ಶ್ರೀರಂಗಪಟ್ಟಣಕ್ಕೆ ರಾಜಧಾನಿಯನ್ನು ಬದಲಾಯಿಸಿದ. ಹಾಗೆ "ವಿಜಯನಗರದಲ್ಲಿ ವೈಭವದಿಂದ ಆಚರಿಸುತ್ತಿದ್ದ ಜಗತ್ಪ್ರಸಿದ್ಧವಾದ ದಸರಾ ಮಹೋತ್ಸವವಾದ ಆಚರಣೆಯನ್ನು ಪ್ರಾರಂಭಿಸುವ ಮೂಲಕ ಸಾಹಿತ್ಯ ಮತ್ತು ಕಲೆಗಳಿಗೆ ಪ್ರೋತ್ಸಾಹ ನೀಡಿವೆ. ಚಾಮುಂಡೇಶ್ವರಿ, ನಂಜನಗೂಡಿನ ಶ್ರೀಕಂಠಸ್ವಾಮಿ, ಮೈಸೂರಿನ ಲಕ್ಷ್ಮೀರಮಣಸ್ವಾಮಿ, ಶ್ರೀರಂಗಪಟ್ಟಣದ ರಂಗನಾಥಸ್ವಾಮಿ, ಮೇಲುಕೋಟೆಯ ಗುಹೆಗಳು ಮುಂತಾದ ದೇಗುಲಗಳನ್ನು ನಿರ್ಮಿಸಿದನು ಹಾಗೂ ಜೀರ್ಣೋದ್ಧಾರ ಮಾಡಿಸಿದನು."[೫೪] ಇವನ ನಂತರ ಆಳ್ವಿಕೆಗೆ ಬಂದ ಚಾಮರಾಜ

ಒಡೆಯರು ಕ್ರಿ.ಶ (೧೬೧೭-೧೬೩೭) "ಚಾಮರಾಜನು ಶೈವ, ವೈಷ್ಣವ ಮತ್ತು ಜೈನಧರ್ಮಗಳಿಗೆ ಸಮಾನವಾದ ಬೆಂಬಲವನ್ನು ನೀಡಿದನು. ಶ್ರೀರಂಗಪಟ್ಟಣದ ಹತ್ತಿರ ಕಾವೇರಿ ನದಿಗೆ ಸೇತುವೆಯನ್ನು ನಿರ್ಮಿಸಿದರು. ಮೇಲುಕೋಟೆಯಲ್ಲಿ ಸ್ನಾನಕ್ಕಾಗಿ ಕಲ್ಯಾಣಿಗಳನ್ನು ಕಟ್ಟಿಸಿದನೆಂದು"[೫೫] ತಿಳಿದುಬರುತ್ತದೆ.

ಇದಕ್ಕಿಂತಲೂ ಮುಂಚಿತವಾಗಿಯೇ ಕಾವೇರಿ, ನದಿಯ ಬಗ್ಗೆ ಹಲವಾರು ಉಲ್ಲೇಖಗಳು, ರಾಜಮನೆತನಗಳು ಆಳ್ವಿಕೆ ಮಾಡಿರುವುದು ತಿಳಿದುಬರುತ್ತದೆ. "ಕರ್ನಾಟಕ ಶಾಸನಗಳಲ್ಲಿ (ಶಕ ೪೬೫) ಸಂವತ್ಸರದ ಅತ್ಯಂತ ಪ್ರಾಚೀನ ಉಲ್ಲೇಖ ಸಿಗುತ್ತದೆ. ಮೊದಲನೆಯ ಪುಲಕೇಶಿಯ ಮೊಮ್ಮಗ ಇಮ್ಮಡಿ ಪುಲಕೇಶಿಯು (ಕ್ರಿ.ಶ. ೬೦೮-೬೪೨) ತನ್ನ ರಾಜ್ಯ ವಿಸ್ತಾರವನ್ನು ನರ್ಮದ ನದಿಯಿಂದ ದಕ್ಷಿಣ ಕಾವೇರಿ ನದಿಯವರೆಗೂ ವ್ಯಾಪಿಸಿತ್ತು."[೫೬] ಎಂದು ಚರಿತ್ರೆ ಹೇಳುತ್ತದೆ. ನಂತರ ಹಲವಾರು ರಾಜರ ಆಕ್ರಮಣಗಳನ್ನು ಮಾಡಿರುವುದು ತಿಳಿದುಬರುತ್ತದೆ. ಅದರಲ್ಲಿ "ಕಂಠೀರವ ನರಸರಾಜ ಒಡೆಯರು ೧೬೩೮-೫೯ ತನ್ನನ್ನು ಬಗ್ಗು ಬಡಿಯಲು ಪ್ರಯತ್ನಿಸಿದ ಬಿಜಾಪುರದ ಪ್ರಯತ್ನಗಳನ್ನು ಯಶಸ್ವಿಯಾಗಿ ಎದುರಿಸಿದ. ಹಾಗೆಯೇ ಶ್ರೀ ರಂಗಪಟ್ಟಣದಲ್ಲಿ ನರಸಿಂಹದೇವರ ಗುಡಿಯನ್ನು ಸ್ಥಾಪಿಸಿದನೆಂದು"[೫೭] ಮಾಹಿತಿ ಸಿಗುತ್ತದೆ. ಹಾಗೆಯೇ "ಚಿಕ್ಕದೇವರಾಯ ಒಡೆಯನು (೧೬೭೩-೧೭೦೪) ಬೆಂಗಳೂರು ಬೆಂಚಿಗಳಲ್ಲಿ ಮರಾಠರನ್ನು ಪ್ರತಿಭಟಿಸಿದ್ದಷ್ಟೇ ಅಲ್ಲದೆ ತಮಿಳುನಾಡಿನವರೆಗೂ ಮತ್ತು ಅದರ ಸುತ್ತಮುತ್ತಲ ಪ್ರದೇಶಗಳನ್ನು ಮೊಘಲರಿಂದ ಲಾವಣಿಯಾಗಿ ಪಡೆದುಕೊಂಡ ಎಂಬ ಮಾಹಿತಿ ಸಿಗುತ್ತದೆ."[೫೮]

ಈ ಪ್ರದೇಶದಲ್ಲಿ ದೀರ್ಘವಾಗಿ ಆಳ್ವಿಕೆ ಮಾಡಿದ ಅರಸರು ಎಲ್ಲಾ ಧಾರ್ಮಿಕ ಪಂಥಗಳ (ಶೈವ, ವೈಷ್ಣವ ಶ್ರೀವೈಷ್ಣವಿ, ಜೈನ್ಯ ಇತ್ಯಾದಿ) ದೇವಾಲಯಗಳನ್ನು ಕಟ್ಟಿಸಿದ್ದಷ್ಟೇ ಅಲ್ಲ. ತಮ್ಮ ಕಾಲಕ್ಕೆ ಮೊದಲೇ ಹಾಳಾಗಿದ್ದ ದೇವಾಲಯಗಳನ್ನು ಜೊತೆಗೆ ಅಸ್ತಿತ್ವದಲ್ಲಿದ್ದ ದೇವಾಲಯಗಳಿಗೆ ವಿಸ್ತಾರವಾದ ಪ್ರಕಾರಗಳನ್ನು ಒದಗಿಸದರು. "ರಾಯಗೋಪುರ" ಎಂದೇ ಪ್ರಸಿದ್ಧವಾಗಿರುವ ಎತ್ತರವಾದ ಭವ್ಯವೂ ಆದ ಗೋಪುರಗಳನ್ನು ರಾಜಧಾನಿ ಹಂಪಿ ಸೇರಿದಂತೆ ಆಂಧ್ರಪ್ರದೇಶ ಹಾಗೆಯೆ ತಮಿಳುನಾಡಿನ ಶ್ರೀಶೈಲಂ, ಕಾಳಹಸ್ತಿ, ತಿರುಪತಿ, ಶ್ರೀರಂಗ, ಚಿದಂಬರಂ, ಕಂಚಿ, ಮೊದಲಾದ ಸ್ಥಳಗಳಲ್ಲಿ ನಿರ್ಮಿಸಿದರೆಂದು ಅರಸರ ಚರಿತ್ರೆಗಳು ಹೇಳುತ್ತವೆ. ಇಲ್ಲಿಯೇ, ಈ ಕಾಲದಲ್ಲೇ ವೈಷ್ಣವ ಧರ್ಮ ಅತೀ ಹೆಚ್ಚಿನ ಪ್ರಚಾರಕ್ಕೆ ಬರಲು ಪ್ರಮುಖ ಕಾರಣವಾಯಿತು. "೧೨ನೇ ಶತಮಾನದ ಆದಿ ಭಾಗದಲ್ಲಿ ತಮಿಳುನಾಡಿನಲ್ಲಿ ಜನಿಸಿದ ಪ್ರಖ್ಯಾತ ಶ್ರೀವೈಷ್ಣವ ಸಂತರಾದ

ರಾಮಾನುಜಾಚಾರ್ಯರು ಮೇಲುಕೋಟೆಯಲ್ಲಿ ಹನ್ನೆರಡು ವರ್ಷಗಳ ಕಾಲ ತಂಗಿದ್ದರು. ಅಂದಿನಿಂದ ಇದು ವೈಷ್ಣವ ಕೇಂದ್ರವು ಪರಿಣಮಿಸಿತು."[೫೯]

"ರಾಜಾನುಜರು ಮೇಲುಕೋಟೆಯ ಚೆಲುವ ನಾರಾಯಣ ದೇಗುಲವನ್ನು ಜೀರ್ಣೋದ್ಧಾರ ಮಾಡಿಸಿದರೆ, ತೊಣ್ಣೂರಿನ ನಂಬಿರಾಯ ದೇಗುಲವನ್ನು ಕಟ್ಟಿಸಿದರು. ಇದರ ನಿರ್ಮಾಣಕ್ಕಾಗಿ ಸ್ಥಾಪತಿಗಳನ್ನು ಅವರು ತಮಿಳುನಾಡಿನಿಂದ ಕರೆಸಿದ್ದುಂಟು"[೬೦] ಹಾಗೆಯೇ ದೊರೆ ವಿಷ್ಣುವರ್ಧನನು ರಾಮಾಯನುಜಾಚಾರ್ಯ ಮತ್ತು ಶಿಷ್ಯವೃಂದಕ್ಕೆ ಶ್ರೀರಂಗಪಟ್ಟಣದ ಬಳಿ ಕಾವೇರಿ ನದಿಯ ಇಕ್ಕೆಡೆಗಳಲ್ಲಿದ್ದ ಅಷ್ಟಗ್ರಾಮ ಅಥವಾ ಎಂಟು ಹಳ್ಳಿಗಳನ್ನು ದತ್ತಿಯಾಗಿ ನೀಡಿದನೆಂದು ಹಾಗೂ ೧೪೫೪ರ ನಾಗಮಂಗಲದ ದೊರೆ ತಿಮ್ಮಣ್ಣ ಸುತ್ತಲೂ ಕೋಟೆಯೊಂದನ್ನು ಕಟ್ಟಲು ವಿಜಯನಗರದ ಅರಸರಿಂದ ಅನುಮತಿ ದೊರಕಿಸಿಕೊಂಡನು. ಈತನು ರಂಗನಾಥಸ್ವಾಮಿ ದೇವಸ್ಥಾನವನ್ನು ಸಹ ವಿಸ್ತರಿಸಿದನು. ನಂತರ ಬಂದ ವಿಜಯನಗರ ಅರಸರ ಒಡೆತನಕ್ಕೆ ಸೇರಿ ೧೭೯೯ರಲ್ಲಿ ಬ್ರಿಟೀಷರ ವಶವಾಯಿತು. ಇವರ ನಂತರ ಶ್ರೀರಂಗಪಟ್ಟಣವು ಟಿಪ್ಪು, ಹೈದರ್ ಆಳ್ವಿಕೆಗೆ ಒಳಪಟಿದೆ. ಈ ದೇವಸ್ಥಾನವು ೩ ಹಂತದಲ್ಲಿ ಕಟ್ಟಿಸಲಾಗಿದೆ. ಇದರ "ತೀರ ಒಳಭಾಗ ಹೊಯ್ಸಳರ ಕಾಲದಲ್ಲಿ" ನವರಂಗ ವಿಜಯನಗರ ಕಾಲದ್ದು; ಮತ್ತು ವಿಜಯನಗರ ಶೈಲಿಯಲ್ಲಿ ನಿರ್ಮಿತವಾಗಿರುವ ಮುಖ್ಯದ್ವಾರದ ಗೋಪುರ ನಂತರದ ಕಾಲದ್ದು. ಹಾಗೆ ದೇವಸ್ಥಾನದ ಒಳಗಡೆ ಇಟ್ಟಿರುವ ದೇವತೆಗಳು ಹಾಗೂ ಅನೇಕ ವಿಗ್ರಹಗಳು ಹೊಯ್ಸಳ ಮತ್ತು ವಿಜಯನಗರ ಕಾಲದ್ದು. ಹಾಗೆ ದೇವಸ್ಥಾನದ ಒಳಗಡೆ ಇಟ್ಟಿರುವ ದೇವತೆಗಳು ಮೆತ್ತನೆ ಅನೇಕ ವಿಗ್ರಹಗಳು ಹೊಯ್ಸಳ ಮತ್ತು ವಿಜಯನಗರ ಕಾಲದ್ದು"[೬೧] ಎಂಬ ಮಾಹಿತಿ ಸಿಗುತ್ತದೆ. ಹಾಗೆಯೆ ಇದಕ್ಕಿಂತಲೂ ಸ್ವಲ್ಪ ಹಿಂದಿನ ಇತಿಹಾಸವನ್ನು ನೋಡಿದರೆ ಗಂಗರು ನಂದಗಿರಿನಾಥರೆಂಬ ಬಿರುದನ್ನು ಹೊಂದಿದ್ದರು. ಆ ನಂದಗಿರಿ ಎನ್ನುವುದು ಶಾಸನಗಳಲ್ಲಿ ಉಲ್ಲೇಖವಾಗಿರುವ ನಂದಿಬೆಟ್ಟವಾಗಿದ್ದು, ಅದು ಬೆಂಗಳೂರಿನ ಸಮೀಪದಲ್ಲಿದೆ. ಹಾಗೆ ಈ ನಂದಗಿರಿ ಹೆಸರು ಚೋಳರ ಕಾಲದಲ್ಲಿ ನಂದಗಿರಿಯೆಂದು ಬದಲಾಯಿಸಲ್ಪಟ್ಟಿತು ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

"ಕಾವೇರಿ ಮತ್ತು ಕಪಿಲಾ ನದಿಗಳ ನಡುವೆ ಇದ್ದ ರಾಜ್ಯ ಪುನ್ನಾಡಿ"[೬೨] ಇದು ಕದಂಬರ ರಾಜಧಾನಿಯಾಗಿತ್ತು. ಹಾಗೆ ಇಮ್ಮಡಿ ಪುಲಕೇಶಿಯು ಕಾವೇರಿ ನದಿಯಿಂದ ನರ್ಮದೆಯವರೆಗೆ ಚಾಚಿದ ವಿಶಾಲವಾದ ಪ್ರದೇಶಕ್ಕೆ ಹಬ್ಬಿತು. ಹಾಗೆ ಕ್ರಿ.ಶ. ೬೭೪ರಲ್ಲಿ ಕಾವೇರಿ ನದಿಯ ದಕ್ಷಿಣ ದಂಡೆಯ ಮೇಲಿರುವ ಉರುಗಪುರ ಅಥವಾ ವಿದ್ಯೆಯೂರುನಲ್ಲಿ

ಬೀಡು ಬಿಟ್ಟು, ಈ ಪ್ರದೇಶವನ್ನು ಆಕ್ರಮಿಸಿದನೆಂದು; ನಂತರದಲ್ಲಿ ಬಂದ ಹೊಯ್ಸಳರು, ಕಲ್ಯಾಣ ಚಾಲುಕ್ಯರ ಪತನವಾದ ನಂತರ ಕ್ರಿ.ಶ. ೧೩೦೦ರವರೆಗೂ ವೈಭವಯುತವಾಗಿ ಕರ್ನಾಟಕದ ದಕ್ಷಿಣ ಭಾಗ ಮತ್ತು ತಮಿಳುನಾಡಿನ ಉತ್ತರ ಭಾಗವನ್ನು ಆಳ್ವಿಕೆ ಮಾಡಿದರು. ಗಂಗವಾಡಿ ಕ್ರಿ.ಶ. ೧೧೬ ವೇಳೆಗೆ ಹೊಯ್ಸಳರ ವಶವಾಗಿರುವುದು ಕ್ರಿ.ಶ. ೧೧೧೭ರ ಮಳವಳ್ಳಿ ಶಾಸನದಲ್ಲಿ ಸಿಗುತ್ತದೆ. ಹಾಗೆ ವಿಷ್ಣುವರ್ಧನನ ಮಡದಿ ಶಾಂತಲಾದೇವಿ ಕ್ರಿ.ಶ. ೧೧೩೧ರಲ್ಲಿ ಶಿವಗಂಗೆಯಲ್ಲಿ ಇವಳು ಕಾಲವಾದಳು ಎಂದು ತಿಳಿಸುತ್ತದೆ. ಇದೇ ವಿಷಯವು ಕಕುದ್ಗಿರಿ ಮಹಾತ್ಮ್ಯೆಯಲ್ಲಿ ಬರುತ್ತದೆ. ಹಾಗೆ ಇವಳು ಅನೇಕ ಬಸದಿಗಳನ್ನು ಶ್ರವಣಬೆಳಗೊಳದಲ್ಲಿ ನಿರ್ಮಿಸಿದಳು ಎಂಬ ವಿವರವು ಸಿಗುತ್ತದೆ.

ಇಷ್ಟೆಲ್ಲಾ ರಾಜ ಮನೆತನಗಳು ಮತ್ತು ಪ್ರಮುಖ ರಾಜರ ಏಳಿಗೆಯು ಕಂಡುಬರುವುದು ನದಿಯ ತೀರಗಳಲ್ಲಿ. ಇಂತಹ ನದಿಗಳನ್ನು ನಾಗರಿಕತೆಯ ತೊಟ್ಟಿಲುಗಳೆಂದು ಕರೆಯುತ್ತಾರೆ. ಹಾಗೆಂದು ಕರೆಯಲು ಪ್ರಮುಖ ಕಾರಣ, ಆಯಾಯ ನದಿಗಳ ಹಿಂದಿರುವ ನಾಗರೀಕತೆಗಳ ಇತಿಹಾಸ. ಉದಾಹರಣೆಗೆ ಸಿಂಧೂ ನದಿಯ ನಾಗರೀಕತೆ, ನೈಲ್ ನದಿಯ ನಾಗರೀಕತೆ ಮುಂತಾದವು. ಇವು ಜಗತ್ತಿನ ಸಂಸ್ಕೃತಿಯ ವಿಕಾಸದಲ್ಲಿ ಮಹತ್ವಪೂರ್ಣವಾದ ಪ್ರಭಾವವನ್ನು ಬೀರಿವೆ. ಮಾನವನು ನಾಗರೀಕನಾದಂತೆಲ್ಲಾ ನದಿಯ ದಂಡೆಯಲ್ಲಿ ದೇವಾಲಯಗಳನ್ನು ನಿರ್ಮಿಸಿ ದೈವಿಕ ಆವರಣವನ್ನು ಸೃಷ್ಟಿ ಮಾಡತೊಡಗಿದನು. ಹಾಗೆ ರಾಜರುಗಳು ಯುದ್ಧದಲ್ಲಿ ಗೆದ್ದಂತಹ ಸಂದರ್ಭದಲ್ಲಿ ಅದರ ನೆನಪಿಗಾಗಿ ಮತ್ತು ಅವರಿಗೆ ಖುಷಿ ಸಂದ ಶುಭಗಳಿಗೆಗಾಗಿ, ಅಥವಾ ಅವರ ಧರ್ಮದ ಆಸಕ್ತಿಗಾಗಿಯೋ, ಪ್ರಚಾರಕ್ಕಾಗಿಯೋ ಇಂತಹ ದೇವಾಲಯಗಳು ನಿರ್ಮಾಣವಾಗಿ ಇತಿಹಾಸದಲ್ಲಿ ಪ್ರಮುಖ ಸ್ಥಾನಮಾನವನ್ನು ಪಡೆದರೆ; ಕೆಲವು ಆಸ್ತಿಕರಿಗೆ ಪ್ರಮುಖ ಆಧ್ಯಾತ್ಮ ಕೇಂದ್ರದ ನೆಲೆಗಳಾದವು. ಆಗಲೇ ತೀರ್ಥಕ್ಷೇತ್ರಗಳ ಮಹಿಮೆಯನ್ನು ವರ್ಣಿಸುವ ಅನೇಕ ಕಾವ್ಯಗಳು ರಚನೆಯಾದವು.

ಒಟ್ಟಾರೆಯಾಗಿ ಹೇಳುವುದಾದರೆ ೧೪ನೇ ಶತಮಾನದ ಆರಂಭಕ್ಕೂ ಮುನ್ನ ಭಾರತದ ರಾಜಕೀಯ ಚರಿತ್ರೆಯನ್ನು ಅವಲೋಕಿಸುವಾಗ ಹಿಂದೂ ಅರಸರ ಹಿಡಿತದಲ್ಲಿ ಹಲವು ಪ್ರದೇಶಗಳು ನೇರ ಆಳ್ವಿಕೆಗೆ ಒಳಪಟ್ಟಿದ್ದವು. ಆ ಪ್ರದೇಶದಲ್ಲಿ ಆಳ್ವಿಕೆ ಮಾಡಿದವರೆಂದರೆ ಮಧುರೆಯ ಪಾಂಡ್ಯರು, ತಂಜಾವೂರಿನ ಚೋಳರು, ದೇವಗಿರಿಯ ಯಾದವರು, ದ್ವಾರಸಮುದ್ರದ ಹೊಯ್ಸಳರು ಪ್ರಮುಖರಾಗಿ ಸ್ಥಳ ಮಹಾತ್ಮ್ಯೆಗಳಲ್ಲಿ ಚಾರಿತ್ರಿಕ ಸಂಗತಿಗಳನ್ನು ಗುರುತಿಸಲಾಗಿದೆ. ಇದಕ್ಕೂ ಮುಂಚಿತವಾಗಿಯೇ ಮಹಮ್ಮದಿಯರ ದಾಳಿಯಿಂದ ದೇಶಿಯ ಅರಸರ ನಾಶವಾಯಿತು. ಹಾಗೆ ಕಲೆ, ಸಂಸ್ಕೃತಿಗಳ ನಾಶದೊಂದಿಗೆ

ಸಾಂಸ್ಕೃತಿಕವಾಗಿ ಧಕ್ಕೆಯೂ ಉಂಟಾಯಿತು. ಆ ಸಂದರ್ಭದಲ್ಲಿ ಅನಾದಿ ಕಾಲದಿಂದಲೂ ಬೆಳೆದು ಬಂದ ಹಿಂದೂ ಧರ್ಮ ಮತ್ತು ಸಂಸ್ಕೃತಿಯ ಪುನರುತ್ಥಾನಕ್ಕಾಗಿ ತಲೆಯೆತ್ತಿದ ಅರಸು ಮನೆತನವೇ ವಿಜಯನಗರ ಸಾಮ್ರಾಜ್ಯವಾಗಿತ್ತು.

ಅಂದಿನ ಸಾಂಸ್ಕೃತಿಕ ಸಂಘರ್ಷಗಳ ಬೆಳವಣಿಗೆಯಲ್ಲಿ ಹಲವಾರು ರೀತಿಯ ಏರುಪೇರುಗಳು ಸಂಭವಿಸಿದ್ದವು. ಇದರಿಂದ ಧಾರ್ಮಿಕ ಉಳಿವು ಮತ್ತು ಸಾಂಸ್ಕೃತಿಕ ಉಳಿವು ಅಗತ್ಯವಾಗಿ ಕಂಡುಬಂದಿತು. ಇದರಿಂದ ಅನೇಕ ಸಾಧು–ಸಂತರಿಗೆ, ಕವಿಗಳಿಗೆ ಪೋಷಿತವಾಗಿ ವಿಜಯನಗರ ಸಾಮ್ರಾಜ್ಯವು ಹುಟ್ಟಿಕೊಂಡಿತು. ಇವರ ಕಾಲದಲ್ಲಿ ಇದ್ದ ಶಂಕರಾಚಾರ್ಯರು ಸ್ಥಾಪಿಸಿದ ಶೃಂಗೇರಿ ಮಠದ ಪಾತ್ರ ಇಲ್ಲಿ ಬಹಳ ಮುಖ್ಯ. ಇವರು ವೈಧ್ದಿಕ ಧರ್ಮವನ್ನು ಸಂರಕ್ಷಿಸುವಲ್ಲಿ ಪ್ರಸಿದ್ಧ ಪುರುಷರಾದರು. ಹೀಗೆ ವೈಯಕ್ತಿಕ ರಾಜಕೀಯ ಮಹತ್ವಾಕಾಂಕ್ಷೆಯಿಲ್ಲದೇ, ಅವರು ಅಂದಿನ ಧಾರ್ಮಿಕ ಸಂಸ್ಕೃತಿಗೆ ಶ್ರಮಿಸಿದರು. ವೈಷ್ಣವ ಧರ್ಮಕಷ್ಟೆ ಅಲ್ಲದೇ, ಸಾಮ್ರಾಜ್ಯದಲ್ಲಿ ಅವರು ಎಲ್ಲಾ ಧಾರ್ಮಿಕ ಪಂಥಗಳಿಗೆ ಸಮಾನ ರೀತಿಯ ಒಲವು ಮೂಡಿಸಲು ಧಾರ್ಮಿಕ ಸಹಿಷ್ಣುತೆಯಿಂದ ಪ್ರೋತ್ಸಾಹಿಸಲು ಹಲವಾರು ಧಾರ್ಮಿಕ ಕೃತಿಗಳೂ ಸಹ ಹೊರಬಂದವು. ಅವುಗಳಲ್ಲಿ ಮಹಾತ್ಮೈಗಳ ಪಾತ್ರ ಬಹುಮುಖ್ಯವಾದದ್ದಾಗಿದೆ. ಹಾಗೆ ಇವರ ಕಾಲದಲ್ಲಿ ಧಾರ್ಮಿಕ ಸಾಮರಸ್ಯ ಮೂಡಿಸುವುದು ಒಂದು ಪ್ರಮುಖ ಉದ್ದೇಶವಾಗಿರುವುದನ್ನು ಕಾಣಬಹುದು.

ಅದರಲ್ಲಿ ತುಳುವ ಮನೆತನಕ್ಕೆ ಸೇರಿದವರು ವೈಷ್ಣವ ಧರ್ಮವನ್ನು ಬೆಂಬಲಿಸಿದರು. ವೈಷ್ಣವರು 'ಹರಿಯೇ ಪರಮಸತ್ಯ' ಜಗತ್ತು ಮಿಥ್ಯವಲ್ಲ ಸತ್ಯವೇ ಎಂಬ ಸಿದ್ಧಾಂತದ ಪ್ರತಿಪಾದಿತರಾಗಿದ್ದರು. ಅಲ್ಲಿಯವರೆಗೆ ಶೈವಧರ್ಮವು ರಾಜಧರ್ಮವಾಗಿ ಸಂಗಮರ ಕಾಲಕ್ಕೆ ಅದು ತನ್ನ ಔನತ್ಯವನ್ನು ಮುಟ್ಟಿದ್ದಿತು. "ಶೈವ ಧರ್ಮವು ಮುಂದೆ ವೀರಶೈವದಲ್ಲಿ ಸಮಾವೇಶಗೊಂಡು ವೀರಶೈವ ಕ್ರಿಯಾಚರಣೆಗಳನ್ನು ಒಂದೊಂದಾಗಿ ಅನುಸರಿಸುತ್ತ ಕೊನೆಗೆ ಸಮರಸವಾದಂತೆ ತೋರುತ್ತದೆ."[೬೩] ಮುಂದಿನ ಧಾರ್ಮಿಕ ಇತಿಹಾಸದಲ್ಲಿ ಎದ್ದು ಕಾಣುವ ಒಂದು ಅಂಶವೆಂದರೆ ಧರ್ಮಪಂಥೀಯ ಸಂಘರ್ಷಣೆಯ ಸ್ಥಿತಿ. "ವೀರಶೈವರ ಉಗಮದೊಂದಿಗೆ ಸ್ವಲ್ಪಮಟ್ಟಿಗೆ ಕಾಣಿಸಿಕೊಂಡು ಸಂಘರ್ಷ ಸ್ಥಿತಿ ಮುಂದುವರಿಯಿತು"[೬೪] ಹಿಂದೂ ಧರ್ಮದ ಒಂದು ಭಾಗವಾದ ವೀರಶೈವ ಧರ್ಮಕ್ಕೆ ನೀಡಿದ ಅತಿಯಾದ ಪ್ರೋತ್ಸಾಹವೇ ಮುಂದಿನ ಅರಸು ಮನೆತನಗಳಿಗೆ ತಮ್ಮ ಧಾರ್ಮಿಕ ನಿಲುವನ್ನು ವೈಷ್ಣವ ಧರ್ಮದ ಕಡೆಗೆ ತಿರುಗಿಸಿಕೊಳ್ಳಲು ಕಾರಣವಾಯಿತು. ಹಾಗಾಗಿಯೇ ವೈಷ್ಣವ ಕ್ಷೇತ್ರ ಮಹಾತ್ಮೈಗಳು ಅತೀ ಹೆಚ್ಚು ರಚನೆಯಾಗಿವೆ.

**ಅಡಿ ಟಿಪ್ಪಣಿಗಳು**

೧. ದೇಸಾಯಿ, ಪಿ.ಬಿ. ಸಾಲುಕೋಟಿ, **ಚರಿತ್ರೆ ಭಾಗ ೧,** ಪು.ಸಂ-೬೩

೨. ಗೋಪಾಲ್ ಬಾರಾ, **ಕರ್ನಾಟಕ ಇತಿಹಾಸ,** ಪು.ಸಂ-೨೭೭

೩. ಚಂದ್ರಶೇಖರಯ್ಯ ಬಿ.ಎಂ., **ಭಾರತೀಯ ಸಂಸ್ಕೃತಿ ಸಮೀಕ್ಷೆ,** ಪು.ಸಂ-೪೭

೪. **ಅದೇ ಪುಸ್ತಕ,** ಪು.ಸಂ-೪೮

೫. **ಅದೇ ಪುಸ್ತಕ,** ಪು.ಸಂ-೪೮

೬. ತಿಪ್ಪೇರುದ್ರಸ್ವಾಮಿ ಹೆಚ್., **ಕರ್ನಾಟಕ ಸಾಂಸ್ಕೃತಿಕ ಸಮೀಕ್ಷೆ,** ಪು.ಸಂ-೪೫

೭. ಸದಾನಂದ ಕನವಳ್ಳಿ, **ವೀರಶೈವ ಸಾಹಿತ್ಯ ಸಮೀಕ್ಷೆ,** ಪು.ಸಂ-೨೦೦

೮. **ಅದೇ ಪುಸ್ತಕ,** ಪು.ಸಂ-೨೦೧

೯. ತಿಪ್ಪೇರುದ್ರಸ್ವಾಮಿ ಹೆಚ್., **ಕರ್ನಾಟಕ ಸಾಂಸ್ಕೃತಿಕ ಸಮೀಕ್ಷೆ,** ಪು.ಸಂ-೫೪

೧೦. ಮಂಜಪ್ಪ ಶೆಟ್ಟಿ ಎಂ.ಪಿ., **ಶ್ರೀರಂಗ ಮಹಾತ್ಮ್ಯೆ,** ಪು.ಸಂ-XVIII

೧೧. ಡಾ.ತಿಪ್ಪೇರುದ್ರಸ್ವಾಮಿ ಹೆಚ್., **ಕರ್ನಾಟಕ ಸಾಂಸ್ಕೃತಿಕ ಸಮೀಕ್ಷೆ,** ಪು.ಸಂ-೧೬೨

೧೨. ಮಂಜಪ್ಪ ಶೆಟ್ಟಿ ಎಂ.ಪಿ., **ಶ್ರೀರಂಗನ ಮಹಾತ್ಮ್ಯೆ,** ಪು.ಸಂ-XVIII

೧೩. **ಅದೇ ಪುಸ್ತಕ,** ಪು.ಸಂ-XVIII

೧೪. ತಿಪ್ಪೇರುದ್ರಸ್ವಾಮಿ ಹೆಚ್., **ಕರ್ನಾಟಕ ಸಾಂಸ್ಕೃತಿಕ ಸಮೀಕ್ಷೆ,** ಪು.ಸಂ-೧೬೨

೧೫. ಸಣ್ಣಯ್ಯ ಬಿ.ಎಸ್.(ಸಂ), **ರಾಜಾವಳಿ ಕಥೆ,** ಪು.ಸಂ-XXXI

೧೬. ಮಂಜಪ್ಪ ಶೆಟ್ಟಿ ಎಂ.ಪಿ., **ಶ್ರೀರಂಗನ ಮಹಾತ್ಮ್ಯೆ,** ಪು.ಸಂ-XXXI

೧೭. ನರಸಿಂಹಾಚಾರ್ ಆರ್., **ಕರ್ನಾಟಕ ಕವಿ ಚರಿತೆ ಸಂ-೩,** ಪು.ಸಂ-೪೧

೧೮. ಗಂಗಾನಾಯಕ್ ಕೆ.ಎನ್., **ಕಕ್ಕುದ್ಗಿರಿ ಮಹಾತ್ಮ್ಯೆ,** ಪು.ಸಂ-೦೧

೧೯. ನರಸಿಂಹಾಚಾರ್ ಆರ್., **ಕರ್ನಾಟಕ ಕವಿ ಚರಿತೆಕಾರರು ಸಂ-೩,** ಪು.ಸಂ-೪೨

೨೦. **ಅದೇ ಪುಸ್ತಕ,** ಪು.ಸಂ-೦೮

೨೧. **ಅದೇ ಪುಸ್ತಕ,** ಪು.ಸಂ-೩೫೦

೨೨. ಮಂಜುನಾಥ ಜಿ.ಜಿ.(ಸಂ), **ನಂದಿ ಮಹಾತ್ಮ್ಯೆ,** ಪು.ಸಂ-೦೨

೨೩. **ಅದೇ ಪುಸ್ತಕ,** ಪು.ಸಂ-೦೩

೨೪. **ಅದೇ ಪುಸ್ತಕ,** ಪು.ಸಂ-೦೪

೨೫. **ಅದೇ ಪುಸ್ತಕ,** ಪು.ಸಂ-೦೪

೨೬. **ಅದೇ ಪುಸ್ತಕ,** ಪು.ಸಂ-೦೪

೨೭. **ಎಫಿಗ್ರಾಫಿಯಾ ಕರ್ನಾಟಕ ದೇವನಹಳ್ಳಿ ೧೫-೧೬ ಮತ್ತು ೩೭ನೇ ಶಾಸನಗಳು,** ಪು.ಸಂ-IX

೨೮. ಮಂಜುನಾಥನ್ ಜಿ.ಜಿ., **ನಂದಿ ಮಹಾತ್ಮೆ,** ಪು.ಸಂ-೩೧೮

೨೯. ನರಸಿಂಹಾಚಾರ್ಯ ಆರ್., **ಕರ್ನಾಟಕ ಕವಿ ಚರಿತೆ ಸಂ-೩,** ಪು.ಸಂ-೨೬

೩೦. ಭಾನುಮತಿ ವೈ.ಸಿ. **ಮಹಾಕೂಟ ಮಹಾತ್ಮೆ,** ಪು.ಸಂ-XIX

೩೧. ನರಸಿಂಹಾಚಾರ್ಯ ಆರ್., **ಕರ್ನಾಟಕ ಕವಿ ಚರಿತೆ ಸಂ-೩,** ಪು.ಸಂ-೭೭

೩೨. **ಅದೇ ಪುಸ್ತಕ,** ಪು.ಸಂ-೨೫

೩೩. ಭಾನುಮತಿ ವೈ.ಸಿ., **ಭುಜಬಲಿ ಚರಿತೆ,** ಪು.ಸಂ-೦೧

೩೪. ನರಸಿಂಹಾಚಾರ್ಯ ಆರ್., **ಕರ್ನಾಟಕ ಕವಿ ಚರಿತೆ ಸಂ-೨,** ಪು.ಸಂ-೩೧೧

೩೫. ಭಾನುಮತಿ ವೈ.ಸಿ., **ಭುಜಬಲಿ ಚರಿತೆ,** ಪು.ಸಂ-XII

೩೬. ಅದೇ ಪುಸ್ತಕ ಪುಟ XII

೩೭. ಸದಾಶಿವ ಕೆ., **ಸಮಗ್ರ ಭಾರತದ ಇತಿಹಾಸ,** ಪು.ಸಂ-೨೩೩

೩೮. **ಅದೇ ಪುಸ್ತಕ,** ಪು.ಸಂ-೨೩೪

೩೯. **ಅದೇ ಪುಸ್ತಕ,** ಪು.ಸಂ-೨೩೪

೪೦. ಭಾನುಮತಿ ವೈ.ಸಿ., **ಸಹ್ಯಾದ್ರಿಖಂಡ,** ಪು.ಸಂ-೦೯

೪೧. **ಕರ್ನಾಟಕ ಪರಂಪರೆ ಸಂ-೧,** ಪು.ಸಂ-೪೧

೪೨. **ದಕ್ಷಿಣ ಕನ್ನಡ ಜಿಲ್ಲೆಯ ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಇಲಾಖೆ,** ೨೦೦೭, ಪು.ಸಂ-೬೦

೪೩. ಮಂಜೇಶ್ವರ ಗಣಪತಿರಾವ್ ಐಗಳ್, **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ,** ಪು.ಸಂ-೨೩

೪೪. **ದಕ್ಷಿಣ ಕನ್ನಡ ಜಿಲ್ಲೆಯ ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಇಲಾಖೆ,** ಪು.ಸಂ-೬೧

೪೫. **ಅದೇ ಪುಸ್ತಕ,** ಪು.ಸಂ-೬೧

೪೬. ಭಾನುಮತಿ ವೈ.ಸಿ., **ಸಹ್ಯಾದ್ರಿಖಂಡ,** ಪು.ಸಂ-೮೨

೪೭. ಅದೇ ಪುಸ್ತಕ, ಪು.ಸಂ-೮೯

೪೮. **ಸುಧಾ, ನವೆಂಬರ್,** ೧೯೬೫, ಪು.ಸಂ-೩೧,

೪೯. ಭಾನುಮತಿ ವೈ.ಸಿ., **ಸಹ್ಯಾದ್ರಿಖಂಡ,** ಪು.ಸಂ-೧೦೪

೫೦. **ಅದೇ ಪುಸ್ತಕ,** ಪು.ಸಂ-೧೦೭

೫೧. **ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ-೩,** ಪು.ಸಂ-೩೪೬೬

೫೨. **ಅದೇ ಪುಸ್ತಕ,** ೧೯೮೬, ಪು.ಸಂ-೪೬೬,

೫೩. ಶಿವರುದ್ರಸ್ವಾಮಿ, **ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ,** ಪು.ಸಂ-೦೫

೫೪. **ಅದೇ ಪುಸ್ತಕ,** ಪು.ಸಂ-೪೮೪

೫೫. **ಅದೇ ಪುಸ್ತಕ,** ಪು.ಸಂ-೫೪

೫೬. **ಕರ್ನಾಟಕ ಕೈಪಿಡಿ,** ಪು.ಸಂ-೮೫

೫೭. **ಅದೇ ಪುಸ್ತಕ,** ಪು.ಸಂ-೧೧೩

೫೮. **ಅದೇ ಪುಸ್ತಕ,** ಪು.ಸಂ-೧೧೩

೫೯. **ಕರ್ನಾಟಕ ರಾಜ್ಯ ಗ್ಯಾಸೆಟಿಯಾರ್ ಸಂ-೩,** ಪು.ಸಂ-೫೩೮

೬೦. ಶಿವರುದ್ರಸ್ವಾಮಿ ಎಸ್.ಎನ್., **ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಾಂಸ್ಕೃತಿಕ,** ಪು.ಸಂ-೨೪೫

೬೧. **ಕರ್ನಾಟಕ ಗ್ಯಾಸೆಟಿಯರ್ ಇಲಾಖೆ,** ಬೆಂಗಳೂರು, ಪು.ಸಂ-೬೦೫

೬೨. ಶಿವರುದ್ರಸ್ವಾಮಿ ಎಸ್.ಎನ್., **ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ,** ಪು.ಸಂ-೬೭

೬೩. **The Aravidu Dynasty of Vijanagar,** P.No - ೨೮೬

೬೪. ಮಹೇಶ್.ಕೆ.(ಪಿಎಚ್.ಡಿ), **ಕೃಷ್ಣದೇವರಾಯ ಕಾಲದ ವೈಷ್ಣವ ದೇವಾಲಯಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

ಅಧ್ಯಾಯ : ಐದು

# ಮಹಾತ್ಮೆಗಳ ಸಾಂಸ್ಕೃತಿಕ ವಿಶ್ಲೇಷಣೆ

೫.೧ ಸಾಮಾಜಿಕ ಸಂಗತಿಗಳು

೫.೨ ಧಾರ್ಮಿಕ ಸಂಗತಿಗಳು

೫.೩ ರಾಜಕೀಯ ಸಂಗತಿಗಳು

೫.೪ ವಿನೋದಾವಳಿಗಳು

೫.೫ ಆರ್ಥಿಕ ಸಂಗತಿಗಳು

ಅಧ್ಯಾಯ : ಐದು

# ಮಹಾತ್ಮೆಗಳ ಸಾಂಸ್ಕೃತಿಕ ವಿಶ್ಲೇಷಣೆ

ಈ ಅಧ್ಯಾಯದಲ್ಲಿ ಬಂದಿರುವ ಸಾಂಸ್ಕೃತಿಕ ಎಂಬ ವಿಶೇಷಣಕ್ಕೆ ವಿವರಣೆ ನೀಡುವುದು ಅತ್ಯಗತ್ಯವಿಲ್ಲ. ಆದರೂ ಸಂಸ್ಕೃತಿ ಎಂಬ ಪದವನ್ನು ಯಾವ ಅರ್ಥದಲ್ಲಿ ಇಲ್ಲಿ ಬಳಸಿಕೊಳ್ಳಲಾಗಿದೆ ಎನ್ನುವುದನ್ನು ಕೆಲವು ವ್ಯಾಖ್ಯಾನಗಳ ಮೂಲಕ ತಿಳಿಯಬಹುದಾಗಿದೆ. 'ಸಂಸ್ಕೃತಿ' ಎಂಬ ಪದವನ್ನು ದಿನನಿತ್ಯದಲ್ಲಿ ಬಳಸುತ್ತೇವೆ. ಕೆಲವು ಸಂದರ್ಭದಲ್ಲಿ ಶಾಸ್ತ್ರೀಯವಾದ ಬರವಣಿಗೆಗಳಲ್ಲಿಯೂ ಸಾಂಸ್ಕೃತಿಕ ಎನ್ನುವುದನ್ನು ಬಳಕೆ ಮಾಡಲಾಗಿದೆ. ಇಂತಹ ಶಾಸ್ತ್ರೀಯ ಸಾಹಿತ್ಯವನ್ನು ಪ್ರಮುಖವಾಗಿರಿಸಿಕೊಂಡು ಕೆಲವು ವಿದ್ವಾಂಸರ ಹೇಳಿಕೆಗಳಿಂದ ಈ 'ಸಾಂಸ್ಕೃತಿಕ' ಎಂಬ ಪರಿಕಲ್ಪನೆಯನ್ನು ಅರ್ಥೈಸಲು ಪ್ರಯತ್ನ ಮಾಡಲಾಗಿದೆ.

"ಪೂರ್ಣತೆಯ ಸಿದ್ಧಿಗಾಗಿ ಮನುಷ್ಯನು ಮಾಡುತ್ತಿರುವ ಪ್ರಯತ್ನವೇ ಸಂಸ್ಕೃತಿ. ಸಂಸ್ಕೃತಿ ಎನ್ನುವುದು ಪ್ರಧಾನವಾಗಿ ಅಂತರಂಗಿಕವಾದ ವಿಕಾಸಕ್ಕೆ ಸಂಬಂಧಿಸಿದುದು. ಮನುಷ್ಯನಲ್ಲಿನ ಮೃಗತ್ವವನ್ನು ಅಳಿಸಿ ಅಲ್ಲಿ ನಿಜವಾದ ಮಾನವೀಯತೆಯನ್ನು ಸ್ಥಾಪಿಸುವುದೆ ಸಂಸ್ಕೃತಿ."[೧] ಹಾಗೆಯೇ ಹೆಸರಾಂತ ಕವಿ, ಚಿಂತಕರಾದ ರವೀಂದ್ರನಾಥ ಠಾಕೂರವರು 'Civilization' ಎಂಬ ಪದವನ್ನು ಸಂಸ್ಕೃತಿ ಎಂಬ ಅರ್ಥದಲ್ಲಿ ಬಳಸಿದ್ದಾರೆ. ಸಂಸ್ಕೃತಿ ಎನ್ನುವುದು ಒಂದು ಆಕಾರವನ್ನು ತಳೆದು ನಿಂತ ಆಕಸ್ಮಿಕ ಘಟನೆಗಳ ಮೊತ್ತವಲ್ಲ. ನಮ್ಮ ಪೂರ್ಣತೆಗಾಗಿ ರೂಪಿಸಿಕೊಂಡ ಯಾವುದೋ ದಿವ್ಯದರ್ಶನದ ಅಭಿವ್ಯಕ್ತಿ, ಇದಕ್ಕೆ ಸಮಾನವಾದ ಭಾರತೀಯ ಪದ 'ಧರ್ಮ'. ಮನುಷ್ಯ ನಿಜವಾಗಿ ಏನಾಗಿದ್ದಾನೆಯೋ ಅದರ ಅತ್ಯುತ್ತಮ ಅಭಿವ್ಯಕ್ತಿಯೇ ಧರ್ಮ. ಮನುಷ್ಯನ ಸಾಂಘಿಕ ಜೀವನದಲ್ಲಿ ಅಭಿವ್ಯಕ್ತಗೊಂಡ ಧರ್ಮವೇ ಸಂಸ್ಕೃತಿ. ಜೀವನಾದರ್ಶಗಳನ್ನು, ಮೌಲ್ಯಗಳನ್ನು ನಮ್ಮ ಮುಂದಿಡುವುದು ಸಂಸ್ಕೃತಿಯ ಘನೋದ್ದೇಶಗಳಲ್ಲೊಂದು. ಎಲ್ಲಿ ಸರಳವಾದ ರೂಪದಲ್ಲಿ ಆಧ್ಯಾತ್ಮವು ಅಭಿವ್ಯಕ್ತವಾಗುವುದೋ ಅಲ್ಲಿ ಸಂಸ್ಕೃತಿಯು ಅತ್ಯುತ್ತಮ ರೂಪದಲ್ಲಿ ಸೃಷ್ಟಿಯಾಯಿತೆಂದು ಭಾವಿಸಬೇಕು."[೨]

ಮೇಲಿನ ಎರಡು ವ್ಯಾಖ್ಯಾನಗಳು ಸಂಸ್ಕೃತಿ ಎಂದರೆ ಒಂದು ಸಮಾಜದ ನೀತಿ, ಧರ್ಮ, ಸಮಾಜದ ಜೀವನ ವಿಧಾನ, ಅದರ ಆಚಾರ-ವಿಚಾರ, ಆಲೋಚನಾ ವಿಧಾನಗಳನ್ನು ಸಂಪ್ರದಾಯಗಳು ನಿಯಂತ್ರಿಸುತ್ತವೆ ಅಥವಾ ಮಾರ್ಪಡಿಸುತ್ತವೆ ಎನ್ನುವ ಈ ಹಿನ್ನೆಲೆಯಲ್ಲಿ ರಚಿತವಾದ ನಮ್ಮ ಪ್ರಾಚೀನ ಸಾಹಿತ್ಯದ ರೂಪವೇ ಪುರಾಣ ಅಥವಾ ಮಹಾತ್ಮೈಗಳು. ಇವು ಧಾರ್ಮಿಕ ನೀತಿ-ನಿಯಮ ತತ್ವಬೋಧನೆಗಳಿಂದ ಮತ್ತು ಭಯ-ಭಕ್ತಿಗಳಿಂದ ಸಾಮಾಜಿಕ ಚೌಕಟ್ಟನ್ನು ಮೀರದೆ, ಸಾಮಾಜಿಕ ಬದ್ಧತೆಗಳನ್ನು ಜನಮನದಲ್ಲಿ ತುಂಬಲು ದೈವಿಕ ಸ್ವರೂಪವನ್ನು ತುಂಬಿ, ಉನ್ನತವಾದ ಮಾನವಿಕ ಮೌಲ್ಯಗಳನ್ನು ನಿರೂಪಿಸುವ ಗುರಿಯನ್ನು ಹೊಂದಿವೆ ಎಂದರೆ ತಪ್ಪಾಗದು.

ಇಂತಹ ಮಹಾತ್ಮೈಗಳು ಒಂದು ಸಮಾಜದ ಸಂಸ್ಕೃತಿಯನ್ನು ಸಾರುವ ಅಂಗವಾಗಿ ರೂಪಗೊಂಡಿವೆ. ತನಗೆ ಹಿತವೆನಿಸುವ ಸಂಪ್ರದಾಯ, ಆಚರಣೆ, ನಂಬಿಕೆಗಳನ್ನು ಇಂದಿಗೂ ಮನುಷ್ಯ ತನ್ನದೇ ನೆಲೆಯಲ್ಲಿ ಗುರುತಿಸಿಕೊಂಡು ಅವುಗಳನ್ನು ನಂಬಿಕೊಂಡು ಬಂದಿದ್ದಾನೆ. ಇದನ್ನು ಒಂದು ಸಮಾಜದ ಸಮುದಾಯಗಳ ಸಾಮಾಜಿಕ ಬದುಕಿನ ಸಂಸ್ಕೃತಿ ಎನ್ನುವರು. ಇಂತಹ ಸಾಂಸ್ಕೃತಿಕ ಸಂಗತಿಗಳು ಮಾನವನ ವಿಕಾಸದ ಸಂದರ್ಭಗಳಲ್ಲಿ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಬೇರೆ ಬೇರೆ ಸ್ವರೂಪಗಳನ್ನು ಪಡೆದುಕೊಂಡು ಬಂದಿವೆ. ಮಾನವ ಬದುಕಿನ ಸಾಂಸ್ಕೃತಿಕ ಸಂಗತಿಗಳು ಸಮುದಾಯದಿಂದ ಸಮುದಾಯಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನತೆಯಿರುವುದನ್ನು ಹಲವು ಅಧ್ಯಯನಗಳಿಂದ ಈಗಾಗಲೇ ಗುರುತಿಸಲಾಗಿದೆ. ಒಂದು ಕಾಲದ ಸಾಂಸ್ಕೃತಿಕ ಬದುಕನ್ನು ಒಟ್ಟಾರೆಯಾಗಿ ತಿಳಿಯಬೇಕೆಂದರೆ ಆ ಕಾಲದ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಪರಿಸ್ಥಿತಿಗಳ ಸಮಗ್ರ ಅರಿವು ನಮ್ಮಲ್ಲಿರಬೇಕು. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಒಂದು ಕಾಲದ ಒಂದು ಸಮಾಜದ, ಸಮುದಾಯದ ಸಮಗ್ರ ಜೀವನ ವಿಧಾನವನ್ನು ತಿಳಿಯಬಹುದು.

ಗತಿಸಿಹೋದ ಕಾಲದ ಬದುಕನ್ನು ತಿಳಿಯಲು ನಮಗೆ ಹಲವು ಆಕರಗಳು ಇಂದು ಲಭ್ಯವಿದೆ. ಶಾಸನಾಧಾರಗಳಿಂದ ವಿವಿಧ ಕಾಲಘಟ್ಟದ ಸಾಂಸ್ಕೃತಿಕ ಬದುಕನ್ನು ಈಗಾಗಲೇ ವಿದ್ವಾಂಸರು ಕಟ್ಟಿಕೊಟ್ಟಿದ್ದಾರೆ. ಹಾಗೆಯೇ ಪ್ರಾಚೀನ ಕಾಲದ ಸಾಹಿತ್ಯ ಕೃತಿಗಳಿಂದ ಅಂದಿನ ಜೀವನ ಚಿತ್ರಣಗಳು ಇಂದು ನಮಗೆ ದೊರೆಯುತ್ತವೆ. ಹೀಗೆ ಆಯಾ ಕಾಲದಲ್ಲಿ ರಚನೆಯಾದ ಕಾವ್ಯ, ಮಹಾಕಾವ್ಯ, ಪುರಾಣಾದಿಗಳಿಂದ ಅಂದಿನ ಸಾಮಾಜಿಕ, ಸಾಂಸ್ಕೃತಿಕ ಬದುಕಿನ ಸಂಗತಿಗಳು ನಮಗೆ ಸಿಗುತ್ತವೆ. ಅವುಗಳ ಅಧ್ಯಯನದಿಂದ

ಅಂದಿನ ಬದುಕಿನ ವಿವಿಧ ಆಯಾಮಗಳ ಪರಿಚಯವಾಗುವುದರ ಜೊತೆಗೆ ಇಂದಿನ ನಮ್ಮ ಸಾಂಸ್ಕೃತಿಕ ಬದುಕಿಗೂ ಅಂದಿನ ಬದುಕಿಗೂ ಇರುವ ವ್ಯತ್ಯಾಸ, ಸಾಮ್ಯತೆಗಳ ಅರಿವು ನಮಗಾಗುತ್ತದೆ.

ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಕನ್ನಡದಲ್ಲಿ ರಚನೆಯಾದ ಮಹಾತ್ಮೆಗಳನ್ನು ಆ ಕಾಲದಲ್ಲಿ ನಡೆದ ಸಾಂಸ್ಕೃತಿಕ ಬದುಕಿನ ಸ್ವರೂಪವನ್ನು ತಿಳಿಯುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ. ಸುಮಾರು ಹದಿನಾರು ಮತ್ತು ಹದಿನೇಳನೆಯ ಶತಮಾನದ ಆರಂಭದಲ್ಲಿ ರಚನೆಗೊಂಡ ಸ್ಥಳ ಮಹಾತ್ಮೆಗಳು ಆಯಾ ಪ್ರದೇಶದ ಪ್ರಮುಖ ಐತಿಹಾಸಿಕ ಪ್ರಸಿದ್ಧ ಸ್ಥಳಗಳಾಗಿದ್ದವು ಎನ್ನುವುದು ಗಮನಾರ್ಹ ಸಂಗತಿ. ಈ ಹಿನ್ನೆಲೆಯಲ್ಲಿ ಸಾಂಸ್ಕೃತಿಕ ಬದುಕಿನ ಅನಾವರಣವನ್ನು ಇಲ್ಲಿ ಮಾಡಲಾಗಿದೆ. ಅರಸರ ಕಾಲಘಟ್ಟದಲ್ಲಿ ರಚನೆಯಾದ ಎಲ್ಲಾ ಮಹಾತ್ಮೆಗಳು ಬಹುತೇಕವಾಗಿ ಅಂದಿನ ಜನತೆಯ ಬದುಕಿನ ವಿವರಗಳ ಮೂಲಕ್ಕೆ ಅನುಸಾರವಾಗಿ ರಚನೆಯಾಗಿರುವುದನ್ನು ಗಮನಿಸಬಹುದು. ಭಾಷಿಕವಾಗಿ ಹಾಗೂ ಕಥಾ ನಿರೂಪಣೆಯ ವಿಧಾನದಲ್ಲಿ ಬಳಸುವ ಸಾಹಿತ್ಯಿಕ ಭಾಷೆ ಮತ್ತು ಪ್ರಕಾರಗಳು ಮಾತ್ರ ವಿಶಿಷ್ಟವೆನಿಸುತ್ತವೆ. ಅದಕ್ಕೆ ಕಾರಣ ಈ ಪುರಾಣಗಳಲ್ಲಿ ಕಂಡುಬರುವ ಕವಿಗಳ ಕಾಲದ ಸಂದರ್ಭ ಹಾಗೂ ಅವರ ಕಥೆಯಲ್ಲಿ ಬರುವ ಜನಜೀವನದ ಸಂದರ್ಭಗಳ ಸಾಂಸ್ಕೃತಿಕ ಬದುಕಿನ ಸಂಗತಿಗಳಾಗಿವೆ.

ಅಧ್ಯಯನ ದೃಷ್ಟಿಯಿಂದ ಮಹಾತ್ಮೆಗಳಲ್ಲಿ ಕಂಡುಬರುವ ವಿವಿಧ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಅಧ್ಯಯನ ಮಾಡಲಾಗಿದೆ.

೧. ಸಾಮಾಜಿಕ ಸಂಗತಿಗಳು

೨. ಧಾರ್ಮಿಕ ಸಂಗತಿಗಳು

೩. ರಾಜಕೀಯ ಸಂಗತಿಗಳು

೪. ವಿನೋದಾವಳಿಗಳು

೫. ಆರ್ಥಿಕ ಸಂಗತಿಗಳು

**೫.೧ ಸಾಮಾಜಿಕ ಸಂಗತಿಗಳು**

ಮನುಷ್ಯನ ಸಾಮಾಜಿಕ ಬದುಕು ಮತ್ತು ಜೀವನ, ಅವರ ನಡೆ-ನುಡಿ, ಸಂಪ್ರದಾಯಗಳು, ಆಚರಣೆಗಳು ಮಾನವನ ಸಾಂಸ್ಕೃತಿಕ ಅಧ್ಯಯನಗಳ ಪರಿಧಿಯಲ್ಲಿ ಬರುವ ಅನೇಕ ಅಂಶಗಳಲ್ಲಿ ಪ್ರಮುಖವಾದುದು. ಇವು ಮಾನವನ ಉಗಮದ ಆದಿಯಿಂದ ಹಿಡಿದು ಇಂದಿಗೂ ಜೀವಂತವಾಗಿರುವಂತಹವು. ಇಷ್ಟೇ ಅಲ್ಲದೆ ಮನುಷ್ಯನು

ಪ್ರಕೃತಿಯೊಂದಿಗೆ ತನ್ನದೇ ಆದ ನೆಲೆಯಲ್ಲಿ ಒಂದು ಸಂಸ್ಕೃತಿಯನ್ನು ರೂಪಿಸಿಕೊಂಡಿದ್ದನು. ಅವನ ಹುಟ್ಟಿನಿಂದ ಅಂತ್ಯದವರೆಗೆ ಕೆಲವು ಸಂಪ್ರದಾಯ, ಆಚಾರ–ವಿಚಾರ ಹಾಗೂ ಆಲೋಚನೆಗಳನ್ನು ರೂಢಿಗತ ಮಾಡಿಕೊಂಡಿರುತ್ತಾನೆ. ಇದು ಅವನ ಜೀವನದ ಪ್ರತಿಯೊಂದು ಹಂತದಲ್ಲೂ ಅಂದರೆ ಅವನ ಭಯ–ಭಕ್ತಿ, ನೋವು–ನಲಿವು, ಸುಖ–ದುಃಖ, ಬಯಕೆ, ಹುಟ್ಟು–ಸಾವು ಎಲ್ಲಾ ರೀತಿಯಿಂದಲೂ ಅವನನ್ನು ಕೇಂದ್ರೀಕರಿಸಿರುತ್ತದೆ. ಆ ನಂತರ ಮನುಷ್ಯ ತನ್ನ ಆತ್ಮಸಂತೃಪ್ತಿಗಾಗಿ ಪ್ರಕೃತಿಯಲ್ಲಿರುವ ಕಲ್ಲು, ಮರ, ಅಗ್ನಿ, ಜಲಗಳನ್ನು ಆರಾಧಿಸುವಲ್ಲಿ ತೊಡಗಿದನು. ಅಲ್ಲದೆ ಭೀಕರ ಮಳೆ ಗಾಳಿಗಳಿಗೆ ಅಂದರೆ ಪ್ರಕೃತಿಯ ವಿಕೋಪಗಳಿಗೆ ಹೆದರಿ ಭಕ್ತಿಯಿಂದ ಹಾಡಲು ಶುರು ಮಾಡಿದರು. ಇವೆಲ್ಲ ಮೊದಮೊದಲು ಮೌಖಿಕ ಸಾಹಿತ್ಯವಾಗಿತ್ತು. ಕಾಲಾಂತರದಲ್ಲಿ ಈ ಮೌಖಿಕ ರೂಪದ ಸಾಹಿತ್ಯವನ್ನು ಬರಹ ರೂಪಕ್ಕೆ ಇಳಿಸಿದರು. ಅಂತಹ ಸಾಹಿತ್ಯಿಕ ರೂಪಗಳೇ ಮಹಾತ್ಮ್ಯೆಗಳು.

ಇಲ್ಲಿ ಬರುವ ಸಂಸ್ಕೃತಿಯ ಭಿನ್ನತೆಯನ್ನು ಅರಿಯುವುದು ಕಷ್ಟವಾಗುವುದಿಲ್ಲ. ಕಾರಣ ಯಾವುದೇ ಬದಲಾವಣೆ ಇಲ್ಲದೆ ವಿಷಯ–ವಸ್ತು ಒಂದೇಯಾಗಿರುತ್ತದೆ. ಆದ್ದರಿಂದ ಇಲ್ಲಿರುವ ಸಂಪ್ರದಾಯ, ನಂಬಿಕೆ, ಆಚರಣೆ, ಜನರ ಸಾಮಾಜಿಕವಾದ ಜೀವನ ಚಿತ್ರಣವನ್ನು ಅರಿಯಲು ಸುಲಭವಾಗುತ್ತದೆ. ಇಂತಹ ಆಚರಣೆಗಳು ಮಾನವನ ಉಗಮದ ಆದಿಯಿಂದ ಹಿಡಿದು ಇಂದಿನವರೆಗೂ ಜೀವಂತವಾಗಿದೆ. ಹೀಗೆ ಕಾಲಾಂತರಗಳ ಸಂದರ್ಭದಲ್ಲಿ ಉಳಿದು ಬೆಳೆದುಬಂದಿರುವ ಹಾಗೂ ಇಂದಿಗೂ ಮುಂದುವರೆಸಿಕೊಂಡು ಬರುತ್ತಿರುವ ಸಮಾಜದ ಹಲವು ಸಾಂಸ್ಕೃತಿಕ ಮುಖಗಳ ದರ್ಶನವನ್ನು ಈ ಅಧ್ಯಯನದ ಸಹಾಯದಿಂದ ತಿಳಿಯಲು ಸಹಕಾರಿಯಾಗಿದೆ. ಹಾಗಾಗಿ ಅಂದಿನ ಮಹಾತ್ಮ್ಯೆಗಳ ರಚನಾಕಾಲಕ್ಕೂ ಇಂದಿನ ಸಮಕಾಲೀನಕ್ಕೂ ಇರುವ ವೈರುಧ್ಯಗಳನ್ನು ಅಥವಾ ಸಾಮತ್ಯೆಯನ್ನು ಇಲ್ಲಿ ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

### ಅ. ವರ್ಣ ವ್ಯವಸ್ಥೆ

ಸಾಮಾನ್ಯವಾಗಿ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿರುವ ವರ್ಣಗಳು ಹದಿನಾರು–ಹದಿನೇಳನೆಯ ಶತಮಾನದಲ್ಲಿಯೂ ಜೀವಂತವಾಗಿದ್ದವು. ಅದರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಇವು ಸಮಾಜದಲ್ಲಿರುವ ಪ್ರಮುಖ ವರ್ಣವ್ಯವಸ್ಥೆಯಾಗಿದ್ದಿತು. ಇಲ್ಲಿ ಮೇಲ್ಜಾತಿ ಎಂದರೆ ಬ್ರಾಹ್ಮಣ ವರ್ಗ. ವೇದೋಪನಿಷತ್ತುಗಳನ್ನು ಬಲ್ಲವರು, ಇವರು ಕೆಳಜಾತಿಯವರನ್ನು ತುಂಬಾ ಹೀನಾಯವಾಗಿ ನೋಡುತ್ತಿದ್ದರೆಂಬುದಕ್ಕೆ ಹಲವಾರು ನಿದರ್ಶನಗಳು ಎಲ್ಲಾ ಮಹಾತ್ಮ್ಯೆಗಳಲ್ಲೂ ದೊರೆಯುತ್ತವೆ. ಸಾಮಾನ್ಯವಾಗಿ ಇಂದಿಗೂ

ಶೂದ್ರರನ್ನು ಕೀಳಾಗಿ ಕಾಣುವ ಸಮಾಜವಿರುವಾಗ ಹದಿನಾರನೆಯ ಶತಮಾನದ ಕಾಲದ ಪರಿಸರದಲ್ಲೂ ಕೂಡಾ ಇಂತಹ ದಲಿತರ ಪರಿಸ್ಥಿತಿ ಹೀನಾಯವಾಗಿತ್ತು ಎಂಬುದಕ್ಕೆ ಚೆಲುವಾಂಬೆಯ ಕೃತಿಗಳು, ಕಕ್ಕುದ್ಗಿರಿ ಮಹಾತ್ಮೆ, ಯಾದವಗಿರಿ ಮಹಾತ್ಮೆ ಮುಂತಾದ ಹಲವು ಕೃತಿಗಳಲ್ಲಿ ಗುರ್ತಿಸಬಹುದಾಗಿದೆ. ಇಂತಹ ವಿಚಾರಗಳನ್ನು ಕವಿಗಳು ಕಥೆಯೊಳಗಿರುವ ಉಪಕಥೆಗಳಲ್ಲಿ; ಅದರಲ್ಲೂ ತೀರ್ಥಕ್ಷೇತ್ರಗಳಂತಹ ವಿಚಾರಗಳನ್ನು ಇಟ್ಟುಕೊಂಡು ಕಾವ್ಯಕಟ್ಟುವ ಸಂದರ್ಭದಲ್ಲಿ ಅಂದಿನ ಶೂದ್ರರ ಬದುಕಿನ ಸ್ವರೂಪವನ್ನು ಕಟ್ಟಿಕೊಟ್ಟಿರುವುದು ತುಂಬಾ ವಿಶೇಷವಾಗಿದೆ.

ವರ್ಣವ್ಯವಸ್ಥೆಯು ಸಾಮಾಜಿಕವಾಗಿ ಒಂದು ಪಿಡುಗಿನಂತೆ ಪರಿಣಮಿಸಿದೆ. ಈ ಸಾಮಾಜಿಕ ವ್ಯವಸ್ಥೆಯಲ್ಲಿ ಧರ್ಮ, ಜಾತಿ, ಮೇಲು-ಕೀಳೆಂಬ ಭಾವನೆ ಚರಿತ್ರೆಯುದ್ದಕ್ಕೂ ನಡೆದುಕೊಂಡೇ ಬಂದಿದೆ. ಇಂತಹ ವ್ಯವಸ್ಥೆಯು ಒಂದು ಕಾಲದಿಂದ ಇನ್ನೊಂದು ಕಾಲಘಟ್ಟದ ಸಂದರ್ಭದಲ್ಲಿಯೂ ಇತ್ತು ಎನ್ನುವುದಕ್ಕೆ ಹತ್ತು ಹಲವಾರು ಕಾವ್ಯಗಳಲ್ಲಿ ನಿದರ್ಶನಗಳು ದೊರೆಯುತ್ತವೆ. ಅದರಲ್ಲಿಯೂ ಚೆಲುವಾಂಬೆಯ ಕೃತಿಗಳಲ್ಲಿ ಬರುವ ಒಂದು ನಿದರ್ಶನವನ್ನು ಹೀಗೆ ನೋಡಬಹುದು. 'ಮಾಧವನೆಂಬ ಬ್ರಾಹ್ಮಣನೊಬ್ಬ ಮಾಲತಿಯೆಂಬ ಹೊಲತಿಯೊಬ್ಬಳ ಸಂಗ ಮಾಡಿದನು. ತನ್ನ ನಿಜವಾದ ಹೆಂಡತಿಯನ್ನು ತೊರೆದನು. ಕೆಲವು ಕಾಲದ ನಂತರ ಮಾಲತಿ ಇವನನ್ನು ಬಿಟ್ಟು ದೂರ ಹೋದಳು. ಆಗ ಮಾಧವನು ಅನಾಥನಾಗಿ ನಾನಾ ರೋಗಗಳಿಂದ ಪೀಡಿತನಾಗಿ ಕಷ್ಟಗಳನ್ನು ಅನುಭವಿಸುತ್ತ, ಎಲ್ಲರಿಂದಲೂ ದೂರಿಸಿಕೊಳ್ಳುತ್ತ ಅಲೆಯತೊಡಗಿದನು. ಹೀಗೆ ಅಲೆಯುತ್ತ ಶೇಷಾಚಲದ ಬಳಿಗೆ ಬಂದು ಅಲ್ಲಿಯ ತೀರ್ಥದಲ್ಲಿ ಮಿಂದು ಗಿರಿಯನ್ನೇರಿದನು. ಕೂಡಲೆ ಅವನ ಪಾಪಗಳೆಲ್ಲ ನಾಶವಾಗಿ ಪರಿಶುದ್ಧನಾದನು' ಎಂದು ಕಥೆಯು ಮುಂದುವರೆಯುತ್ತದೆ.

ಇಂತಹ ಬ್ರಾಹ್ಮಣ ಮತ್ತು ಕೆಳಜಾತಿಯ ಸ್ತ್ರೀಯರು ಸೇರುವ ಪ್ರಸಂಗ ಹಲವು ಕೃತಿಗಳಲ್ಲಿ ಬರುತ್ತದೆ. ಆದ್ದರಿಂದ ಇಲ್ಲಿ ಜಾತೀಯತೆಯು ಇತ್ತು ಎಂದು ಗುರುತಿಸಲಾಗುತ್ತದೆ. ಅಲ್ಲದೆ ಬ್ರಾಹ್ಮಣ ಧರ್ಮವನ್ನು ಉನ್ನತೀಕರಿಸಿ ಬರೆಯಲಾಗಿದೆ. ಬ್ರಾಹಣರು ಎಂತಹ ತಪ್ಪು ಮಾಡಿದರೂ ಸಹ ತೀರ್ಥಕ್ಷೇತ್ರದಲ್ಲಿ ಮಿಂದರೆ ಅವರ ಸರ್ವಪಾಪಗಳು ನಾಶವಾಗಿ ಸ್ವರ್ಗ ಸೇರುತ್ತಾರೆ ಎಂಬ ಸಂದೇಶವನ್ನು ಎಲ್ಲಾ ಮಹಾತ್ಮೆಯ ಕಥೆಗಳಲ್ಲೂ ಕಾಣಬಹುದು. ಇಲ್ಲಿ ಹೀನ ಕುಲದವರನ್ನು ಎಷ್ಟು ಕೀಳಾಗಿ ಕಾಣುತ್ತಿದ್ದರು ಎನ್ನುವುದಕ್ಕೆ ಮೇಲೆ ಕೊಟ್ಟಿರುವ ಇಂತಹ ಉದಾಹರಣೆಗಳೇ ಸಾಕ್ಷಿ. ಈ ವರ್ಣವ್ಯವಸ್ಥೆ ಇಂದಿಗೂ ನಮ್ಮ

ಸಮಾಜದಲ್ಲಿ ಕಂಡುಬರುತ್ತಿರುವುದು ವಿಪರ್ಯಾಸವೇ ಆಗಿದೆ. ಒಬ್ಬ ಬ್ರಾಹ್ಮಣ ಹೊಲತಿಯನ್ನು ಸೇರಿದರೆ ರೋಗರುಜಿನಗಳಿಂದ ಸಾಯುತ್ತಾನೆ ಎಂಬ ಚಿತ್ರಣ ಮೇಲ್ಜಾತಿಯವರ ದುರಾಲೋಚನೆಗಳನ್ನು ಕುರಿತು ಹಿಂದಿನ ಕಾಲದಲ್ಲಿ ಶೂದ್ರರನ್ನು ಯಾವ ರೀತಿಯಲ್ಲಿ ನೆಡೆಸಿಕೊಂಡಿರಬಹುದು ಎಂಬ ಅಂಶಗಳನ್ನು ಈ ಮೂಲಕ ತಿಳಿಯಬಹುದು. ಹೀಗೆ ಎಲ್ಲಾ ಕೃತಿಗಳಲ್ಲಿರುವ ವರ್ಣವ್ಯವಸ್ಥೆಯ ಸಣ್ಣಸಣ್ಣ ತುಣುಕುಗಳನ್ನು ತೀರ್ಥಕ್ಷೇತ್ರಗಳ ಹಂದರದಲ್ಲಿ ಹೆಣೆದಿರುವ ಕಥೆಗಳಲ್ಲಿ ನೋಡಬಹುದು.

**ಆ. ಸಂಪ್ರದಾಯಗಳು**

ಪಾರಂಪರಿಕವಾಗಿ ಇಂದಿಗೂ ಉಳಿದುಕೊಂಡು ಬಂದಿರುವ ನಮ್ಮ ಜೀವನ ಪರಂಪರೆಯ ಸಂಪ್ರದಾಯಗಳು ಹಲವಾರು ನೆಲೆಗಳಲ್ಲಿ ವಿಶಿಷ್ಟ ತೆರನಾದವು. ಸಂಪ್ರದಾಯಗಳು ಇಲ್ಲಿ ಸಂಸ್ಕೃತಿಯ ಒಂದು ಭಾಗವಾಗಿವೆ. ಸಮಾಜದ ಪ್ರತಿಯೊಂದು ಸಮುದಾಯವು ತನ್ನದೇ ಆದ ಕೆಲವು ರೂಢಿಗತ ಸಂಪ್ರದಾಯಗಳನ್ನು ಬೆಳೆಸಿಕೊಂಡು ಬಂದಿವೆ. ಇಂತಹ ಸಂಪ್ರದಾಯಗಳನ್ನು ಆಯಾ ಸಮುದಾಯದವರು ಚಾಚೂ ತಪ್ಪದೆ ಆಚರಿಸಿಕೊಂಡು ಬರುತ್ತಿದ್ದಾರೆ. ಅಂತಹ ಕೆಲವು ಸಂಪ್ರದಾಯಗಳನ್ನು ಈ ಕೆಳಗಿನಂತೆ ಗುರುತಿಸಲಾಗಿದೆ.

*** ವಿವಾಹ ವ್ಯವಸ್ಥೆ**

ಮಹಾತ್ಮೆಗಳು ಜನಸಾಮಾನ್ಯರಿಗಾಗಿ ಬರೆದ ಕಾವ್ಯ, ಹಾಗಾಗಿ ಇಲ್ಲಿ ಕವಿಯ ಕಾಲದ ಆಚರಣೆಗಳು, ನಂಬಿಕೆಗಳು, ರೀತಿ-ರಿವಾಜುಗಳು ಇಲ್ಲಿ ಸಹಜವಾಗಿಯೇ ವ್ಯಕ್ತವಾಗಿರುತ್ತವೆ. ಅದರಲ್ಲಿ ವಿವಾಹ ಪದ್ಧತಿಯೂ ಒಂದು. ಕವಿ ರಂಗದ ಕಾವೇರಿ ಮಹಾತ್ಮೆಯಲ್ಲಿ ಅಗಸ್ತ್ಯ ಮತ್ತು ಕಾವೇರಿಯ ಮದುವೆ ಸಂದರ್ಭವನ್ನು ವರ್ಣಿಸುತ್ತ ತನ್ನ ಕಾಲದ ವಿವಾಹದ ರೀತಿ ನೀತಿಗಳನ್ನು ಬಹಳ ವಿವರವಾಗಿ ವರ್ಣಿಸಿದ್ದಾನೆ.

ಅಂದು ವಧುವಿನ ಸಿಂಗಾರಕ್ಕಾಗಿ ಬಳಸುತ್ತಿದ್ದ ಅಲಂಕಾರ ಪರಿಕರಗಳೆಂದರೆ ಗೋಧೂಮ, ಚಂದ್ರಾಕ್ಷತೆ, ಕುಂಕುಮ, ಗಂಧಾಕ್ಷತೆ, ಸುಗಂಧ, ಶುಭದ್ರವ್ಯಗಳು, ಹೂಮಾಲೆಗಳು, ಬಣ್ಣಬಣ್ಣದ ಬೆಲೆಬಾಳುವ ವಸ್ತ್ರಗಳು ಇತ್ಯಾದಿ. ಹಾಗೆಯೇ ಅಂದಿನ ಮದುವೆ ಮಂಟಪವನ್ನು ಅಲಂಕರಿಸುತ್ತಿದ್ದ ರೀತಿಯು ವೈಶಿಷ್ಟ್ಯಪೂರ್ಣವಾಗಿದೆ. ಅದೊಂದು ವೈಭವದ ಕಲ್ಯಾಣ ಮಂದಿರದಲ್ಲಿ ಮಣಿಖಚಿತವಾದ ಸುವರ್ಣದ ಕಲ್ಯಾಣಮಂಟಪ. ಅದರ ಎರಡೂ ಕಡೆಗಳಲ್ಲಿ ವಜ್ರದಿಂದ ನಿರ್ಮಿಸಿದ ಕಂಬಗಳು; ಸುತ್ತಲೂ ಹೊದಿಸಿದ ವಸ್ತ್ರ. ಮೇಲೆ ಸಾಲಾಗಿ ಕೂರಿಸಿದ ಚಿನ್ನದ ಕಲಶಗಳು. ಆ ಮಂಟಪದ ಮಧ್ಯದಲ್ಲೊಂದು

ವೇದಿಕೆ. ಅದಕ್ಕೆ ನಾಲ್ಕು ಗೋಡೆಗಳು. ಅವಕ್ಕೆ ಸುತ್ತಿದ ಮಿನುಗುವ ಕನಕಾಂಬರ. ಆ ಮಂಟಪವನ್ನು ಹಲಸು, ಕಿತ್ತಳೆ, ನಿಂಬೆ, ಮಾವು, ನೇರಳೆ, ಅಡಿಕೆ ಮುಂತಾದ ಹಣ್ಣುಕಾಯಿಗಳಿಂದಲೂ ಹಾಗೂ ಅಸುಗೆ, ಸಂಪಗೆ, ಅರಳಿದ ಮಲ್ಲಿಗೆ, ಹೊಂಗೇದಾವರೆ ಮುಂತಾದ ಹೂಗಳಿಂದಲೂ ಅಲಂಕರಿಸುತ್ತಿದ್ದರು. ಸುತ್ತಲೂ ತಳಿರುತೋರಣ, ಮುತ್ತಿನ ಮಾಲೆಗಳು ಅಪ್ಪಿಕೊಂಡಿದ್ದವು. ಮುತ್ತಿನ ಗುಂಡಿಗಳು ನಾಲ್ಕು ಕಡೆಗಳಲ್ಲಿ ಒಲೆಯುತ್ತ ತೂಗಾಡುತ್ತಿದ್ದವು. ಅಲ್ಲದೆ ಅಡಕೆ, ಬಾಳೆ, ಮತ್ತು ತೆಂಗಿನ ಗೊನೆಗಳು ತೂಗುತ್ತಿದ್ದವು. ಹಾಗೆ ನಾಲ್ಕು ಮೂಲೆಗಳಲ್ಲಿ ಗೊನೆ ಬಾಳೆಗಳನ್ನು ನಿಲ್ಲಿಸಿ ಬಿಗಿದುಕಟ್ಟುತ್ತಿದ್ದರು. ನಾನಾ ಬಗೆಯ ಧೂಪ, ಕರ್ಪುರ, ಕಸ್ತೂರಿ, ಅರಗು, ಚಂದನ ಮಿಶ್ರಿತ ಯಕ್ಷಕಥರ್ಮಗಳನ್ನು ಬಂಗಾರದ ಭರಣಿಗಳಲ್ಲಿ ಇಟ್ಟಿರುತ್ತಿದ್ದರು. ಅವುಗಳಿಂದ ಏಳುತ್ತಿದ್ದ ಸುಗಂಧ ಧೂಮ ಇಡೀ ವಾತಾವರಣವನ್ನೇ ಘಮಘಮಿಸುತ್ತಿದ್ದಿತು. ಇಡೀ ಮಂಟಪ ಬಗೆಬಗೆಯ ಹೂಮಾಲೆಗಳಿಂದ ಅಲಂಕಾರಗೊಂಡಿರುತ್ತಿತ್ತು. ಅಲ್ಲದೇ ಮಂಗಳ ಘೋಷದ ನಾದ ಮೊಳಗುತ್ತಿತ್ತು.

ವಧುವಿಗೆ ಹರಿದ್ರಾಸ್ನಾನ ಮಾಡಿಸಿದ ನಂತರ ದಿವ್ಯದುಕೂಲ ರತ್ನಾಭರಣಗಳಿಂದ ಅಲಂಕರಿಸುತ್ತಿದ್ದರು. ಗೋತ್ರೋಚ್ಚಾರಣೆಯಾದ ನಂತರ ತೆರೆ ಹಿಡಿದು ಮಂತ್ರೋಚ್ಚಾರಣೆ ಮಾಡಿ, ಮಧುಪರ್ಕಾಹಿಗಳಿಂದ ಪೂಜಿಸಿದ ಅಕ್ಷತೆಯನ್ನು ಎರಚುತ್ತಿದ್ದರು. ಆ ನಂತರ ಸತಿಪತಿಗಳಿಬ್ಬರು ಒಂದಾಗಿ ಮಗಳನ್ನು ಧಾರೆಯೆರೆದು ಕೊಡುತ್ತಿದ್ದರು. ಅನಂತರ ವರದಕ್ಷಿಣೆ, ಗುರುಪೂಜೆಗಳಾದ ನಂತರ ಮಂಗಳಗೀತೆ ಹಾಡುತ್ತಿದ್ದರು ಎಂದು ತಿಳಿದುಬರುತ್ತದೆ. ಒಟ್ಟಾರೆಯಾಗಿ ಆ ಕಾಲದ ಮದುವೆಯ ಪರಿಕಲ್ಪನೆಯನ್ನು ನಾವು ಈ ಮಹಾತ್ಮೆಗಳ ಹಿನ್ನೆಲೆಯಿಂದ ಗುರುತಿಸಬಹುದು. ಇದನ್ನು ಕವಿರಂಗದ ಕಾವೇರಿ ಮಹಾತ್ಮೆಯಲ್ಲಿನ ಇಪ್ಪತ್ತನೆಯ ಅಧ್ಯಾಯದಲ್ಲಿ ಕಾಣಬಹುದು.

ಅದೇ ರೀತಿಯಾಗಿ ಭುಜಬಲಿಯ ಚರಿತೆಯಲ್ಲಿ ನಾಲ್ಕನೆಯ ಸಂಧಿಯಿಂದ ಎಂಟನೆಯ ಸಂಧಿಯವರೆಗೆ ವಿವಾಹ ಸಂಪ್ರದಾಯಗಳು ಸುಧೀರ್ಘವಾಗಿ ಪ್ರಸ್ತಾಪವಾಗುತ್ತವೆ. ಹೆಣ್ಣು ಕೇಳುವುದರಿಂದ ಹಿಡಿದು ಮದುವೆಯಾಗುವವರೆಗಿನ ಸಂಪೂರ್ಣ ವಿವರಗಳು ಇಲ್ಲಿ ದಾಖಲಾಗಿವೆ. ಕವಿ ಇಲ್ಲಿ ಭುಜಬಲಿಯ ಮದುವೆಯನ್ನು ವರ್ಣಿಸಲು ಹೊರಟರೂ; ಒಳಗಿನ ವಿವರಗಳಲ್ಲಿ ತಾನು ಆ ಪರಿಸರದ ಸುತ್ತಮುತ್ತಲಲ್ಲಿ ನಡೆಯುವ ಮದುವೆ ಸಂಪ್ರದಾಯಗಳನ್ನೇ ವರ್ಣಿಸಿರುವುದರಿಂದ ಜಾನಪದದ ಹಿನ್ನೆಲೆಯಿಂದಲೂ ಅಧ್ಯಯನಕ್ಕೆ

ಪೂರಕವಾಗುತ್ತದೆ. ಇಚ್ಛಾ ಮಹಾದೇವಿಯನ್ನು ಕೊಡಬೇಕೆಂದು ಕೇಳಲು ಹೋದಾಗ ಅವರು ಬಂದವರಿಗೆ ಕೈಮುಗಿದು, ಕಾಲು ತೊಳೆಯಿಸಿ, ರೇಷ್ಮೆ ಬಟ್ಟೆ ಹಾಕಿಸಿ ಆಸನವನ್ನು ಕೊಟ್ಟು ಕ್ಷೇಮವೆ ಎಂದು ಎಲ್ಲರನ್ನೂ ಮಾತಾಡಿಸಿ

*"ಪರಿಮಳ ವಸ್ತ್ರಾಭರಣ ತಾಂಬೂಲವ। ಪರವಿಡಿದೆಲ್ಲಹಿಗಿತ್ತು*

*ಹಿರಿಯೂ ಕಚ್ಚನು ಕೂಡಿಯು ಗಂಭೀರ। ಪುರುಷನು" ಸದುವಿನೆಯದೊಳ್ (೪-೭೮)*

ಹೀಗೆ ಮಾತನಾಡುತ್ತಾ ನಿಮ್ಮ ಪಾದಧೂಳಿನಿಂದ ನಮ್ಮ ಮನೆಯು ಪಾವನವಾಯಿತು ಎನ್ನುವಲ್ಲಿ ಆಗಿನ ಕಾಲದ ಸತ್ಕಾರವನ್ನು ಬಿಂಬಿಸಲಾಗಿದೆ. ವಧುವಿನ ಅಲಂಕಾರವನ್ನು ನಿರೂಪಿಸುವಾಗ ಮಣಿಯ ಬಳೆ, ಬೊಟ್ಟು, ಕೈಕಡಗ, ಹಾರ, ಒಂದೆಳೆ ಸರ, ಐದೆಳೆ ಸರ, ಚಿಂತಾಕ, ಮುತ್ತಿನ ಸರ, ಹರಳಿನ ಓಲೆ, ಮುತ್ತಿನ ಕೊಪ್ಪು, ಬೆಸ್ಸಿರ ಹೋಮ, ಮಣಿಯ ಮೂಗಿನ ಬೊಟ್ಟು, ತುರುಬಿನ ಮಣಿ, ಮಾಂಗಲ್ಯ ಇನ್ನೂ ಮೊದಲಾದ ಆಭರಣಗಳನ್ನು ಉಲ್ಲೇಖಿಸಲಾಗಿದೆ. ಆ ನಂತರ ವರನಿಗೆ ಕಂಚು ಒತ್ತಿಸುವುದು, ಎಣ್ಣೆ ಅರಿಶಿಣ ಶಾಸ್ತ್ರ, ಮದುವೆಯಲ್ಲಿ ಸೋಬಾನೆ ಹಾಡುವುದು (೬-೫೫) ವಧುವಿಗೆ ಮಡಿಲು ತುಂಬುವ ಶಾಸ್ತ್ರ, ಅತ್ತಿಗೆ ನಾದಿನಿಯರ ಸರಸ ಸಲ್ಲಾಪ, ನಾಲ್ಕನೆಯ ದಿನದ ನಾಗೋಲಿ ಶಾಸ್ತ್ರ, ಬಾಗಿಲು ಕಡೆಯುವ ಶಾಸ್ತ್ರ ಮುಂತಾದ ಶಾಸ್ತ್ರಗಳ ಪ್ರಸ್ತಾಪ ಇಲ್ಲಿ ಕಂಡುಬಂದಿದ್ದು ಇವು ಇಂದಿಗೂ ಸಹ ಉಳಿದು ಬಂದಿರುವುದನ್ನು ಗಮನಿಸಬಹುದಾಗಿದೆ.

ಮದುವೆಯಲ್ಲಿ ಧವಳದ ಹಾಡುಗಳನ್ನು ಹೇಳುವ ಪದ್ಧತಿಯು ಇಲ್ಲಿ ಕಂಡುಬರುತ್ತದೆ.

**ಇ. ಆಹಾರ ಪದ್ಧತಿ**

ಆ ಕಾಲದ ಪ್ರಮುಖ ಆಹಾರ ಪದ್ಧತಿಯನ್ನು ಮಹಾತ್ಮ್ಯೆಗಳಿಂದ ತಿಳಿಯಬಹುದು. ಸಭೆ, ಸಮಾರಂಭಗಳಂತಹ ಸಂದರ್ಭದಲ್ಲಿ ಅವರು ಬಳಸುತ್ತಿದ್ದ ಆಹಾರ ಪದ್ಧತಿಗಳನ್ನು ಪಟ್ಟಿ ಮಾಡಬಹುದು. ಈ ಎಲ್ಲಾ ಪದಾರ್ಥಗಳು ಅಂದಿನ ಜನಸಾಮಾನ್ಯರಲ್ಲಿ ಇತ್ತು ಎಂಬುದಕ್ಕೆ ಸಾಕ್ಷಿ ಇಂತಹ ಕಾವ್ಯಗಳು ಸಾಕ್ಷಿಯಾಗಿವೆ.

*"ನೆರೆದ ವಿಪ್ರಮಹಾಜನಂಗಳಿ*
*ಗುರೆ ಸಮಾರಾಧನೆಯನಾ ದ್ವಿಜ*
*ವರನನಂತರದೊಳು ನೆಗಳ್ಚಿದನಿಳೆಗೆ ಪೈಸತೆನಲಂ*
*ಪರಿಪರಿಯ ಭಕ್ಷನ್ನ ಪಾಯಸ*
*ಮುರುದಧಿ ಕ್ಷೀರಾಜ್ಯ ಮಧು ಸ*
*ರ್ಕರೆಗಳಿಂ ಸಂತುಷ್ಟಿವಡಿಸಿದನಾ ದ್ವಿಜೋತ್ತಮರ"*[೩]

ಇದು ಮದುವೆ ಊಟಕ್ಕಾಗಿ ಮಾಡುತ್ತಿದ್ದ ಅಡುಗೆಗಳ ನಾನಾ ವಿಧದ ಬಗೆಬಗೆಯ ತಿನಿಸುಗಳನ್ನು ಕವಿ ವರ್ಣನೆ ಮಾಡಿದ್ದಾನೆ. ಅದರಲ್ಲಿ ಕೆಲವೆಂದರೆ ಹೋಳಿಗೆ, ಹೊಸ ತುಪ್ಪ, ಅನ್ನ, ಪಂಡುಲ, ಚಣಕ, ಫಲತ, ಗಂಧ ಪರಿಮಳಗಳು, ಜೀರಕನೆಳು, ಸಂಬಾರ ಗೋಧೂಮ, ಭಕ್ಷಾನ, ಪಾಯಸ, ಮಜ್ಜಿಗೆ, ಮೊಸರು, ಹಾಲು, ತುಪ್ಪ, ಜೇನುತುಪ್ಪ, ಸಕ್ಕರೆ, ಉದ್ದಿನ ಹಪ್ಪಳ, ಸಕ್ಕರೆ ಹೂರಿಗೆ, ಸಂಪಿಗೆ, ಉಪ್ಪಿನಕಾಯಿ, ಹುಳಿಸೊಪ್ಪು, ಸಕ್ಕರೆಬುರುಂಡೆ, ಚಿತ್ರಾನ್ನ, ಬಿಸಿ ಅನ್ನ, ಕೆನೆ ಮೊಸರು, ಬೆಲ್ಲಗಾಯಿ, ನಿಂಬೆಹಣ್ಣು, ಅಂಬಟೆ, ಮೂಸುಗರೆ, ನೆಲ್ಲಿಕಾಯಿ, ಚಕ್ಕುಲಿ, ಎಳ್ಳಸೂಸಲು, ಬಳ್ಳಿಸೇವಗೆ, ಕೆನೆಹಾಲು, ಮೊಸರು ಇತ್ಯಾದಿ.

ಅದೇ ರೀತಿಯಾಗಿ ವಿವಾಹ ಸಂದರ್ಭದಲ್ಲಿ ತಯಾರಾಗುವ ಅನೇಕ ಆಹಾರ ಪದಾರ್ಥಗಳು ಮತ್ತು ಹಣ್ಣುಗಳನ್ನು ಪಂಚಬಾಣನ ಭುಜಬಲಿಯ ಚರಿತ್ರೆಯಲ್ಲಿ ನೋಡಬಹುದು. ಅದೆಂದರೆ ಹಿರೆಳೆ, ಕರಿಯ ನಿಂಬೆ, ದೊಡ್ಡ ಹಿರಳೆ, ಮಾದಲ, ನೆಲ್ಲಿ, ಮರೆಗಾಯಿ, ಸುಂಡೆ ಇವುಗಳಲ್ಲಿ ಉಪ್ಪಿನಕಾಯಿಯನ್ನು ಮಾಡುತ್ತಿದ್ದರಂತೆ; ಮಾವು ಮತ್ತು ಅಂಬತೆಯ ಸಾಸಿವೆ; ಎಳ್ಳು ಕಚ್ಚರಿ, ಹುಣಿಸೆ ಕಚ್ಚರಿ ಇತ್ಯಾದಿ; ಬಾಳೆದಿಂಡು, ಬಿಳಿಕಡಲೆ, ಮೂಲಂಗಿ, ಸೌತೆಕಾಯಿ ಹಸಿಶುಂಠಿ, ಇವುಗಳು ಪಚ್ಚಡಿಗಳು; ವಿವಿಧ ಬಗೆಯ ಬಾಳಕನಗಳು; ದಾಳಿಂಬೆ, ಬಾಳೆ, ನೆರಲೆ, ಹಲಸು, ಮಾವುಗಳ ರಸಾಯನಗಳು; ಕಾಳಿದಗಳು; ಮೊಸರುಗಾಯಿ, ಬಜ್ಜಿಗಳು, ಅಕ್ಕಿ ಗಾಲೆ, ಪರಡಿ ಸರಳಿಗೆ ಸೇವಗೆ ಸಜ್ಜಿಗೆ ಪಾಯಸಗಳು; ಗಾರಿಗೆ, ಅತಿರಸ, ಹೊರಿಗೆ, ಗರಜಿಕಾಯಿ, ಲಡ್ಡು, ಕಡುಬು, ಕೊಟ್ಟೆಕಡುಬು, ಬಗೆ ಬಗೆಯ ತುಪ್ಪಗಳು ಮುಂತಾದ ಅಡುಗೆಗಳ ದೊಡ್ಡ ಪಟ್ಟಿಯೇ ಮಹಾತ್ಮೆ ಕಾವ್ಯದಲ್ಲಿ ದೊರೆಯುತ್ತದೆ. ಇಲ್ಲಿ ಜನಪದ ಅಡುಗೆಗಳೂ ಕೆಲವು ಸೇರಿವೆ. ಅಡುಗೆಗೆ ಜನಸಾಮಾನ್ಯರು ಮಡಿಕೆಗಳನ್ನು ಬಳಸುತ್ತಿದ್ದರು. ಅಪರೆಲ ಮಡಕೆ (೧–೩೩) ಎಂದು ಮಡಕೆ ಪೇರಿಸಿಡುತ್ತಿದ್ದನ್ನು ಕವಿ ವರ್ಣಿಸಿದ್ದಾನೆ.

**ಬೇಟೆ ಸಂಸ್ಕೃತಿ**

ಹದಿನಾರು ಮತ್ತು ಹದಿನೇಳನೆಯ ಶತಮಾನದಲ್ಲಿ ಬೇರೆ ಬೇರೆ ಜಾತಿಗೆ ಸೇರಿದ ಬುಡಕಟ್ಟು ವೀರರು ಬೇಟೆಯಾಡುವ ಸಂದರ್ಭವನ್ನು ಅರಸರ ಕಾಲದಲ್ಲಿ ಬಂದ ಕೆಲವು ಮಹಾತ್ಮೆ ಕೃತಿಗಳಲ್ಲಿ ನೋಡಬಹುದು. ಈ ಬೇಡರ ಬದುಕಿನ ವಿವರಗಳನ್ನು ಮತ್ತು ವೇಷಭೂಷಣ, ಆಚಾರಗಳು, ಆಹಾರ ಪದ್ಧತಿ ಮತ್ತು ಅವರ ಜೀವನ ಶೈಲಿ ಮುಂತಾದ ಅಂಶಗಳನ್ನು ಕೆಲವು ಸನ್ನಿವೇಶಗಳಲ್ಲಿ ನೋಡಬಹುದು.

ಅಂದು ಬೇಡ ಪದ್ಧತಿಯು ವಿಶೇಷವಾಗಿತ್ತು ಎಂಬುದಕ್ಕೆ ಅವರು ಬೇಟೆಯಾಡುತ್ತಿದ್ದ ಉದಾಹರಣೆಯನ್ನು ಹೀಗೆ ನೋಡಬಹುದು.

*"ಬಲೆಯ ಕೆಲವರು ಬೀಸಿದರುರುಬಿ*
*ಕೆಲವರ್ದೊರ್ಣನುಗಳೊಡ್ಡಿದರು ಮೇಣ್*
*ಕೆಲರುರುಲ್ಗಳನಿಕ್ಕಿ ಮೋಸಂ*
*ಗೊಳಿಸುಲೇ ಪರಿಯಿದೆ ಬನದೊಳು*
*ಚಳಪದಿಂ ಮಿಗವಕ್ಕಿಗಳು ಕೊಲ್ವೇಚ್ಛೆಗಳಸಿದರಂ*
*ಇರಿದರೀತಿಯೊಳದಿದರಸಿಯಂ*
*ತರಿದು ಚಕ್ರದೆ ಸುರಿದು ಶರಗಳ*
*ಕೊರೆವರರ್ದೆಗಳು ಬರುವ ಮಿಗಗಳ ನಿಲ್ಲೆನಿಲ್ಲೆನಂತೆ*
*ಕರಿಕರಂಗಳ ಕೆಡವಿ ಸೆರೆಗಳ*
*ನೆರೆದು ಬೆದರು ಕನಲಿ ಬಡಿದರು ಶಬರರೊಗ್ಗಾಗಿ"* [೬]

ಇದು ಅಂದಿನ ಬೇಟೆಗಾರರು ಬಳಸುತ್ತಿದ್ದ ಬೇಟೆಯ ಪರಿಕರಗಳ ಬಗ್ಗೆ ಮಾಹಿತಿ ತಿಳಿಸುತ್ತದೆ. ಅವುಗಳಲ್ಲಿ ಕೆಲವನ್ನು ಹೀಗೆ ಹೆಸರಿಸಬಹುದು. ಅವೆಂದರೆ, ಹಲವು ಬಗೆಯ ವಾದ್ಯಗಳಾದ ಕೂರ್ಗೆ, ಬಿಲ್ಲುಗಳು, ಖಡ್ಗ, ಕರಮಳ, ಶಕ್ತಿ, ಚಕ್ರ, ಗಧೆ, ಹೆರಿಗೆ, ಬಲೆ, (ಸಿಡಿವಲೆ, ಬಡಿವಲೆ, ಜಡಿವಲೆ, ಪಿಡಿವಲೆ, ಕೆಡವಲೆ, ಜಡೆವಲೆ, ತಡೆವಲೆ, ಸಿಲ್ಕುವಲೆ) ಸಬಳು, ಈಟಿ, ಬಾಮ, ಚೌರಿ, ಹುಲಿಮಾವಲಿನ ಉಡುಗೆ ಎಂಬಂತಹ ಬಾಹ್ಯ ಸೌಂದರ್ಯದ ಚಿತ್ರಣವನ್ನು ಕೊಡುತ್ತಾ

*"ಪುಲಿದೊವಲಿನುಡುಗೆಗಳ ಪೊಕ್ಕುಳೊ*
*ಉಲಿದು ಘಣಘಣರೆಂಬ ಗಂಡೆಗ*
*ಳೊಲೆದ ಚಮರೀಮೃಗದ ಚೌರಿಯ ಪಂಚವಣ್ಣಿಗೆಯ*
*ಸೆಳೆದಿಡುವವಲುಗಳ ಬಿರುದಿನ*
*ಪೊಳೆವ ಖಡ್ಗ ಕುಡಿವ ಮೀಸೆಯ*
*ಪಲಬಗೆಯ ವೇಷದೊಳೆ ಮುಂಚಿತಂ ಶಿಬರಸಂದೇಹ"*

ಹೀಗೆ ಬೇಟೆಗಾರರ ವರ್ಣನೆಯನ್ನು ಮಾಡಲಾಗಿದೆ. ಅದೇ ರೀತಿಯಾಗಿ ಈ ಕಾವ್ಯದಲ್ಲಿ ಹಲವಾರು ಪ್ರಾಣಿಪಕ್ಷಿಗಳ ಉಲ್ಲೇಖ ಕೂಡ ಬರುತ್ತದೆ. ಅವೆಂದರೆ ದುಂಬಿ,

ಕಾಗೆ, ಹಂಸ, ಮಯೂರ, ಗೃದ್ರಸೇನ, ಕುಕ್ಕುಟ, ಕೀರ, ಬಕ, ಟಿಟ್ಟಿಭ, ಗುರುತ್ಮ, ಮಾರ್ಜಾಲ, ಶಾರೀಕಾ, ಭೃತ, ಕಂಸಿಕ, ಭಾರದ್ವಾಜ ತಿತ್ತಿರಿ, ಪಾರಿವಾಳ, ಮಹಿಹುಲ್ಲೇ, ಶಿವಖಡ್ಗಿ, ಮೃಕ, ಶಶಕ, ಸಿಂಹ, ಕಕ, ಕರಡಿ, ಹುಲಿ, ಕಾಡಾನೆ, ಎಕ್ಕಲ, ಕಕ್ಕುರ, ಚಮರೀಮೃಗ, ಖಡ್ಗಿ, ಕಾಡುಕೋಣ, ದೊಡ್ಡು ಇತ್ಯಾದಿ.

ಅದೇ ರೀತಿ ಚಿಕ್ಕದೇವರಾಯನು ಬೇಟೆಯಾಡುವ ಸಂದರ್ಭವನ್ನು ಕವಿ ತಿಮ್ಮನು ಯಾದವಗಿರಿ ಮಹಾತ್ಮೆಯಲ್ಲಿ ಹೀಗೆ ತಿಳಿಸಿದ್ದಾನೆ.

*"ಪೊಳೆವ ನಿಶಾತಖಡ್ಗರುಚಿ ಮಿಂಚನೆ ಪಾರ್ಥಿವರ ಕಂಠದೊಳ್*
*ತೊಳಗುವ ರತ್ನಕಾಂತಿ ಸುರಕಾರ್ಮುಕಮುದ್ಧಟ ನಿಸ್ವನಂ ಸಮಂ*
*ತಳವಡೆ ಮೇಘ ಘೋಷ ಮನೆ ವಾರಣಗಂಡಗಳನ್ಮಾದಾಂಭಸ*
*ಮ್ಮಳೆಯೆನೆ ಚಿಕ್ಕದೇವ ಕಪವಾಹಿನಿ ಕಾರವೊಲಿರ್ಸುದೊಳ್ಪಿನಿಂ"* [೬]

ಇದು ಬೇಟೆಗೆ ಸಿದ್ಧವಾಗುವ ಒಂದು ಚಿತ್ರಣವನ್ನು ಕೊಡುತ್ತಿದೆ. ಅದೇ ರೀತಿ ಇಲ್ಲಿ ಸಿಗುವ ಪ್ರಾಣಿಪಕ್ಷಿಗಳನ್ನು ಉಲ್ಲೇಖಿಸುವ ವರ್ಣನೆಯನ್ನು ಕೂಡ ಚಿತ್ರಿಸಲಾಗಿದೆ.

*"ಎಲವಂ ಮುತ್ತುಗ ಮತ್ತಿ ಮಳ್ತಿ ಬಕುಳಂ ಮಂಗಾರೆ ವಾಚಂ ಪುಲಿಂ*
*ಗಿಲೆ ರಂಕಗ್ಗಲಿ ಜಾಲಮಾಲ ಕವಳಂ ಕಾರಾಚಮಂಕೋಲೆ ದಿಂ*
*ಡಲ ಜೀವಂಬಂತೆ ಕಕ್ಕೆ ಬಿಳ್ಳೇಕವಳಂ ಮಾವಿಂಗಳಂ ಚೀಲಬೋ*
*ಬ್ಬುಲಿ ಪಿಚ್ಚಾರಿ ಪತಂಗಮೆಕ್ಕೆ ಮೊದಲಾಡುರ್ವಿರುಹಂ ರಾಜಿಕುಂ"* [೭]

ಅದೇ ರೀತಿ ಇಲ್ಲಿ ಸಿಗುವ ಪಕ್ಷಿಸಂಕುಲದ ವರ್ಣನೆಯನ್ನು ನೋಡಬಹುದು.

*"ಗರುಡಂ ಗೀಜನಂಚೆ ಸೋರೆ ಪಿಕಳಂ ಕಾಕಂ ಬಕಂ ಕೊಂಡೆಹಂ*
*ಗಂರು ಕೋಕಂ ಗಿಡಗಂ ಚಕೋರ ಸರಸ ಭಾರದ್ವಾಜಾಳಿಗಳಿಗೆ ಜನ*
*ಜನತ್ತಿವೆ ಘೋರಂ ಶಿಖಿ ಕಂಕ ಕೊಕ್ಕರೆ ಶಂಕಂ ಕಾಲ್ಕೋಳಿ ಪಾರಾವತಂ*
*ಪುರುಷತ್ವಂ ಚಿಲುಕೂಲಿ ಜಾತಕಮವಿರ್ಕುಂ ಕತ್ತರಾವ್ರಾಸರೊಳ್*
*ಹರಿ ಮರ್ಜಾರ ಕುರಂಗ ಗಂಡಕ ವರಾಹ ವ್ಯಾಘ್ರ ಗೌಧಾರಸಿಂಹ*
*ಧುರ ಗೋಮಾಯು ಉಲಾಯಿ ಋಕ್ಷಕನ ಸಾರಂಗೋಷ್ಟ್ರ ಶಲ್ಯಾಖುವಾ*
*ನರ ಗಂಧರ್ವ ಮಹೋರಗಾದಿ ಮೃಗಸಂದೋಹರಿಗತ್ಯಂತಭೀ*
*ಕರ ಶಬ್ದಂಗಳಿನೆಯ್ದು ತೀಟಿ ಮೇವಿನೆಗುಂ ಕಚ್ಚೈಲಸಾನುಸ್ಥಳಂ"* [೮]

ಎಂಬಂತಹ ಪ್ರಾಣಿಪಕ್ಷಿಗಳ ಉಲ್ಲೇಖವನ್ನು ನೋಡಬಹುದು. ಹೀಗೆ ಬೇಟೆಗಾರನ ಮತ್ತು ಬೇಟೆಯ ಸಂದರ್ಭದಲ್ಲಿ ಎದುರಾದ ಪ್ರಾಣಿಪಕ್ಷಿಗಳನ್ನು ವರ್ಣನಾತ್ಮಕವಾಗಿ ಅತ್ಯಂತ ಸುಂದರವಾಗಿ ಕವಿಗಳು ಕಟ್ಟಿಕೊಟ್ಟಿದ್ದಾರೆ.

ಇಂತಹ ಬೇಟೆಯಾಡುವ ಸಂದರ್ಭವನ್ನು ಅಂದು ರಾಜರು ಮೃಗಯೂ ವಿನೋದದ ಭಾಗವಾಗಿ ಕಾವ್ಯದಲ್ಲಿ ಮೈದೋರಿರುವುದು ಸಾಮಾನ್ಯವಾಗಿದೆ. ಇದನ್ನು ಭುಜಬಲಿಯ ಚರಿತ್ರೆಯಲ್ಲಿ ಹೀಗೆ ನೋಡಬಹುದು. ಬೇಟೆಗೆ ಬಳಸುವ ಬಡಿಕೋಲು, ಈಟಿ, ಬಿಲ್ಲುಬಾಣ, ಬಲೆಗಳು ಮೊದಲಾದ ಸಾಧನಗಳು, ನಾಯಿಗಳೊಂದಿಗೆ ಬೇಟೆಗೆ ಹೊರಟ ಬೇಡರ ಪಡೆಯವರು ಸಂಭಾಷಿಸುವಾಗ ಕವಿಯು ಸಹಜತೆಯನ್ನು ತಂದು ಅದನ್ನು ಸಾಂಗತ್ಯ ರೂಪದಲ್ಲಿ ಚಿತ್ರಿಸಿದ್ದಾನೆ. 'ಹಂದಿ ಹೊರಟು ಹೋಯಿತೆ', 'ಕಾಡೆಮ್ಮೆ ಇದೆ', 'ಹುಲಿ ಹೊಂಜಿ ಹಾಕಿದೆ', 'ಬಲೆ ಬೀಸು' ಇತ್ಯಾದಿ ಮಾತುಗಳ ಕಲಕಲ (೧: ೧೧೩–೧೧೬) ಇವೆಲ್ಲವೂ ಇಲ್ಲಿ ನೈಜವಾಗಿ ಚಿತ್ರಿತವಾಗಿದ್ದು; ಆ ಕಾಲದ ಬೇಟೆಯ ವಿಧಾನವನ್ನು ವಿಸ್ತಾರವಾಗಿ ಕಟ್ಟಿಕೊಡುತ್ತದೆ.

ಅಲ್ಲದೆ ಪಂಚಬಾಣನು ತನ್ನ ಪರಿಸರದಲ್ಲಿದ್ದ ಪ್ರಾಣಿಪಕ್ಷಿ, ಸಸ್ಯವರ್ಗಗಳ ಬಗೆಗೆ ಉತ್ತಮವಾದ ಜ್ಞಾನವನ್ನು ಹೊಂದಿದ್ದನೆಂದು ಅನಿಸುತ್ತದೆ. 'ಕಾಡಿನಲ್ಲಿದ್ದ ಮಂಗಗಳು ತಾಪಸಂ ಹೊತ್ತಗೆಗಳನ್ನು ಕೆದರಿಹಾಕುತ್ತಿದ್ದುದು, ದಾರವನ್ನು ಕಿತ್ತು ಹಾಕುತ್ತಿದ್ದುದು, ಕೊಲ್ಲಲು ಬಂದರೆ ಮರ ಹತ್ತಿ ಚೇಷ್ಟೆ ಮಾಡುತ್ತ ಅವರನ್ನು ಕಾಡುತ್ತಿದ್ದ' ರೀತಿಯನ್ನೆ ಕವಿ ತುಂಬ ಮನೋಹರವಾಗಿ (೧–೧೨೪) ಪದ್ಯಗಳಲ್ಲಿ ವರ್ಣಿಸಿದ್ದಾನೆ.

**ಉ. ಯಾತ್ರೆಯ ಪರಿಕಲ್ಪನೆ**

ಈ ಮಹಾತ್ಮೆಗಳ ರಚನಾ ಕಾಲಕ್ಕೆ ಯಾತ್ರೆಗಳು ಒಂದು ಮಹತ್ವಪೂರ್ಣವಾದ ಸಂಕಲ್ಪವಾಗಿತ್ತು, ಇಂದಿನಂತೆಯೇ ಅಂದು ಹಬ್ಬಗಳ ಹಿಂದಿನ ದಿನಗಳಲ್ಲಿ ವಿಶೇಷ ಯಾತ್ರೆಯನ್ನು ಮಾಡುತ್ತಿದ್ದರು ಎನ್ನುವುದಕ್ಕೆ ಕ್ಷೇತ್ರಗಳ ಹಿನ್ನೆಲೆಯಲ್ಲಿ ವರ್ಣಿಸಿರುವ ಹಲವು ಸಂದರ್ಭಗಳನ್ನು ನೋಡಬಹುದು.

ಅದರಲ್ಲಿಯೂ ಹಬ್ಬ ಅಥವಾ ಜಾತ್ರೆಯು ಒಂದು ವಾರ ಅಥವಾ ಎರಡು ಮೂರು ದಿನ ಇರುವಾಗ ಮುಂದಿನ ದಿನಗಳಲ್ಲಿಯೇ ಪಾದಯಾತ್ರೆಯನ್ನು ಮಾಡುತ್ತಿದ್ದರು. ಅದಕ್ಕಾಗಿ ಉಪವಾಸ ವ್ರತ ಮಾಡಿ ಜಾತ್ರೆಯ ಸಮಯಕ್ಕೆ ಆ ಕ್ಷೇತ್ರಗಳನ್ನು ತಲುಪುತ್ತಿದ್ದರಂತೆ. ಇಲ್ಲಿ ಮನುಷ್ಯನ ದೈವ ಭಕ್ತಿಯನ್ನು ಸೂಚಿಸುವುದರ ಜೊತೆಗೆ ಒಂದು ಕ್ಷೇತ್ರದ ಬಗೆಗೆ ಇದ್ದ ಅಪಾರ ಪಾವಿತ್ರ್ಯೆಯನ್ನು ಮತ್ತು ನಂಬಿಕೆಯನ್ನು ತಿಳಿಸುತ್ತದೆ. ಅಂತಹ ಸ್ಥಳಗಳಿಗೆ

ಭೇಟಿ ನೀಡಿದಾಗ ಮೊದಲು ಅಲ್ಲಿನ ತೀರ್ಥಕ್ಷೇತ್ರಗಳಲ್ಲಿ ಸ್ನಾನ ಮಾಡಿದರೆ ಫಲಗಳು ಲಭಿಸುತ್ತವೆ. ಪಾಪ ತೊಳೆದು ಪುಣ್ಯ ಲಭಿಸುತ್ತದೆ ಎನ್ನುವ ನಂಬಿಕೆಯಿಂದ ತೀರ್ಥಗಳ ನಾಮ ಸ್ಮರಣೆ, ತೀರ್ಥಸ್ನಾನ, ತರ್ಪಣ ದಾನ, ಮೊದಲಾದವುಗಳನ್ನು ಮಾಡುತ್ತಿದ್ದರು. ಇಂತಹ ಪ್ರಮುಖ ತೀರ್ಥಕ್ಷೇತ್ರಗಳೆಂದರೆ, ಅಗಸ್ತ್ಯ ತೀರ್ಥ, ಮೌದ್ಗಲ್ಯ ತೀರ್ಥ, ಕಮಲತೀರ್ಥ, ರುದ್ರತೀರ್ಥ, ಅಷ್ಟತೀರ್ಥಗಳ ವರ್ಣನೆ, ಶಂಭತೀರ್ಥ, ಅಶ್ವತ್ಥ ತೀರ್ಥ, ಕುಶತೀರ್ಥ, ಕದಂಬತೀರ್ಥ, ಪಲಾಶತೀರ್ಥ, ಮೋಕ್ಷತೀರ್ಥ ಮುಂತಾದವು.

### ೫.೨ ಧಾರ್ಮಿಕ ಸಂಗತಿಗಳು

ಭಾರತವು ಧರ್ಮ ಪ್ರಧಾನವಾದ ದೇಶವಾಗಿದೆ. ಇಲ್ಲಿ ಹಲವು ಮತ-ಧರ್ಮಗಳಿಂದ ಕೂಡಿದ್ದು, ಇಲ್ಲಿ ಕೂಡು ಕುಟುಂಬವನ್ನೊಳಗೊಂಡ ಜನರ ದೇಶವಾಗಿದೆ. ೧೨ನೆಯ ಶತಮಾನದಲ್ಲಿ ರೂಢಿಯಲ್ಲಿದ್ದಂತಹ ಅನೇಕ ಧಾರ್ಮಿಕ ವಿಚಾರಗಳು ಜನರ ಮನಸ್ಸಿನಲ್ಲಿ ತುಂಬಿಕೊಂಡಿದ್ದವು. ಜೈನ, ಬೌದ್ಧ, ಶೈವ, ವೈಷ್ಣವ ಮುಂತಾದ ಧರ್ಮಗಳು ತಮ್ಮದೇ ಆದ ಅನೇಕ ಬಸದಿ, ದೇವಾಲಯಗಳನ್ನು ನಿರ್ಮಿಸಿಕೊಂಡು ತಮ್ಮ ತಮ್ಮ ಧರ್ಮಗಳ ಏಳಿಗೆಗೆ ಶ್ರಮಿಸುತ್ತಿದ್ದರು. ತಮ್ಮ ಧರ್ಮಗಳ ಧಾರ್ಮಿಕ ವಿಚಾರಗಳನ್ನು ಶಾಸನ, ತಾಳೆಗರಿ ಮುಂತಾದವುಗಳಲ್ಲಿ ಉಲ್ಲೇಖಿಸುತ್ತಾ ಮುಂದಿನ ಪೀಳಿಗೆಗಳಿಗೆ ಮುಟ್ಟಿಸುವ ಕಾರ್ಯದಲ್ಲಿ ತೊಡಗಿದ್ದರು. ಧರ್ಮ-ಧರ್ಮಗಳ ನಡುವೆ ಪರಸ್ಪರ ಸಂಘರ್ಷಗಳಿಂದ ಕೂಡಿದ್ದವು. ಅಲ್ಲದೆ ಒಂದರ ಏಳಿಗೆಗಾಗಿ ಇನ್ನೊಂದು ಧರ್ಮವನ್ನು 'ತಮ್ಮ ಧರ್ಮಕ್ಕಿಂತ ಕೀಳು' ಎಂಬ ಮನೋಭಾವನೆಯಿಂದ ಕೂಡಿರುತ್ತಿದ್ದವು ಎನ್ನುವುದನ್ನು ಮಹಾತ್ಮೆ ಕೃತಿಗಳಲ್ಲಿನ ಅನೇಕ ಉದಾಹರಣೆಗಳನ್ನು ನೋಡಿದರೆ ತಿಳಿಯುತ್ತದೆ. ಹಾಗಾಗಿ ಅಂದಿನ ಕೆಲವು ಧಾರ್ಮಿಕ ಸಂಗತಿಗಳನ್ನು ಹೀಗೆ ತಿಳಿಸಲಾಗಿದೆ.

#### ಅ. ವ್ರತಗಳು

ಮನುಷ್ಯ ತನ್ನ ಪರಿಸರದಲ್ಲಿ ಹಲವಾರು ನಂಬಿಕೆ, ಆಚರಣೆಗಳಿಗೆ ಮಾರುಹೋಗಿ ಅವುಗಳನ್ನು ಚಾಚೂತಪ್ಪದೆ ಪಾಲಿಸುತ್ತಿರುತ್ತಾನೆ. ಅದರಂತೆ ಕೆಲವರು ತಮ್ಮ ಇಷ್ಟಸಿದ್ಧಿ ಪ್ರಾಪ್ತಿಗೋಸ್ಕರ ತಾವು ನಂಬಿದ ದೇವರುಗಳಿಗೆ ವಿಶೇಷ ಹರಕೆ, ವ್ರತಗಳನ್ನು ಅರ್ಪಿಸುವುದರ ಮೂಲಕ ಕಾರ್ಯಸಿದ್ಧಿಗೊಳ್ಳುತ್ತಾರೆ. ಈ ರೀತಿಯ ವ್ರತಗಳು ಪ್ರಾಚೀನ ಕಾಲದಿಂದಲೂ ಬೇರೆ ಬೇರೆ ಕಾರಣಗಳಿಗೆ ಆಚರಣೆಯಲ್ಲಿರುವುದನ್ನು ಕಾಣುತ್ತೇವೆ. ಅದರಲ್ಲೂ ಮಹಾತ್ಮೆಗಳಲ್ಲಿ ಹಲವಾರು ವ್ರತಗಳನ್ನು ತೀರ್ಥಕ್ಷೇತ್ರಗಳ ಸಂದರ್ಭದಲ್ಲಿ ವಿವರಿಸಿರುವುದನ್ನು ನೋಡಬಹುದು. ಅದರಲ್ಲಿಯೂ ಮಧ್ಯಯುಗೀನ ಗ್ರಂಥಗಳಲ್ಲಿ ವ್ರತಗಳ ಸರ್ವವ್ಯಾಪಕ ಲಕ್ಷಣಗಳನ್ನು ಹೇಳಿದ್ದಾರೆ.

ಮೊದಲನೆಯದಾಗಿ ವ್ರತಕ್ಕೆ ಪ್ರೇರಕವಾಗಿ ಸ್ನಾನ, ಪ್ರಾತಃ ಸಂಧ್ಯಾ ಸಂಕಲ್ಪ, ಹೋಮ, ಯಾವ ದೇವತೆಯ ಆರಾಧನೆ ವಿಧ್ದಿಷ್ಟವೋ, ಅಥವಾ ಯಾವ ದೇವತೆಯ ಅನುಗ್ರಹ ಅಪೇಕ್ಷಿತವೋ ಆ ದೇವತೆ ಅಥವಾ ದೇವತೆಗಳ ಪೂಜೆ, ಉಪವಾಸ, ಬ್ರಾಹ್ಮಣ ಸಂತರ್ಪಣೆ ಅಥವಾ (ಆ ವ್ರತ ನಿಯಮನುಸಾರ) ಕನ್ಯೆಯ ಇಲ್ಲವೆ ಸುವಾಸಿನಿಯರ ಇಲ್ಲವೆ ಬಡಬಗ್ಗರ ಭೋಜನ, ದಾನಗಳು (ಗೋವು, ದ್ರವ್ಯ, ವಸ್ತ್ರ, ಸಿಹಿ ತಿಂಡಿ, ದಾನ ಇತ್ಯಾದಿಗಳು) ವ್ರತ ಕಾಲದಲ್ಲಿ ಕೆಲವೊಂದು ನೀತಿ ನಿಯಮಗಳ ಪಾಲನೆ ಇವೆಲ್ಲಾ ಸೇರುತ್ತವೆ. ಅಲ್ಲದೆ "ವ್ರತವನ್ನು ಮಾಡಲು ಹೊರಟವನು ನಿತ್ಯ ಸ್ನಾನ ಮಾಡಿ, ನಿಯಮಿತ ಆಹಾರ ಸೇವಿಸುತ್ತ, ಗುರು ದೇವ ಬ್ರಾಹ್ಮಣರನ್ನು ಪೂಜಿಸುತ್ತ,, ಕ್ಷೌರ, ಕ್ರೌದ, ಲಮಾ, ಮಧ್ಯ ಮತ್ತು ಮಾಂಸಗಳನ್ನು ವರ್ಜಿಸಬೇಕು."[೯] ಹೀಗೆ ಭೋಜನ ಮಾಡದೆ, ಸ್ನಾನ ನಂತರ ಒಳ್ಳೆಯ ಮನಸ್ಸಿನಿಂದ ಸೂರ್ಯಾದಿ ಸಕಲ ದೇವತೆಗಳನ್ನು ಪ್ರಾತಃ ಕಾಲದಲ್ಲಿ ನಮಿಸಿ ವ್ರತವನ್ನಾರಂಭಿಸಬೇಕು ಎಂಬ ಉಲ್ಲೇಖಗಳು ಮಹಾತ್ಮ್ಯೆಗಳಲ್ಲಿ ಸಿಗುತ್ತವೆ.

**ಆ. ಧಾರ್ಮಿಕ ಸಂಘರ್ಷಗಳು**

ತಮ್ಮ ಸ್ವಧರ್ಮ ಸ್ಥಾಪನೆ ಮತ್ತು ಬೆಳವಣಿಗೆಯ ದೃಷ್ಟಿಯಿಂದ ಹಿಂದೆ ಧರ್ಮ-ಧರ್ಮಗಳ ನಡುವೆ ಸಂಘರ್ಷಗಳು ನಡೆದಿರುವುದು ನಿಜ. ಅದರಲ್ಲಿ ಪ್ರಮುಖವಾಗಿ ೧೨-೧೩ನೇ ಶತಮಾನಗಳಲ್ಲಿ ವೀರಶೈವ ಧರ್ಮವು ಪ್ರಬಲವಾಗಿತ್ತು. ಇದಕ್ಕೆ ಪ್ರೇರಣೆ ಎಂಬಂತೆ ಅಂದಿನ ಕೆಲವರು ತಮ್ಮ ಪರಿಸರದಲ್ಲಿದ್ದ ಜೈನ, ಬೌದ್ಧ, ವೈಷ್ಣವ ಧರ್ಮಗಳ ವಿರುದ್ಧ ಸಂಘರ್ಷಕ್ಕಿಳಿದರು. ಆದರೆ ಧರ್ಮಗಳನ್ನು ಅವನತಿ ಮಾಡಲು ಸಾಕಷ್ಟು ವಾದವಿವಾದಗಳು, ಗೋಷ್ಠಿಗಳನ್ನು ನಡೆಸುವ ಮೂಲಕ ಅವರನ್ನು ಸೋಲಿಸಿ ಎಲ್ಲರನ್ನು ಶಿವಭಕ್ತರನ್ನಾಗಿ ಮಾಡುತ್ತಿದ್ದರು. ಇಂತಹ ಕಥೆಯನ್ನು ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಅರಿಯಬಹುದು. ಅದೇ ರೀತಿ ಇಲ್ಲಿ ಶೈವ ಮತ್ತು ವೈಷ್ಣವ ಧರ್ಮಗಳ ಸಾಹಿತ್ಯ ರಚನೆ ಮಾಡುವಂತಹ ಸಂದರ್ಭದಲ್ಲಿ ವೈಷ್ಣವ ಸಾಹಿತ್ಯವನ್ನು ಹೇಳುವಾಗ ಶೈವ ಧರ್ಮವನ್ನು ಕೀಳಾಗಿ ಚಿತ್ರಿಸಿ ವೈಷ್ಣವ ಧರ್ಮವೇ ಮೇಲು, ವಿಷ್ಣುವೇ ಅಧಿಕವೆಂಬಂತೆ ಚಿತ್ರಿಸಿದ್ದಾರೆ. ಅದೇ ರೀತಿ ಶೈವ ಸಾಹಿತ್ಯ ರಚನೆಯಾಗುವಾಗಲೂ ಇದೇ ರೀತಿಯಾಗಿ ಮಾಡಿರುವುದನ್ನು ನೋಡಬಹುದು.

ಒಮ್ಮೆ ಎಲ್ಲಾ ಮುನಿಗಳೂ ಒಂದೆಡೆ ಸೇರಿದ್ದಾಗ ತ್ರೈಮೂರ್ತಿಗಳಲ್ಲಿ ದೊಡ್ಡವರಾರು? ಎಂಬ ಪ್ರಶ್ನೆ ಹುಟ್ಟಿತು. ಆಗ ಭೃಗಮುನಿ ತಾನು ಈ ಸಂದೇಹವನ್ನು ಬಗೆಹರಿಸುವುದಾಗಿ

ಹೇಳಿ ಸತ್ಯಲೋಕಕ್ಕೆ ಹೋದನು. ಅಲ್ಲಿ ಬ್ರಹ್ಮನನ್ನು ಕಂಡನು. ಅವನನ್ನು ರಾಜಸಮುಖ್ಯನೆಂದು ಪರಿಗಣಿಸಿ, ಅಲ್ಲಿಂದ ಹೊರಟು ಕೈಲಾಸಕ್ಕೆ ಹೋದನು. ಪಾರ್ವತಿಯೊಡನಿದ್ದ ಶಿವನನ್ನು ಕಂಡು ಅವನು ತಾಯಿಯೆಂದು ಪರಿಗಣಿಸಿ ಅಲ್ಲಿಂದ ಹೊರಟು ವೈಕುಂಠಕ್ಕೆ ಹೋಗಿ ಹರಿಯನ್ನು ಕಂಡನು. ಕೋಪದಿಂದ ಅವನನ್ನು ಎಡಗಾಲಿನಿಂದ ಒದ್ದನು. ಆಗ ಹರಿ ಕೋಪಗೊಳ್ಳಲಿಲ್ಲ. ಬದಲಾಗಿ ಹದಮೀರಿತೆಂದು ತಿಳಿದು ಎದ್ದು ಬಂದು 'ಪೆದುಳವೇ ಮುನಿಪ, ನಿನ್ನರ್ವೆಯಿಂದ ನೊಂದು ಮೃದುಪಾದವು ಬಳಲಿರ್ಪುದಿನ್ನೇವೆನ್' ಎಂದು ಮುನಿಪಾದವನ್ನು ಕೈಯಿಂದ ಒತ್ತಿ ಉಪಚರಿಸಿದನು. ಆಗ ಮುನಿಗೆ ಆಶ್ಚರ್ಯವಾಗಿ 'ಅಪಚಾರವೆಸಗಿದನ್ನನು ಕಟಾಕ್ಷದೊಳ್ ಕೃಪೆಗೆಯ್ವುದು' ಎಂದು ಹರಿಗೆ ನಮಸ್ಕರಿಸಿ ಅವನನ್ನು 'ಅಪರಿಮಿತ ಮಹಿಮೆ ನಿನಗೆಣೆಯೆ ಲೋಕದೊಳು' ಎಂದು ಕೊಂಡಾಡಿ ಹರಿಯೇ ದೊಡ್ಡವನೆಂದು ಸಾರಿದನು.

ಇದೇ ರೀತಿಯಾಗಿ ಚಿತ್ರಿತವಾಗಿರುವ ಇನ್ನೊಂದು ಕಥೆಯನ್ನು ನೋಡಬಹುದು. ಕಾವೇರಿ ಮಹಾತ್ಮೆಯಲ್ಲಿ ಬರುವ ಹರಿಶ್ಚಂದ್ರಾಶ್ರಮದ ಕಥೆ. 'ಇದು ಸಮುದ್ರ ಪೂರ್ವಭಾಗದ ದಡದ ಮೇಲಿದೆ. ಹರಿಶ್ಚಂದ್ರ ಅನೇಕ ಯಜ್ಞಗಳನ್ನು ಮಾಡಿ ಅನಂತರ ಒಂದು ದಿನ ವಿಹಾರಾರ್ಥವಾಗಿ ಹೊರಟು ಚತುರಂಗ ಸೇನೆಯೊಡಗೂಡಿ ಸಹ್ಯಾದ್ರಿ ತಪ್ಪಲಿಗೆ ಬಂದ. ಅಲ್ಲಿಯೇ ಯೂಪವನದಲ್ಲಿದ್ದ ವಸಿಷ್ಠ ಆಶ್ರಮವನ್ನು ಕಂಡು ಮಂತ್ರಿಗಳ ಸಮೇತನಾಗಿ, ಆಶ್ರಮದ ಒಳಹೊಕ್ಕು ಋಷಿಯನ್ನು ಕಂಡು ನಮಸ್ಕರಿಸಿದ. ಋಷಿ ಇವರ ಕುಶಲವನ್ನು ವಿಚಾರಿಸಿ, ಹರಿಶ್ಚಂದ್ರನನ್ನು ಕುರಿತು ಅಶ್ವಮೇಧಯಾಗವನ್ನು ಮಾಡುವಂತೆ ಆಜ್ಞಾಪಿಸಿದ. ಹರಿಶ್ಚಂದ್ರ ಅದನ್ನು ಸಂತೋಷದಿಂದ ಸ್ವೀಕರಿಸಿ ತನ್ನ ನಗರದ ಕಡೆ ಹೊರಟ. ಮಾರ್ಗ ಮಧ್ಯದಲ್ಲಿ ಒಂದು ಆಶ್ಚರ್ಯ ಕಾದಿತ್ತು. ರಾಜನ ಎಡಭುಜ ಹಾರತೊಡಗಿತು. ಕಣ್ಣಲ್ಲಿ ನೀರು ಸುರಿಯತೊಡಗಿತು. ನಡುಹಗಲಲ್ಲಿಯೇ ಕತ್ತಲಾವರಿಸಿದಂತಾಯ್ತು. ಆ ಕೆಟ್ಟ ಶಕುನಗಳನ್ನು ಕಂಡ ರಾಜ ಚಿಂತಾಕ್ರಾಂತನಾದ. ಅವನು ತನ್ನ ಆಪ್ತರಿಗೆ ಈ ವಿಷಯವನ್ನು ತಿಳಿಸಲಾಗಿ ಅವರು ಅವನ ಗುರುವನ್ನು ಕೇಳುವಂತೆ ಹೇಳಿದರು. ಅದರಂತೆ ವಶಿಷ್ಠರನ್ನು ಕಂಡಾಗ "ಮುಂದೆ ವಿಶ್ವಾಮಿತ್ರ ಋಷಿಯಿಂದ ನಿನ್ನ ಅರಸುಮನೆತನಕ್ಕೆ ಕುಂದುಂಟಾಗುತ್ತದೆ. ಆದರೆ ನೀನು ನಿಶ್ಚಲವಾಗಿ ವಿಷ್ಣುವನ್ನು ಭಜಿಸಿದರೆ ಅದಕ್ಕೆ ಪರಿಹಾರ ದೊರೆಯುತ್ತದೆ" ಎಂದರು. ಅದರಂತೆ ರಾಜ ವಿಷ್ಣುವನ್ನು ಕುರಿತು ಕಠಿಣವಾದ ತಪಸ್ಸನ್ನಾಚರಿಸಿದ. ಆಗ ಪ್ರತ್ಯಕ್ಷನಾದ ಹರಿಯು "ನಿನ್ನ ಮೇಲೆ ನನಗೆ ಕರುಣೆಯಿದೆ ಎಂದು ತಿಳಸಿ ಎಷ್ಟೇ ಕಷ್ಟ ಬಂದರೂ ನೀನು ಸತ್ಯವನ್ನು ಬಿಡಬೇಡ" ಎಂದು ಎಚ್ಚರಿಸಿದನು. ಹೀಗೆ ಕಥೆಯು ಮುಂದುವರಿಯುತ್ತದೆ.

ಹರಿಶ್ಚಂದ್ರ ಕಾವ್ಯದ ಉದ್ದಕ್ಕೂ ನೋಡಿದರೆ ಶಿವನನ್ನು ಬಿಟ್ಟು ಹರಿಶ್ಚಂದ್ರ ವಿಷ್ಣುವನ್ನು ಎಂದೂ ನೆನೆಯುವುದಿಲ್ಲ ಎಂತಹ ಸಂಕಷ್ಟದ ಸ್ಥಿತಿ ಬಂದರು ಶಿವನನ್ನು ಬಿಟ್ಟು ಬೇರೆಯವರನ್ನು ನೆನೆಯುವುದಿಲ್ಲ 'ಹರನೆಂಬುದೇ ಸತ್ಯ, ಸತ್ಯನೆಂಬುವುದೇ ಹರ' ಎಂಬುವುದರ ಮೂಲಕ ಕಥೆ ಮುಕ್ತಾಯವಾಗುತ್ತದೆ. ಆದರೆ ಇಲ್ಲಿ ಶಿವನ ಬದಲು ವಿಷ್ಣುವನ್ನು ನೆನೆದಿರುವುದು ನೋಡಿದರೆ ರಾಘವಾಂಕನ ಮೂಲ ಕಥೆಗೆ ಹೊಂದಿಕೆಯಾಗುವಂತಿದ್ದರೂ ಸಹ ಮತ ಮಾತ್ರ ಬದಲಾವಣೆಯಾಗಿದೆ. ಅಂದರೆ ಈ ಕಾಲಕ್ಕಾಗಲೆ ಶೈವ ಧರ್ಮ ಬಿಟ್ಟು ವೈಷ್ಣವ ಧರ್ಮಕ್ಕೆ ಅತೀ ಹೆಚ್ಚು ಪ್ರಾಶಸ್ತ್ಯವನ್ನು ಅರಸರು ಒದಗಿಸಿರಬೇಕೆಂದು ಅನಿಸುತ್ತದೆ.

**ಇ. ಪೂಜಾಫಲದ ವರ್ಣನೆ**

ಪ್ರತಿ ಪೂಜೆಯ ಹಿಂದೆ ಒಂದು ಅಪೇಕ್ಷೆ ಇದ್ದೇ ಇರುತ್ತದೆ. ಅದರಂತೆ ಮಾನವನು ದಿನ ಬೆಳಗ್ಗೆ ತನ್ನ ಇಷ್ಟಾರ್ಥಗಳನ್ನು ಸಲ್ಲಿಸುವ ನೆಪದಲ್ಲಿ ದೇವರಿಗಾಗಿ ಪೂಜೆ ಪುನಸ್ಕಾರಗಳನ್ನು ಮಾಡುತ್ತಾನೆ. ಇಂತಹ ಪೂಜೆ ಎನ್ನುವುದು ಸಂಪ್ರದಾಯದ ಅಥವಾ ಆಚರಣೆಯ ಒಂದು ಭಾಗವಾಗಿದೆ. ಅದರಲ್ಲೂ ಮಹಾತ್ಮೆಗಳಲ್ಲಿ ಪೂಜಾಫಲದ ವರ್ಣನೆಗಳಿಗಾಗಿಯೇ ಒಂದು ಸಂಧಿಯನ್ನು ಸೀಮಿತ ಮಾಡಿ ಬರೀ ಪೂಜೆಯ ವಿಧಿವಿಧಾನಗಳ ವರ್ಣನೆಯನ್ನೇ ಬಿಂಬಿಸಿರುವುದನ್ನು ನೋಡಬಹುದು. ಅದರಲ್ಲಿ 'ಕಕುದ್ಗಿರಿ ಮಹಾತ್ಮೆ'ಯಲ್ಲಿ ಬರುವ ಒಂದು ಉದಾಹರಣೆ ಎಂದರೆ "ಭಕ್ತಿ ತತ್ಪರನಾಗಿ ಮಂದಾರನೀಧರಗಿರಿಯತ್ಯಾದಿ ಆ ಗಿರಿಯ ಪ್ರದಕ್ಷಿಣೆಯಂ ಮಾಡಿ ಆಲಸ್ಯವಿಲ್ಲದೆ ತೀರ್ಥಂಗಳ ಸ್ನಾನವಂ ಮಾಡಿ ಮೌದ್ಗಲ್ಯ ತೀರ್ಥದತಮಂ ತಂದ ಶಿವನಿಗಭಿಷೇಕವಂ ಮಾಡುವೇ ಅವನು ಗಂಗೆಯ ಕಾವಡಿಯಲ್ಲಿ ಶ್ರೀರಾಮ ಸೇತುವಿನಲ್ಲಿ ರಘುವಂ ಪ್ರತಿಷ್ಠಾಪನೆಯಾದ ರಾಮೇಶಗಭಿಷೇಕಮಂ ಮಾಡಲು ಏನು ಫಲಯಾಗುವುದೋ ಆ ಫಲವ ಪಡೆವನು."[೧೦]

ಹಾಗೆ ಮುಂದುವರೆದು "ಗಂಗಾಧರ ಮಹಾಲಿಂಗಮಂ ವಿಧಿಯಿಂದರ್ಚಿಸುವನೋ ಅವನು ಶಿವಲೋಕವನ್ನೈದುವನು ಅವನು ಕಾಶ್ಮೀರ ಕಸ್ತೂರಿಯಿಂದ ಸಮೇತನಾದ ಶ್ರೀಗಂಧವಾ ಗಂಗಾಧರೇಶಂಗರ್ಪಿಸುವನೋ ಅವನು ಚಂದ್ರಮಂಡಲವನೊಡೆದು ಬಹುಕಾಲ ಚಂದ್ರಲೋಕದಲ್ಲಿ ಸುಖದಿಂದಿರುವನು. ಆ ಗುಹೆಯಲಿರುವ ಸದಾಶಿವನಂ ಬಿಲ್ವಪತ್ರೆಗಳಿಂದ ಭಕ್ತಿಯಿಂದ ಪೂಜಿಸಲು ನಾನಾ ಸುಕೃತ ಪ್ರಭಾವದಿಂದ ದೇವಲೋಕದೊಳು ಅನೇಕ ಕಾಲ ಸುಖದಿಂದಿರುವನು. ಅವನು ರಮಣೀಯಂಗಳಾದ ಕಮಲಂಗಳಿಂದ ಸಾಂಬನಂ ಪೂಜಿಸುವನೂ ಅವನು ಜ್ಞಾನಮಂ ಪಡೆದು ಶಂಭುಲೋಕದಲ್ಲಿ ನಿರಂತರ ವಾಸಮಂ

ಪಡೆವನು..... ಅನಂತರ ಶುಭವನಾದ ಕದಂಬ ಕುಸುಮಂಗಳಿಂದ ಗಂಗಾಧರನನರ್ಚಿಸುವನೊ ಅವನು ಜ್ಞಾನಮಂ ಪಡೆದು ಶಂಬುಲೋಕದಲ್ಲಿ ನಿರಂತರ ನಿವಾಸಮಂ ಪಡೆವನು."[೧೧] ಹೀಗೆ ಕಥೆಯೊಳಗೆ ಕಥೆಯಲ್ಲಿ ಪೂಜಾ ವಿಧಿಗಳು ಮತ್ತು ಅದರಿಂದ ಲಭಿಸುವ ಲಾಭಗಳನ್ನು ಚಿತ್ರಿಸಲಾಗಿದೆ.

ಅದೇ ರೀತಿಯಾಗಿ 'ನಂದಿ ಮಹಾತ್ಮ್ಯೆ'ಯಲ್ಲಿ ಬರುವ ಪೂಜಾ ವಿಧಾನದ ಒಂದು ಸಂದರ್ಭವನ್ನು ಹೀಗೆ ನೋಡಬಹುದು. ಇಮ್ಮಡಿ ಹಾವಳಿ ಭೈರವನ ಆಶ್ರಯ ದೊರೆತದ್ದರಿಂದ ಆತ ಅತ್ಯಂತ ವೈಭವೋಪೇತವಾಗಿ ಭಗವಂತನ ಕೈಂಕರ್ಯವನ್ನು ನಡೆಸಿದ್ದಾನೆ. ಅದನ್ನೇ ನಂದಿಯ ಪೂಜೆಗೂ ಅನ್ವಯಿಸಿದ್ದಾನೆ. ಅದೇ ಪೂಜಾ ವಿಧಾನವನ್ನು ಇಲ್ಲಿ ನೋಡಬಹುದು.

*"ಲ್ಕ್ಷ ಕಮಲಂ ಲ್ಕ್ಷ ಪಾರಿಜಾತೋದ್ಗಮಂ*
*ಲಕ್ಷ ತುಲಸೀ ಲಕ್ಷ ಬಿಲ್ವದಳ ಲಕ್ಷದ್ರೋಣಸುಮ*
*ಲಕ್ಷ ಪಂತುಲ ಲಕ್ಷ ಗೋಧೂಮ ಲಕ್ಷ ತಿಲಲಕ್ಷಯವ ಲಕ್ಷಮಾಷಂ*
*ಲಕ್ಷ ಚಂದನ ಪತ್ರ ಲಕ್ಷ ನಿರ್ಗುಂಡಿ ದಶ*
*ಲಕ್ಷ ಮಾರ್ಘ್ಯ ಪ್ರಸರಮಂ ಭಕ್ತಿಯಿಂದ ನಿ*
*ರ್ಲಕ್ಷ್ಯಂಗೆ ತ್ರ್ಯಕ್ಷಂಗೆ ದಕ್ಷ ಶಿಕ್ಷಂಗರ್ಪಿಸಿದ ನಂದಿ*
*ಮೋದದಿಂದ" ॥೧೮-೮॥*

ಇಷ್ಟೇ ಅಲ್ಲದೆ ಹರನ ಅರ್ಚನಾ ಕಾಲದಲ್ಲಿ ನೆರೆಹಿದ ಉಪಕರಣಗಳನ್ನು ನೆರವಿಸಲು ಹತ್ತು ಭಾಗಗಳು ಸಾಲದೆ ಬಾನ ಬಗೆಯನ್ನು ಎಂದರೆ ಸಾವಿರ ತೋಳುಗಳನ್ನು ಈಶ್ವರನನ್ನು ನುಸಿಸಲು ಪಂಚ ಜಿಹ್ವೆಗಳು ಸಾಲದೆ ಆದಿಶೇಷನ ರೀತಿಯನ್ನು ಎಂದರೆ ಸಾವಿರ ನಾಲಿಗೆಯನ್ನು ಲಿಂಗಮೂರ್ತಿಯನ್ನು ಮಹಾ ಅರ್ತಿಯಾದ ಕಣ್ತುಂಬಿ ನೋಡಲು ಇಂದ್ರನ ಅಂದವನ್ನು ಲಿಂಗದಲ್ಲಿ ಚಿತ್ತ, ಚಿತ್ತದಲ್ಲಿ ಭಕ್ತಿ, ಲಿಂಗದಲ್ಲಿ ಸರಸ-ವಿರಸ, ತಿಳಿವು ಮುಳಿವು, ನೋಟವೆಲ್ಲ ಲಿಂಗದವಲೋಕದ ನಂದಿಶಿವಂ ಶಿವಂ ನಂದಿಯಾದಂತಿರ್ದನು ಭಕ್ತಿಯ ಸ್ತರದಲ್ಲೆ ಗೋಪಕವಿಯು ನಂದಿ ಮಹಾತ್ಮ್ಯೆಯನ್ನು ರಚಿಸಿದ್ದಾನೆ.

ಅದೇ ರೀತಿಯಾಗಿ ನಂದಿಯು ಶಿವ ಪೂಜೆಯ ಸಂದರ್ಭದಲ್ಲಿ ಬಳಸುವ ವಿಧಿವಿಧಾನಗಳಿಗಾಗಿ ಹಲವು ಪದ್ಯಗಳು ಮೀಸಲಾಗಿವೆ. ಅದರಲ್ಲಿ ಕನಕಗಿರಿಗೆ ಕನಕಾರ್ಪಣೆವ ವಿರಚಿಸುವಂತೆ (೧೭-೪೩) ಕಲ್ಪಾವನೀರುಹರೆ ಮಿಸುಪಲರಿನಿಂ ಪೂಜೆಗೈದಿಂದ (೧೭-

೪೩) ಕಲ್ಪಾವನೀರುಹರೆ ಮಿಸುಪಲರಿನಿಂ ಪೂಜೆಗೈದಿಂದ (೧೭-೪೭) ಸುರುಕುಜಕೆ ನೇರೆ ತೋರಣಂಗದ್ದದಂದಮೊಗಲ್ (೧೭-೪೮) ಕತ್ತುರಿಯ ಪಟ್ಟಿಗೆಗೆ ಲೋಬಾನದ ವರ ಧೂಮಮಂ ತೋಱುವಂತೆ (೧೭-೪೯) ಅಮೃತಾಬ್ಧಗೂಚ್ಚೆರೆ ಪಾಲನೀತುವಂತೆ (೧೭-೫೧) ಜೀವರತ್ನಕೆ ಮಿಂಚುಬುಳು ವೆಳಗುದೊಱುವಂತೆ (೧೭-೫೨) ಸರ್ವಜ್ಞ ನಿಧಿಯೊಳೆಲ್ಕು ಬೀರಿ ವಾಡೋದಿರಂತೆ (೧೭-೫೩) ಎನ್ನುವ ಪೂಜೆ ಸರಿಸಮಾನ ಪದಗಳಿಗೆ ಅರ್ಥಗರ್ಭಿತ ನುಡಿಗಟ್ಟುಗಳಿಂದ ಕಾವ್ಯವನ್ನು ಚಿತ್ರವತ್ತಾಗಿ ಗೋಪಕವಿಯು ರಚಿಸಿದ್ದಾನೆಂದು ತಿಳಿಯುತ್ತದೆ.

**೫.೩ ರಾಜಕೀಯ ಸಂಗತಿಗಳು**

ಈ ಕಾಲದ ರಾಜಕೀಯ ಪರಿಸ್ಥಿತಿಗಳನ್ನು ತಿಳಿಯುವ ಮೊದಲು ಈ ಕಾಲದ ಮಹಾತ್ಮೆಗಳಲ್ಲಿ ನಿರೂಪಿಸಿರುವ ಕಥೆಯ ಹಿನ್ನೆಲೆಯಲ್ಲಿ ಇವುಗಳ ಭೌಗೋಳಿಕ ವ್ಯಾಪ್ತಿಯನ್ನು ತಿಳಿಯಬೇಕು. ಈ ಪುರಾಣಗಳನ್ನು ಚಿತ್ರಿಸಿರುವ ಮಹಾತ್ಮೆಕಾರರು ರಾಜರ ಆಶ್ರಯದಲ್ಲಿ ಇದ್ದವರಾದ್ದರಿಂದ ಅಂದಿನ ಭೌಗೋಳಿಕ ಎಲ್ಲೆಗಳನ್ನು ತಮ್ಮ ಕೃತಿಯಲ್ಲಿ ಸಂಪೂರ್ಣವಾಗಿ ತರದಿದ್ದರೂ ಕೆಲವು ನೆರೆಯ ರಾಜ್ಯಗಳ ಭೌಗೋಳಿಕ ಪರಿಸರದಲ್ಲಿ ಆಳ್ವಿಕೆ ಮಾಡುತ್ತಿದ್ದ ರಾಜ್ಯ ಮತ್ತು ಪ್ರಾಂತ್ಯದ ಹೆಸರನ್ನು ನಮೂದಿಸುವುದನ್ನು ತಪ್ಪಿಸಿಲ್ಲ. ಅದರಲ್ಲಿ ತಮಿಳುನಾಡು, ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರ ಮುಂತಾದವು.

**ಅ. ರಾಜನೀತಿ**

ಈ ಮಹಾತ್ಮೆ ಗ್ರಂಥಗಳು ಒಳ್ಳೆಯ ಕಾವ್ಯಗಳು ಮಾತ್ರವಲ್ಲದೆ ಇವೊಂದು ನೀತಿ ಸಂಹಿತೆಯೂ ಆಗಿವೆ ಎಂದು ಹೇಳಬಹುದು. ಏಕೆಂದರೆ ಇಲ್ಲಿ ಕವಿ ರಾಜನೀತಿ, ಪುತ್ರನೀತಿ, ಪತಿವ್ರತಾನೀತಿ, ಸ್ತ್ರೀಲಕ್ಷಣ ಮುಂತಾದವನ್ನು ಬಹಳ ವಿವರವಾಗಿ ವರ್ಣಿಸಿದ್ದಾರೆ. ಅದರಲ್ಲಿ ಮೊದಲು ರಾಜನೀತಿಯನ್ನು ಕಾವೇರಿ ಮಹಾತ್ಮೆಯಲ್ಲಿ ಈ ರೀತಿಯಾಗಿ ಚಿತ್ರಿಸಿದ್ದಾರೆ.

ಒಬ್ಬ ಆದರ್ಶ ರಾಜನಾಗಬೇಕಾದರೆ ಅವನು ಇಂದ್ರಿಯನಿಗ್ರಹಿಯಾಗಿರಬೇಕು, ಸನ್ಮಂತ್ರಿಗಳನ್ನು ಹೊಂದಿದ್ದು ಅವರ ಮಾರ್ಗದರ್ಶನದಂತೆ ನಡೆಯಬೇಕು. ನಗರ, ದುರ್ಗಗಳನ್ನು ರಕ್ಷಿಸಬೇಕು; ದೇವರನ್ನಾಗಲಿ ಬ್ರಾಹ್ಮಣರನ್ನಾಗಲಿ ನಿಂದಿಸಬಾರದು; ದಾಸರು, ಪರಿಚಾರಕರು, ಆಳುಗಳು, ವಿಲಾಸಿನಿಯರು ಮತ್ತು ಆತ್ಮಬಂಧುಗಳನ್ನು ರಕ್ಷಿಸಬೇಕು; ಕೋಶವನ್ನು ಬೆಳೆಸಬೇಕು; ಪ್ರಜೆಗಳನ್ನು ಹಿಂಸಿಸಬಾರದು; ಧನ-ಧಾನ್ಯಗಳನ್ನು ಸಂಗ್ರಹಿಸಿಟ್ಟಿರಬೇಕು; ದುಷ್ಟರನ್ನು ನಿಗ್ರಹಿಸಿ, ಶಿಷ್ಟರನ್ನು ಪರಿಪಾಲಿಸಬೇಕು; ತನ್ನನ್ನು

ಆಶ್ರಯಿಸಿದವರನ್ನು ರಕ್ಷಿಸಬೇಕು; ಪಾತ್ರವರಿತು ದಾನಮಾಡಬೇಕು; ನೀತಿಶಾಸ್ತ್ರ ಓದಬೇಕು; ಊರಿನ ಉಪವನ, ಪಟಾಕಗಳನ್ನು ವೃದ್ಧಿಸಬೇಕು; ಭಾಷೆಗೆ ತಪ್ಪಬಾರದು; ಯುದ್ಧಕ್ಕೆ ಹೆದರಬಾರದು; ತಾನಾಗಿ ವಿನಾಕಾರಣ ಇತರರ ಮೇಲೆ ಯುದ್ಧವನ್ನು ಸಾರಬಾರದು; ಶಾಸ್ತ್ರವಿದ್ಯೆಗಳನ್ನು ಚೆನ್ನಾಗಿ ತಿಳಿದಿರಬೇಕು; ವಿದ್ವಾಂಸರ ಜೊತೆ ಕಾಲಕಳೆಯುತ್ತಾ ವಿಚಾರ ಮಂಥನ ಮಾಡಬೇಕು; ಸಾಮಂತ ರಾಜರೊಂದಿಗೆ ಸ್ನೇಹದಿಂದಿರಬೇಕು; ಚಾಡಿಮಾತುಗಳನ್ನು ಕೇಳಬಾರದು; ಮಧ್ಯಪಾನ ಜೂಜಾಟಗಳನ್ನಾಡಬಾರದು; ದುಷ್ಟಮಂತ್ರಿಗಳನ್ನು ವರ್ಜಿಸಬೇಕು; ಪರಧನಕ್ಕೆ ಆಸೆಪಡಬಾರದು; ಪರಸ್ತ್ರೀಯರ ಸಂಗ ಮಾಡಬಾರದು; ಇತರ ರಾಜರೊಂದಿಗೆ ಸಂಧಿ ಏರ್ಪಡದಿದ್ದರೆ ಅವರ ಕುದುರೆಯನ್ನು ಕಟ್ಟಿಹಾಕಿ ಯುದ್ಧ ಮಾಡಬೇಕು; ಚತುರೋಪಾಯಗಳನ್ನು ಬಳಸಿ ಶತ್ರುಗಳ ರಾಜ್ಯಗಳನ್ನು ಗೆಲ್ಲಬೇಕು; ಮಿತ್ರಭೇದ ಸಲ್ಲದು; ಲಂಚದಾಸೆ ಕೂಡದು; ಹೀಗೆ ಮುಂದುವರೆದು

*"ಕವಿಗಳೊಳು ಬಾಣಸಿಗರೊಳು ವೈ*
*ದ್ಯವನೆ ಕಲಿತಹ ಮರ್ತ್ಯರೊಳು ಮಂ*
*ತ್ರವನೆ ಜಪಿಸುವರಲ್ಲಿ ಮಂತ್ರಿಗಳಲ್ಲಿ ಮೂರ್ಖರೊಳು*
*ರ್ಮವಿನು ತಿಳಿದುರೊಳೈದೆ ಧನಿಕರು*
*ಳವಗುಣವನೆಣಿಸಲ್ಕೆ ಸಾಧ್ಯವೆ ನೃಪತಿ ಕೇಳೆಂದ"* ೧೨

ಶತ್ರುವನ್ನಾಗಲಿ, ರೋಗವನ್ನಾಗಲಿ ಮೊಳಕೆಯಲ್ಲಿಯೇ ಕಳೆದುಬಿಡಬೇಕು. ಗುರುಹಿರಿಯರನ್ನು ಗೌರವಿಸಬೇಕು; ಕಲೆಗಳಲ್ಲಿ ಆಸಕ್ತನಾಗಿರಬೇಕು.

ಹೀಗೆ ರಾಜನೀತಿ ಮಾತ್ರವಲ್ಲದೆ ಈ ಕಾವ್ಯಗಳಲ್ಲಿ ಪುತ್ರನೀತಿಯನ್ನು ಸಹ ನೋಡಬಹುದು.

**ಆ. ಪುತ್ರ ನೀತಿ**

ಮಗನಾದವನು ಮಾತಾಪಿತೃಗಳ ಸೇವೆ ಮಾಡಬೇಕು. ಅವರಿಗೆ ಕಾಯಿಲೆಯಾದಾಗ ಅವರ ಶುಶ್ರೂಷೆ ಮಾಡಬೇಕು; ಅವರ ಇಷ್ಟದಂತೆ ನಡೆಯಬೇಕು. ಪಿತೃಗಳಿಗೆ ನಿಯತವಾಗಿ ಪಿಂಡಪ್ರಧಾನ ಮಾಡಬೇಕು; ಮದುವೆಯಾಗುವ ಹೆಣ್ಣು ಸಲ್ಲಕ್ಷಣೆಯಾಗಿದ್ದು ನೋಡುವ ಕಣ್ಣುಗಳಿಗೆ ಆನಂದವನ್ನುಂಟು ಮಾಡುವಂತಿರಬೇಕು. ಅವಳ ದೇಹ ಮತ್ತು ಆತ್ಮ ಎರಡೂ ಸೌಂದರ್ಯದಿಂದ ಕೂಡಿರಬೇಕು.

*"ಪದ್ಮನಂದಿಯೆ ಪದ್ಮರೇಖೆಯ*
*ಪದ್ಮಹಸ್ತಾಂಘ್ರಿಗಳೊಳೊಪ್ಪುವ*
*ಪದ್ಮವದನೆಯ ಪದ್ಮನೆಯನೆಯ ಪಲ್ಲವಾಧರೆಯ*
*ಪದ್ಮೆ ಯೈಸಿರಿದಾಳ್ದಿ ರಾಜಿಪ*
*ಪದ್ಮಿನಿಯ ಗಾನ ರಸ್ಥನುಂ ಹು*
*ಪ್ಪುರ್ಮದೊಳು ನಲಿವುತ್ತಲಾಕೆಯ ಕೈವಿಡಿವುದೆಂದ" (೨೧-೨೯)*

ಹೀಗೆ ಪುತ್ರನು ಕೈ ಹಿಡಿಯುವ ವಧುವಿನ ಬಗ್ಗೆಯೂ ವರ್ಣನಾತ್ಮಕವಾಗಿ ವಿವರಿಸುತ್ತಾ ಸತಿ ಧರ್ಮ ನೀತಿಯನ್ನು ವಿವರಿಸಲಾಗಿದೆ.

**ಇ. ಸತಿ ಧರ್ಮ**

ಒಂದು ಹೆಣ್ಣಾದವಳು ಗಂಡನ ಇಚ್ಛೆಯಂತೆ ನಡೆಯಬೇಕು; ಅವನ ಪಾದ ಸೇವೆ ಮಾಡಿ ಅನಂತರ ಊಟ ಮಾಡಬೇಕು. ಗಂಡನನ್ನು ದ್ವೇಷಿಸುವ ಹೆಂಗಸನ್ನು ನೋಡಲೇಬಾರದು; ಭಿಕ್ಷುಕಿ, ಮಡಿವಳಗಿತ್ತಿ, ಕಲ್ಲುಕುಟಿಗಿತ್ತಿಯರೊಡನೆ ವಿಶ್ವಾಸದ ಮಾತುಗಳನ್ನಾಡಬಾರದು. ಅಲ್ಲದೆ ವೇಷಧಾರಿಗಳ ಜೊತೆ ಸರಸ ಸಲ್ಲದು; ಋತುಮತಿಯಾದಾಗ ಯಾರಿಗೂ ಮುಖ ತೋರಿಸಬಾರದು; ಪತಿಯ ಶತ್ರುಗಳ ಮನೆಗೆ ಮರೆತು ಸಹ ಹೋಗಬಾರದು; ಸ್ನಾನ ಮಾಡುವಾಗ ಗಂಡನ ಪಾದಗಳನ್ನು ತೊಳೆದ ನೀರನ್ನು ತಲೆಗೆ ಪ್ರೋಕ್ಷಿಸಿಕೊಳ್ಳಬೇಕು; ಗಂಡನ ಅಪ್ಪಣೆಯಿಲ್ಲದೆ ತೀರ್ಥಯಾತ್ರೆ ಮಂತ್ರ ತಂತ್ರಗಳ ಆಚರಣೆ, ದೇವತಾರ್ಚನೆ ಕೂಡದು; ಪ್ರತಿನಿತ್ಯ ಅವನ ಅಣತಿಯಂತೆ ನಡೆಯಬೇಕು; ಪತಿಯಾದವನು ಏನೇ ಮಾಡಲಿ ಸದಾಶಿವನೆಂದು ತಿಳಿದು ಇರಬೇಕಾಗಿತ್ತು. ಇಲ್ಲಿ ಸ್ತ್ರೀಯರಿಗೆ ಯಾವುದೇ ಸ್ವತಂತ್ರ್ಯವಿರಲಿಲ್ಲ. ಅಲ್ಲದೆ ಅವರು ಸ್ವತಃ ನಿರ್ಧಾರವನ್ನು ತೆಗೆದುಕೊಳ್ಳುವಷ್ಟು ಯೋಗ್ಯ ಸ್ಥಾನಮಾನವನ್ನು ಅಂದಿನ ಸಮಾಜದಲ್ಲಿ ನೀಡಿರಲಿಲ್ಲ ಎಂದೆನಿಸುತ್ತದೆ. ಪುರುಷ ಸಮಾಜವೇ ಇಲ್ಲಿ ಮೇಲುಗೈಯಾಗಿದ್ದಿತು.

*"ವೃದ್ಧನಾಗಲಿ ರಂಚೆಯಡಿಸಿ*
*ಛ್ದಿದರ್ನಾಗಲಿ ಮುರ್ಖನಾಗಲಿ*
*ಬುದ್ಧಿಯುಳ್ಳವನಾದೊದಗಲಿ ಪತಿತನಾದುಂಡಯು*
*ಶುದ್ಧ ವಿದ್ಯಾಹೀನನಾದೊಡೆ*
*ಕುದ್ಧ ಷಂಡನು ದೀರ್ಘನಾಗಲಿ*
*ಸಿದ್ಧವಿದು ಸತಿಯರಿಗೆ ಕೇಳ್ ಪತಿಯೇ ಸದಾಶಿವನು"* [೧೩]

ಅಲ್ಲದೆ ಗಂಡನಿಗೆ ವಂಚಿಸಿ ಭೋಜನವನ್ನು ಮಾಡಿ ಅಹಿತವನ್ನು ಉಂಟು ಮಾಡಿದರೆ ಭೂಮಿಯ ಮೇಲೆ ಇರುವವರೆಗೂ ಕಷ್ಟವನ್ನು ಅನುಭವಿಸಬೇಕಾಗುತ್ತದೆ. ಅಲ್ಲದೆ ಪರರ ಮಾತನ್ನು ಕೇಳಿದರೆ (ಸಾದರತೆ ಪರರುತ್ತಿಯುಂ ಶೃತಿ ಗೋವಿಸುತ್ತಿಹಳಾವಳಾಕೆಯ ಸೇದಿರಜುಗಳಿಂ ಬಿಗಿದು ಜವನಳ ಕರ್ಣದಲಿ ಕಾದು ಸೋಂಕಲು ಸುಡುವ ನೊದಿ ಪೊಯಂಕವಳಂ ಮಹೋಗ್ರದ ಬಾದೆಗೊಳಗಾಗಿಸುವ ಪರಿಯು ಮುಂದೆ ಬರುತ್ತದೆ) ಸೀಸವನ್ನು ಕಾಯಿಸಿದ ರಸವನ್ನು ಕಿವಿಯಲ್ಲಿ ಹಾಕಿದಂತೆ ಆಗುತ್ತದೆ. ಹೀಗೆ ಹೆಣ್ಣನ್ನು ಪ್ರತಿಯೊಂದು ಸಂದರ್ಭದಲ್ಲಿ ಕಟ್ಟಿ ಹಾಕಿ ಬಂಧನದಲ್ಲಿ ಇಟ್ಟು ಸಂಪ್ರದಾಯದ ಹಿನ್ನೆಲೆಯಲ್ಲಿ ನೋಡಿದ್ದಾರೆ.

ಅಲ್ಲದೆ ಚೆಲುವಾಂಬೆಯ ಕೃತಿಯಾದ 'ತಲಕಾವೇರಿ ಮಹಾತ್ಮ್ಯೆ'ಯಲ್ಲೂ ಇದೇ ತೆರನಾದ ಇನ್ನೊಂದು ಕಥೆಯನ್ನು ನೋಡಬಹುದು. "ಪೂರ್ವದಲ್ಲಿ ವ್ಯಭಿಚಾರಿಣಿಯಾಗಿದ್ದ ಚಂದ್ರಕಾಂತೆಯೆಂಬ ಸ್ತ್ರೀಯು ಕಾವೇರಿ ಸ್ನಾನ ಮಾತ್ರದಿಂದಲೇ ತನ್ನ ಪಾಪಗಳನ್ನು ಕಳೆದುಕೊಂಡು ಮುಕ್ತಿ ಹೊಂದಿದಳು. ಅವಳಿಂದಾಗಿ ಅವಳ ಗಂಡನೂ ಶ್ರೀ ವೈಕುಂಠವನ್ನು ಸೇರಿದನು." ಇಲ್ಲಿ ಹೆಣ್ಣುಮಕ್ಕಳನ್ನು ಕೀಳಾಗಿ ಚಿತ್ರಿಸಲಾಗಿದೆ.

ಅಲ್ಲದೇ ಕೆಲವು ತೀರ್ಥಕ್ಷೇತ್ರಗಳ ಹಿನ್ನೆಲೆಯಲ್ಲಿ ಚಿತ್ರಿತವಾದ ಸ್ತ್ರೀಯರ ಚಿತ್ರಣ ಸ್ವಲ್ಪ ಭಿನ್ನವಾಗಿದೆ. ತಿಮ್ಮಕವಿಯ ಪಶ್ಚಿಮರಂಗ ಕ್ಷೇತ್ರ ಮಹಾತ್ಮ್ಯೆಯಲ್ಲಿ 'ಪಾಲಾಶತೀರ್ಥ' ಎಂಬ ಒಂದು ತೀರ್ಥಕ್ಷೇತ್ರದ ಕಥೆಯಲ್ಲಿ ಸ್ತ್ರೀಯಾದವರು ಪಾಲಾಶತೀರ್ಥದಲ್ಲಿ ಮಿಂದರೆ ಪತಿವ್ರತೆಯರೂ ಆಗುತ್ತಾರಂತೆ ಮತ್ತು ಸದಾ ಸುಮಂಗಲೆಯರೂ ಆಗುವುದಲ್ಲದೇ ಪತಿ, ಅತ್ತೆ, ಮಾವ, ಗುರು, ದೇವರು, ಹಿರಿಯರಲ್ಲಿ ಭಕ್ತಿಯುಳ್ಳವರೂ ಆಗಿರುವರು ಎಂದು ಕಥೆ ಹೇಳುತ್ತದೆ. ಆದರೆ ಇಲ್ಲಿ ಸೂಕ್ಷ್ಮವಾಗಿ ಗಮನಿಸಿದರೆ ಮಹಿಳೆಯರನ್ನು ಎಲ್ಲಾ ರೀತಿಯ ಸಂಪ್ರದಾಯದ ಹಿನ್ನೆಲೆಯಲ್ಲಿ ಕಟ್ಟಿಹಾಕಿದಂತಿದೆ. ಸಮಾಜದಲ್ಲಿ ಗೌರವಯುತ ಸ್ತ್ರೀ ಎಂದರೆ ಅತ್ತೆ, ಮಾವ, ಗಂಡನೇ ದೇವರೆಂದು ಭಾವಿಸಬೇಕಿತ್ತು. ಅಲ್ಲದೆ ಸತಿಯಾದವಳು ಗಂಡು ಮಗುವನ್ನು ಹೆತ್ತರೆ ಮಾತ್ರ ತನ್ನ ಕುಟುಂಬದಲ್ಲಿ ಗೌರವ ಮರ್ಯಾದೆಗಳು ಸಿಗುತ್ತಿದ್ದವು ಎಂಬ ಅಂಶವೂ ಕೂಡ ಸ್ತ್ರೀಯನ್ನು ಹೇಗೆ ಬಂಧಿಸಲಾಗಿತ್ತು ಎನ್ನುವುದನ್ನು ತಿಳಿಸುತ್ತದೆ.

**ಈ. ರಾಜರುಗಳು**

ಈ ಮಹಾತ್ಮ್ಯೆಗಳಲ್ಲಿ ಪ್ರಮುಖವಾಗಿ ರಾಜರ ಬಗೆಗೆ ಪ್ರಸ್ತಾಪಿಸಲ್ಪಟ್ಟಿದೆ. ಪ್ರಮುಖ ರಾಜರುಗಳನ್ನು ಇಲ್ಲಿ ನೋಡಬಹುದು.

**ಚೋಳರಾಜ :**

'ವೆಂಕಟಚಲ ಮಹಾತ್ಮ್ಯೆ' ಲಾಲಿಪದದಲ್ಲಿ ಚೋಳರಾಜನ ಬಗ್ಗೆ ಉಲ್ಲೇಖ ಬರುತ್ತದೆ. 'ಒಂದು ಸಲ ಚೋಳರಾಜನ ಕನಸಿನಲ್ಲಿ ನಾರಾಯಣನು ಕಾಣಿಸಿಕೊಂಡು ಹೇಳಲು ಬಹು ಕೈಂಕರ್ಯದಿಂದ ತನ್ನ ಪರಿವಾರ ಸಮೇತನಾಗಿ ವೃಷಭಾದ್ರಿಗೆ ಹೋಗಿ ನಾರಾಯಣ ದರ್ಶನವನ್ನು ಮಾಡಲು ಅವನಿಗೆ ಮಹಾದಾನಂದವಾಯಿತು. ಅಂದಿನಿಂದ ಚೋಳ ರಾಜನು ನಾರಾಯಣನ ಭಕ್ತನಾಗಿ ರಾಜ್ಯವಾಳುತ್ತಿದ್ದನೆಂದು' ತಿಳಿದುಬರುತ್ತದೆ.

**ಕೇಕೆಯ ರಾಜ :**

ಒಂದು ಗಂಡಿರುವೆ ತನ್ನ ಹೆಂಡತಿಯನ್ನು ಮನೆಯಲ್ಲಿ ಏಕಾಂಗಿಯಾಗಿ ಬಿಟ್ಟು ಒಂದು ಸಾರಿ ಆಹಾರಾರ್ಥವಾಗಿ ಬಹುದೂರ ಹೋಯಿತು. ಏಕಾಂಗಿಯಾಗಿ ವಿರಹದಿಂದ ಪರಿತಪಿಸುತ್ತಿದ್ದ ಈ ಇರುವೆಯನ್ನು ಕಂಡ ಬೇರೊಂದು ಗಂಡಿರುವೆ ಮೋಹಗೊಂಡು ಅದರ ಸಂಗ ಬಯಸಿ ಬಲಾತ್ಕರಿಸಿತು. ಹೆಣ್ಣಿರುವೆ ಪರಸ್ತ್ರೀ ಸಂಗ ಪಾಪಕರವಾದುದೆಂದು ಎಷ್ಟೇ ಉಪದೇಶ ಮಾಡಿದರೂ ಗಂಡಿರುವೆ ಕೇಳದಿರಲು ಹೆಣ್ಣಿರುವೆ ಹುಂಕಾರ ಮಾಡಿ 'ಭಸ್ಮೀ ಭೂತನಾಗು' ಎಂದು ಶಪಿಸಿ ತನ್ನ ಪತಿಯನ್ನು ಕೂಗಿತು. ದೂರದಿಂದಲೇ ಪತ್ನಿಯ ಕೂಗನ್ನು ಕೇಳಿಸಿಕೊಂಡ ಗಂಡಿರುವೆ ಓಡಿ ಬಂದು, ವಿಷಯವನ್ನು ತಿಳಿದು ಪತಿವ್ರತೆಯಾದ ತನ್ನ ಹೆಂಡತಿಯನ್ನು ಹೊಗಳಿತು. ಈ ಕಥೆಯನ್ನು ಕೇಳಿ ಒಮ್ಮೆ ಕೇಕೆಯ ರಾಜನು ಮುಗುಳ್ನಕ್ಕನು. ಇದನ್ನು ಕಂಡ ಅವನ ಹೆಂಡತಿ ಗಂಡನ ನಗುವಿಗೆ ಕಾರಣವನ್ನು ಕೇಳಿದಳು. ಅದರ ಕಾರಣವನ್ನು ಹೇಳಿದರೆ ತಾನು ಸಾಯುವುದಾಗಿ ಕೇಕೆಯನು ಹೇಳಿದನು. ಆಗ ಕೋಪಗೊಂಡ ಹೆಂಡತಿ 'ನೀನು ಸತ್ತರೂ ಸರಿ, ನಿನ್ನ ನಗುವಿಗೆ ಕಾರಣವನ್ನು ಹೇಳು ಎಂದಳು. ತನ್ನ ಹೆಂಡತಿಯ ಆಂತರ್ಯವನ್ನು ತಿಳಿದಿದ್ದ ಕೇಕೆಯನು ಆಗಲೀ ಎಂದು ತಿಳಿಸಿ ಅವಳನ್ನು ಬಿಟ್ಟು ನಿಶ್ಚಿಂತನಾಗಿದ್ದನು.

**ಚಂದ್ರಗುಪ್ತ :**

ಹೇಮಾಂಗದ ಎಂಬ ಪಟ್ಟಣದ ರಾಜಧಾನಿಯಲ್ಲಿ ಗುಪ್ತ ವಂಶದ ಸಂಸ್ಥಾಪಕನೂ ಇತಿಹಾಸ ಪ್ರಸಿದ್ಧನೂ ಅತ್ಯಂತ ಪರಾಕ್ರಮಿಯೂ ಆದ ಚಂದ್ರಗುಪ್ತನು ರಾಜ್ಯವಾಳುತ್ತಿದ್ದನು. ಅವನ ಪತ್ನಿ ಸ್ವಯಂಪ್ರಭಾ ದೇವಿ. ಆ ರಾಜದಂಪತಿಗಳಿಗೆ ಚಂದ್ರಾವತಿಯು ಕುವರಿಯಾಗಿ ಜನಿಸುತ್ತಾಳೆ. ಆಕೆ ಒಂದು ಸಲ ನೃತ್ಯಕ್ಕೆ ಪೂರ್ಣಾಲಂಕಾರಳಾಗಿ ನಟಿಸುವಾಗ ತನ್ನ ತಂದೆಯಾದ ಚಂದ್ರಗುಪ್ತನು ಕಾಮತಪ್ತನಾಗಿ ಮೂರ್ಛೆ ಹೋದನು. ಇಂತಹ

ಸಮಾರಂಭದಲ್ಲಿ ಕಾಮಗ್ರಹನಾದ ಪಿತನನ್ನು ಕಂಡು ಆವೇಶದಿಂದ ಆ ಸ್ಥಳವನ್ನು ಬಿಟ್ಟುಹೋದಳು. ನಂತರ ಶ್ರೀಶೈಲಕ್ಕೆ ಸ್ವಯಂಭುಲಿಂಗವನ್ನು ಧ್ಯಾನಿಸುತ್ತ ಬರುತ್ತಾಳೆ. ಹೀಗೆ ಕಥೆಯು ಮುಂದುವರೆಯುತ್ತದೆ.

**ಮೈಸೂರು ಒಡೆಯರ ಮೂಲ :**

ಪ್ರಸ್ತುತ ಕಾವ್ಯಗಳಲ್ಲಿ ಅರಸರ ಮೂಲವನ್ನು ಹೀಗೆ ಹೇಳಿದೆ. ಯಾದವಗಿರಿ ಮಹಾತ್ಮ್ಯೆಯಲ್ಲಿ ನಾಲ್ಕು ಆಶ್ವಾಸಗಳನ್ನು ಈ ವಂಶಾವಳಿಗಾಗಿಯೇ ಕವಿ ಮೀಸಲಿಟ್ಟಿದ್ದಾನೆ. ಮಲ್ಲಿಕಾರ್ಜುನನು ತನ್ನ ಶ್ರೀರಂಗ ಮಹಾತ್ಮ್ಯೆಯಲ್ಲಿ ಎರಡು ಆಶ್ವಾಸಗಳನ್ನು ಅರಸರ ವಂಶಾವಳಿಗಾಗಿಯೇ ಮೀಸಲಿಟ್ಟಿದ್ದಾನೆ. ಇದರಂತೆಯ ಶ್ರೀರಂಗ ಮತ್ತು ಪಶ್ಚಿಮರಂಗ ಹಾಗೂ ವೆಂಕಟಗಿರಿ ಮಹಾತ್ಮ್ಯೆ ಕಾವ್ಯಗಳಲ್ಲಿ ಹೀಗೆ ಹೇಳಿದೆ.

ದ್ವಾರಾವತಿಯು ಸಮುದ್ರದಲ್ಲಿ ಮುಳುಗುವ ವೇಳೆಯಲ್ಲಿ ಕೃಷ್ಣನು ತನ್ನ ಅನುಜಾತೆಯಾದ ಮಾಯೆಯನ್ನು ಕರೆದು ಅವಳಿಗೆ ತನ್ನ ಆದಿದೇವನಾದ ನಾರಾಯಣನನ್ನು ಯಾದವಗಿರಿಯಲ್ಲಿ ಸ್ಥಾಪಿಸುವಂತೆಯೂ ಯಾದವ ಸಂತತಿಯನ್ನು ಕಾಪಾಡುವಂತೆಯೂ ಹೇಳಿದನು. ಅದರಂತೆ ಮಾಯೆಯು ನಾರಾಯಣನನ್ನು ಯಾದವಗಿರಿಯಲ್ಲಿ ಸ್ಥಾಪಿಸಿ; ಅನಂತರ ಮಹಿಷಪುರಕ್ಕೆ (ಮೈಸೂರಿಗೆ) ಬಂದು ಅಲ್ಲಿಯ ಬೆಟ್ಟದಲ್ಲಿ ಚಾಮುಂಡಿ ಎಂಬ ಹೆಸರಿನಲ್ಲಿ ನೆಲೆಸಿ, ಯದುವಂಶದವರನ್ನು ಅಲ್ಲಿಯ ರಾಜರನ್ನಾಗಿ ಮಾಡಿ ಕಾಪಾಡುತ್ತ ಬಂದಳು. ಆ ಯದುವಂಶ ಪರಂಪರೆಯಲ್ಲಿ ಜನಿಸಿದ ಬೆಟ್ಟದ ಚಾಮರಾಜ ಮುಂತಾದವರು ರಾಜರಾಗಿ ಆಳುತ್ತಾ ಬಂದರು. ಸಾಮಾನ್ಯವಾಗಿ ಪುರಾಣಗಳಲ್ಲಿ, ಕಾವ್ಯಗಳಲ್ಲಿ ಇದೇ ಕಥೆಯನ್ನು ಹೇಳಿದೆ. ಆದರೆ ಇದು ನಿರಾಧಾರವಾದುದು ಎಂದು ಸಂಪಾದಕರಾದ ಮಂಜಪ್ಪಶೆಟ್ಟಿಯವರು ತಿಳಿಸುತ್ತಾರೆ.

**ದಿಲೀಪರಾಜ :**

"ಇಕ್ಷ್ವಾಕು ವಂಶದಲ್ಲಿ ದಿಲೀಪನೆಂಬ ರಾಜ ಧರ್ಮದಿಂದ ರಾಜ್ಯವಾಳುತ್ತಿದ್ದ. ಅವನ ಖ್ಯಾತಿಯನ್ನು ಕಂಡು ಸಹಿಸಲಾಗದ ಅವನ ದಾಯಾದಿಗಳು ಮೋಸದಿಂದ ಅವನನ್ನು ಸೆರೆ ಹಿಡಿದರು. ಗರ್ಭಿಣಿಯಾಗಿದ್ದ ಅವನ ಹೆಂಡತಿಗೆ ವಿಷವುಣಿಸಿ ಊರಿನಿಂದ ಹೊರಹಾಕಿದರು. ಶತ್ರುಗಳು ರಾಜ್ಯವನ್ನು ಆಕ್ರಮಿಸಿದರು."[೧೬]

**ಚನ್ನಬಸವೇಂದ್ರ ರಾಜ :**

ಸದಾಶಿವ ಕವಿಯ ಮಹಾಕೂಟ ಮಹಾತ್ಮ್ಯೆಯಲ್ಲಿ ಚನ್ನಬಸವೇಂದ್ರ ಎಂಬ ರಾಜನ ಉಲ್ಲೇಖ ಬರುತ್ತದೆ. ಶಿವಭಕ್ತನೆಂದು ಇವನನ್ನು ಹೀಗೆ ವರ್ಣಿಸಲಾಗಿದೆ.

*"ಶಿವ ಪುರಾಣ ಕರ್ಣನಪರಂ*
*ಶಿವಚರಣರಂಜೀವ ಭೃಂಗಂ*
*ಶಿವಸಮರ್ಚನನಿಷ್ಟಮಾನಸಲು ಕೀರ್ತಿಯುತಂ*
*ಶಿವಮತಾಂಬುಧಿ ಪೂರ್ಣಚಂದ್ರಂ*
*ಶಿವಕವಿ ಮನೋರಥ ಸುರದ್ರಮ*
*ನವನಿಪತಿಯೂಪ್ಪತ್ತವಿರ್ದಂ ಚೆನ್ನಬಸವೇಂದ್ರಂ" (೭-೭೯)*

ಈತ ವಿತರಣಗುಣಶೀಲನಾಗಿದ್ದ. ಈತ ಮಾಡಿದ ಹೇಮದಾ ನದಿಯಿಂದ ಹೇಮಗರ್ಭ ಎಂಬ ಹೆಸರು ಬಂದಿತ್ತು. ಈತ ಮಹಾಕೂಟ ಚರಿತ್ರೆಯನ್ನು 'ಕನ್ನಡದ ನುಡಿಯಂ ಸುದರತೆಯಪ್ಪಂತೆ' ಮಾಡಬೇಕೆಂದು ಸದಾಶಿವಕವಿಗೆ ಹೇಳಿದ. ಆಗ ತಾಳಿಕೋಟೆಯ ದಶಮುಖರಾದ ಚೆನ್ನಬಸವ ಮಹಾಕೂಟ ಚರಿತ್ರೆಯನ್ನು ರಚಿಸಬೇಕೆಂದು ಸದಾಶಿವ ಕವಿಗೆ ಆಜ್ಞೆ ಮಾಡಿ ಹೇಳಿದನಂತೆ. ರಾಜನ ಆಜ್ಞೆಯನ್ನು ಅಂಗೀಕರಿಸಿ ನಾನು ಕೃತಿಯನ್ನು ಹೇಳಿದನೆಂದು ಕವಿ ನಿರೂಪಿಸಿದ್ದಾನೆ. ಇದರಿಂದ ತಾಳಿಕೋಟೆಯ ದೇಶಮುಖ ಬಸವ ಕೃತಿಗೆ ಪ್ರೇರಣೆಯಿತ್ತಿರುವುದು ಸ್ಪಷ್ಟವಾಗುತ್ತದೆ.

**೫.೫ ವಿನೋದಾವಳಿಗಳು**

ಮನೋರಂಜನೆಗಾಗಿ ಅನೇಕ ವಿಧದ ಆಟಗಳು, ಸಂಗೀತ, ನೃತ್ಯಗಳು ಹಿಂದಿನ ಕಾಲದಿಂದಲೂ ನಡೆಯುತ್ತಾ ಬಂದಿವೆ. ಮನಸ್ಸಿನ ಉಲ್ಲಾಸಕ್ಕೆ, ಸಂಭ್ರಮಕ್ಕೆ ಈ ರೀತಿಯ ಆಟಗಳು ತುಂಬಾ ಮುಖ್ಯವಾಗುತ್ತದೆ. ಮುಖ್ಯವಾದ ಕೆಲವು ಮನೋರಂಜನೆಯ ಅಂಶಗಳನ್ನು ಮುಂದೆ ವಿವರಿಸಲಾಗಿದೆ.

**ಅ. ನೃತ್ಯಗಳು**

ಮನೋರಂಜನೆಯ ಮುಖ್ಯ ಪ್ರಕಾರದಲ್ಲಿ ನೃತ್ಯವು ಒಂದು. ಈ ನೃತ್ಯಗಳನ್ನು ರಾಜರು ಹಿಂದೆ ದೇವಸ್ಥಾನಗಳ ಮುಂಭಾಗಗಳಲ್ಲಿ, ಅರಮನೆಗಳ ಮುಂಭಾಗಗಳಲ್ಲಿ ಏರ್ಪಡಿಸುತ್ತಿದ್ದರು. ಹಬ್ಬ-ಹರಿದಿನಗಳಲ್ಲಿ, ಜಾತ್ರೆ, ಮೆರವಣಿಗೆಗಳಲ್ಲಿ ನೃತ್ಯಗಳನ್ನು ಏರ್ಪಡಿಸುತ್ತಿದ್ದರು. ಈ ನೃತ್ಯಗಳು ಹಲವು ತೆರನಾಗಿದ್ದು; ನೃತ್ಯ ಮಾಡುವವರಿಗೂ ಮತ್ತು ನೋಡುಗರಿಗೂ ಸಂತೋಷವನ್ನು ನೀಡುತ್ತಿದ್ದವು. ಈ ರೀತಿಯ ನೃತ್ಯಗಳನ್ನು ಮಹಾತ್ಮೆಗಳಲ್ಲೂ ವರ್ಣಿಸಿರುವುದನ್ನು ನೋಡಬಹುದು.

ನೀಲಾಂಜನೆಯ ನಾಟ್ಯಪ್ರಸಂಗ ಪಂಪನಕಾವ್ಯದ ರಸಘಟ್ಟಗಳಲ್ಲಿ ಒಂದು. ಆಕೆ ತನ್ನ ಅನುಪಮ ನರ್ತನದಿಂದ ಇಂದ್ರನನ್ನು ಮೆಚ್ಚಿಸುತ್ತಿದ್ದಳು. ಅಂಥವಳು ಆದಿಜಿನನ

ಸಭೆಗೆ ಆಗಮಿಸಿದಳು. ಆ ಸಂದರ್ಭವನ್ನು ವರ್ಣಿಸುವಾಗ ಕವಿ ಪಂಚಬಾಣನು ಅದೇ ಭಾವ ಮತ್ತು ಅದೇ ಪದಪುಂಜಗಳನ್ನಿಟ್ಟುಕೊಂಡು ಸಾಂಗತ್ಯದಲ್ಲಿ ರೂಪಿಸಿರುವುದು ಹೀಗಿದೆ.

*"ಓ ಸರಿಸಿದ ಜವನಿಕೆ ಗಂಡೊಡನೆಯ। ತ್ತಾ ಸುರಪುಷ್ಪಾಂಜಲಿಯ*

*ಸೂಸಲೊಡನೆ ಕೊಡೆ ಮದನನಾ ಸಭೆಗಂಡು । ಸೂಸಿದ"* ೧೭

ಪುಷ್ಪಾಸ್ತ್ರಗಳು

ಅದೇ ರೀತಿ ನೀಲಾಂಜನೆ ನರ್ತಿಸುತ್ತಿರುವಾಗಲೇ ಅವಳ ಅಂತ್ಯ ಕಾಲ ಸಮೀಪಿಸುತ್ತದೆ. ಆಕೆ ನೋಡು ನೋಡುತ್ತಲೇ ಅದೃಶ್ಯಳಾದಾಗ ಆದಿದೇವನಿಗೆ ವೈರಾಗ್ಯ ಉಂಟಾಗುವುದನ್ನು ಕಾಣಬಹುದು.

*'ತನುರೂಪು ವಿಭವ ಯೌವನ ಸೌಭಾಗ್ಯ ಮೀ। ಚಿನಪೊಳಪಾಕಾಶ ದೊಡ್ಡ*

*ಘನಮಾದ ವೀರ ಬೊಬ್ಬುಳಿ ಪುಲ್ಲಗಿಚ್ಚೆಂದು । ನೆನೆದು ಸಂಸೃತಿಗೆ ಕೊಕಾರಿ (೯–೫೫)*

ಇಲ್ಲಿ ಕವಿಯು ಪಂಪನನ್ನು ಹೆಜ್ಜೆಹೆಜ್ಜೆಗೂ ಅನುಸರಿಸುತ್ತಾ ಹೋಗಿದ್ದಾನೆ. ಇಂಥ ವಿಚಾರಗಳನ್ನು ವರ್ಣಿಸುವ ಸಾಮರ್ಥ್ಯ ಕವಿಗಳಿಗೆ ಕಡಿಮೆ ಎಂದು ಹೇಳಬಹುದು. ಆದುದರಿಂದಲೇ ಯಥಾವತ್ತಾದ ಅನುಕರಣೆಯೇ ಕಂಡುಬರುತ್ತದೆ. ಆದರೂ ಅಂದಿನ ಕಾಲದಲ್ಲಿ ಜನರು ಹಿಂದಿನಂತೆಯೇ ಸಮಾರಂಭಗಳಲ್ಲಿ ಸೇರುತ್ತಿದ್ದರು ಎಂದು ತಿಳಿಯಬಹುದು ಅದೆಂದರೆ,

*"ದಂಡಾಧಿನಾಥರು ದುರ್ಗಾಧಿಪತಿಗಳು । ಮಂಡಳೀಕರು ಮನ್ನೆಯರು*

*ಹಿಂಡು ಬಂಧುಗಳು ಪಿತರುಗೂಡಿ ಓಲಗ। ಗೊಂಡಿರ್ಪ ಸಮಯದೊಳಾಗ"* ೧೮

ಅನಂತರ ಈ ನೃತ್ಯವನ್ನು ನೋಡಲು ಸುರರೆಲ್ಲ ಆನೆಗಳನ್ನು ಏರಿ ಬಂದರೆ ಸುರರಾಜರು ಐರಾವತವನ್ನೇರಿ ಬಂದರು. ಅನಂತರ ಗರುಡ ಗಂಧರ್ವ ಕಿನ್ನರ ಕಿಂಪುರುಷರಿಂದು ಮಧುರವಾದ ಗೀತೆಗಳನ್ನು ಹಾಡಲಾಗುತ್ತಿತ್ತಂತೆ. ಆಮೇಲೆ ನಾನಾ ವಾದ್ಯಗಳಿಂದ ರಾಗಗಳಿಂದ ಆದಿನಾಥನು ಮಂಟಪವನ್ನು ಅಲಂಕರಿಸಿದಾಗ ನವರತ್ನ ಕಿರೀಟಗಳಿಂದ ಭಕ್ತಿಯಿಂದ ಆದಿದೇವನ ಪಾದಗಳನ್ನು ನಮಸ್ಕರಿಸುತ್ತ ಒಂದು ಕಡೆ ಇದ್ದರೆ, ಇನ್ನೊಂದು ಕಡೆಯಲ್ಲಿ ರಾಜಾಧಿ ರಾಜಕುಮಾರರು ಅಲ್ಲಿ ಸೇರಿ ವಿಜೃಂಭಿಸುತ್ತಿದ್ದರು. ಸಭೆಯಲ್ಲಿ ಇಂತಹ ನಾಟ್ಯವನ್ನು ನೋಡಲು ನವಲೋಕಗಳು ಸೇರುತ್ತಿದ್ದವು ಎಂದು ಹೇಳಲಾಗಿದೆ.

ಅದೇ ರೀತಿಯಾಗಿ 'ಶ್ರೀ ಪರ್ವತ ಮಹಾತ್ಮೆ'ಯಲ್ಲಿ ಚಂದ್ರಾವತಿಯ ನೃತ್ಯವನ್ನು ಚೆನ್ನವೀರಾಂಕನು ತುಂಬಾ ವರ್ಣನಾತ್ಮಕವಾಗಿ ಚಿತ್ರಿಸಿದ್ದಾನೆ.

ಒಮ್ಮೆ ನೃತ್ಯಕ್ಕೆ ಪೂರ್ಣಾಲಂಕೃತಳಾಗಿ ರಂಗಸ್ಥಳದ ಮೇಲೆ ಚಂದ್ರವತಿ ಬರುತ್ತಾಳೆ. ಆಗ ಅವಳು ಹೇಗೆ ಕಾಣುತ್ತಿದ್ದಳೆಂದರೆ 'ಮದನನೊರೆಯಿಂದುದುಗಿದ ಮಿಸುಗುವ ಸಲಾಕೆಯಂತೆ' ಇದ್ದಳು. ಅಲ್ಲದೆ 'ಮದನಿನುರಾಮಂ ಬೀರಿದಪಳೋ ಸಭೆಗೆ ಮುದರಿಂದ ಅವಳ ನೃತ್ಯ ಭಾವಕ್ಕೆ ಜೀವ ನೆರೆತೀವಿತೋ, ಸತ್ಕಳೆ ಕಳೇವರನಾಂತು ನವರಸಂಗಳಿಗೆ ಸರ್ವಾವಯವಂ ಪೊರಪೊಣ್ಮೆದವೋ' ಎಂಬಂತೆ ಇತ್ತಂತೆ. ಹೀಗಿರಲು ನೃತ್ಯವನ್ನು ನೋಡುತ್ತಿದ್ದ ಚಂದ್ರಗುಪ್ತನಿಗೆ.

*ಇಂತೆಸೆವ ಹಾವಭಾವ ವಿಲಾಸ ವಿಭ್ರಮದಿ*
*ಕಂತು ಭೂವರನ ದೇಹದ ಮೃಗದ ತೆರದಿ ನೃಪ*
*ನಂತರಂಗವನಾಂತುರದಲು ಸಲೆ ಗೋರಿಗೊಳಿಸಲು ಕರುಣಮೃಗಗಳ*
*ನಂತರಿಸದಾರ್ದು ಕುಸುಮಾಸ್ತ್ರದಿಂ ಧೈರ್ಯಮೃಗ*
*ಮಂ ತಗುಳ್ದೆಸೆಯೆ ಮನ್ಮತಾ ಶರಾಹತದಿನೋ*
*ರಂತೆ ತಕ್ಕಂತೆಯಂ ಬಿಡದೀಕ್ಷಿಸುತ ಗುಪ್ತನೃಪ ಕಾಮತಪ್ತನಾಗೆ॥ (೮-೯೧)*

ಹೀಗೆ ನೃಪನು ಕಾಮತಪ್ತನಾಗಿ ಮೂರ್ಛೆ ಹೋಗಲು ತೀವಿದೊಡ್ಡೋಲಗದ ನಡುವೆ ಕಾಮಗ್ರಹವಾವರಿಸಿ ಮೂರ್ಛೆಯಾಗಿಹ ಪಿತನ ಕಂಡು ರಾಜೀವಮುಖಿ ಚಂದ್ರವತಿ ಬಾಯ್ಬಿಡುತ ತನ್ಮೇಳಂದಂಗನೆ ಯರೊಗ್ಗಿದನಿಂದಾ ಆವೇಶದಿಂತಿರಾ ಸ್ಥಾನಮಂ ಪೊರಮದ್ದು... (೮-೧೦) ಎಂದು ಎಂಟನೆಯ ಸಂಧಿಯಲ್ಲಿ ತಿಳಿಯುತ್ತದೆ.

**ಆ. ಹಾಡುಗಳು**

ವಿವಿಧ ಜಾನಪದ ಗೀತೆಗಳು ಮತ್ತು ಆಟಗಳನ್ನು ಆ ಕಾಲದಲ್ಲಿ ಹಾಡುತ್ತಿದ್ದರು ಎಂದು ತಿಳಿದುಬರುತ್ತದೆ. ಅದರಲ್ಲಿ 'ಭುಜಭಲಿಯ ಚರಿತ್ರೆ'ಯಲ್ಲಿ ಭುಜಬಲಿಯನ್ನು ಲಾಲಿಸುವಾಗ ಜೋಗುಳದ ಹಾಡುಗಳನ್ನು ಹಾಡುತ್ತಿದ್ದರಂತೆ ಅದೆಂದರೆ,

*ಪಾಡಿ ಭೈರವಿ ಫಲ ಮಂಜರಿ ದೇಸಿಯಿಂ। ಪಾಡುತ್ತರಾಗ ಆ ಹರಿಯ*
*ಜೋಪಾಗಿ ಮಧುರ ತಾರಕಗಳಿಂ । ಪಾಪಿದರೇನ ಬಣ್ಣಿಪೆನಂ*
*ಜೋಜೋ ಸುರಾಸುರ ಮಕುಟ ಚುಂಬಿತಪಾದ । ಜೋ ಜೋ ಮಂಗಳ ನಿಳಯ*
*ಜೋಜೋ ಕರ್ಣಿಕೃತ ಮಹಾ ಸರ್ವಲೋಕಾ । ಜೋ ಜೋಯೆಂದು ಪಾಡಿದರು*
*ಜೋಜೋ ಸುರಾಸುರ ಮುಕುಟಚುಂಬಿತ ಪಾದ । ಜೋಜೋ ಸೊಬಗಿನ ಬೊಂಬೆ*
*ಜೋಜೋ ಆದಿಕಾಲದ ಕಾಮದೇವ ಜೋಜೋ*

ಎಂದು ಪಾಡಿದರು. ಹೀಗೆ ಮುಂದುವರೆದು ಆ ಲಾಲಿಪದದಲ್ಲಿ ಅವರ ವಂಶಜರು ಮತ್ತು ಅವರ ಗುಣಕೀರ್ತನೆಯನ್ನು ಹಾಡಿನ ಮೂಲಕ ಹೇಳಲಾಗಿದೆ.

ಅದೇ ರೀತಿಯಾಗಿ ಚೆಲುವಾಂಬೆಯ 'ವೆಂಕಟಾಚಲ ಮಹಾತ್ಮ್ಯಂ' ಲಾಲಿಪದ ಎಂಬ ಒಂದು ಮಹಾತ್ಮ್ಯ ಕೃತಿಯೂ ಇದೆ. ಇದರಲ್ಲಿ ಆರಂಭದಿಂದ ಅಂತ್ಯದವರೆಗೂ ಮಾತ್ರಗಣ ಚೌಪದಿಯ ಹಾಡಿನ ರೂಪದಲ್ಲಿ ಕಾವ್ಯ ರಚನೆಯಾಗಿದೆ. ಮೊದಲು ಪಲ್ಲವಿಯ ಮೂಲಕ ಪ್ರಾರಂಭವಾಗುವ ಕಾವ್ಯ ಪ್ರತಿಯೊಂದು ಪದ್ಯದ ಕೊನೆಯ ಸಾಲು ಪಲ್ಲವಿಯ ಮೂಲಕವೇ ಮುಗಿಯುತ್ತದೆ. ಅದೆಂದರೆ

*ಜೋ ಜೋ ವೆಂಕಟೇಶ ಸಿವಜಲದಸಂಕಾಶ*
*ನವ್ಯಗುಣಕೋಶ ಜೋ ಜೋ*
*ಮಣಿಮಯದ ಬ್ರಹ್ಮಾಂಡಮಂಟಪದೊಳೆಸೆವ*
*ಫಣಿರಾಜನೆನಿಪ ನರಫಣಿಯ ಕಟ್ಟಿರುವ*
*ಅಣಿಯರದಿ ವೃಷಭಾದ್ರಿ ತೊಟ್ಟೆಯೊಳು ಮರೆದ*
*ಗುಣಿ ನಿನ್ನ ತೂಗುವರು ಪಾಡಿ ಗುಣಗುಣವ ಲಾಲಿ (೧-೧)*

*ಕನಕ ಗಿರಿ ತೊಟ್ಟಿಲೊಳು ನೀ ನೆಲಸೆ ನೋಡಿ*
*ಸನಕಾದಿಗಳು ನಿನ್ನ ಗುಣವ ಕೊಂಡಾಡಿ*
*ವಿನುತತುಂಬರ ನಾರದರು ನಿನ್ನ ಪಾದ*
*ಮನದೊಳೆಣಿಸಿದುಂದಬ ಪಡೆವರು ನಲದಾಡಿ ಜೋ ಜೋ (೧-೨)*

ಎಂದು ಇಡೀ ಕಾವ್ಯ ಲಾಲಿಪದ ಮತ್ತು ಪಲ್ಲವಿಯ ಮೂಲಕ ಮುಂದುವರೆಯುತ್ತದೆ. ಆದರೆ ಇದರಲ್ಲಿ ಪುರಾಣಾಂಶವೇ ಅತೀ ಹೆಚ್ಚು ಕಂಡುಬರುವುದರಿಂದ ಅಂದಿನ ವಾಸ್ತವಾಂಶದ ಸಂಬಂಧಗಳು ಕಂಡುಬರುವುದಿಲ್ಲ.

ಇದೇ ರೀತಿಯಾಗಿ ಶ್ರೀ ಪರ್ವತ ಮಹಾತ್ಮ್ಯೆಯಲ್ಲಿ ಚಂದ್ರವತಿಯು ತನ್ನ ಊರನ್ನು ಬಿಟ್ಟು ಶ್ರೀ ಗಿರಿಯನ್ನು ಧ್ಯಾನಿಸುತ್ತಾ ಶ್ರೀಶೈಲಕ್ಕೆ ಬರುತ್ತಾಳೆ. ಅದರಲ್ಲಿಯೂ ವಿಶೇಷವಾಗಿ ಮಲ್ಲಿಗೆ ಪುಷ್ಪಗಳ ಮಾಲೆಗಳಿಂದ ಶಿವಲಿಂಗವನ್ನು ಪೂಜಿಸಿ, ಮೃದು ಮಧುರ ಗಂಭೀರವಾಣಿಯಿಂದ ಶಿವಲಿಂಗವನ್ನು ವಿಧ ವಿಧವಾಗಿ ವರ್ಣಿಸುತ್ತಾಳೆ. ಆ ಗಾನಕ್ಕೆ ಈಶ್ವರನು ಪ್ರಸನ್ನನಾಗಿ ಪ್ರತ್ಯಕ್ಷನಾಗಿ ಹೀಗೆನ್ನುತ್ತಾನೆ.

"ಆ ಸತಿಯ ಗಾನಕ್ರಮನಾದರಿಸಿ ಕೇಳ್ದು
ದಾಸೀನಮಂ ಬಿದ್ದು ತಾತ್ಪರ್ಯದಿಂ ತತ್ರ
ದೇಶದಲ್ಲಾಂ ಪ್ರಸನ್ನನುಮಾಗಿ ನಿನ್ನದೆಸೆಯುಂದ ಸಂತುಷ್ಟನಾದೆ
ಓಸರಿಸದೀವೆ ನಿನಗೀ ಪ್ರವಹ ವರವ ಪರಿ
ಸಂತೋಷದಿಂದೇವೆ ಬೇಡೆನಲೆನ್ನ ನುಡಿಗೇಳ್ದು
ತಾ ಸರೋಜಾಕ್ಷಿಯಾನಂದಾಬ್ಧಿಯೊಳು ಮುಳುಗಿ ಕರಾಯುಗವ
ಶಿರದೊಳುಹಿ" ॥೭೩॥

ಎಂದು ಶಿವ ಅವಳ ಗಾನಕ್ಕೆ ಮೆಚ್ಚಿ ವರ ಬೇಡು ಎಂದಾಗ ಆದಿ ಶಿವಲಿಂಗಗಳನ್ನು ಹಾಡಿನ ಮೂಲಕ ವರ್ಣಿಸುವ ಬಗೆಯನ್ನು ನೋಡಬಹುದು.

ಲಿಂಗ ನಿಜಲಿಂಗ ಚಿರಲಿಂಗ ತೇಜೋಲಿಂಗ
ಲಿಂಗ ಚಿದುಘನಲಿಂಗ ಲಿಂಗಲಿಂಗಾಲಯನಾ
ಲಿಂಗ ಸರ್ವಾಂ ಗೋತ್ತಮಾಂಗ ಸ್ವಯಂಭು ಶಿವಲಿಂಗಕುಲ ಚಕ್ರವರ್ತಿ
ಲಿಂಗ ಪ್ರತಿಗಾಧಾರಲಿಂಗ ತ್ರಿಗಾಣತೀತ
ಲಿಂಗ ಜ್ಯೋತಿರ್ಮಯ ಮಹಾಲಿಂಗ ಮತ್ಪ್ರಾಣಲಿಂಗ ಜಯ ಜಯ ಜಯ ಜಯ ॥೭೪॥

ಎಂದು ಹಾಡುತ್ತಾಳೆ. ಅಲ್ಲದೆ ಕೆಲವು ಜಾನಪದ ಆಟಗಳನ್ನು ಕೆಲವು ಕೃತಿಗಳಲ್ಲಿ ನೋಡಬಹುದು. ಕೋಲಾಟ ಬಹಳ ಜನಪ್ರಿಯವಾದ ಜನಪದ ನೃತ್ಯಕಲೆ, ಹಾಸನ ಜಿಲ್ಲೆಯಲ್ಲಿ ಇದು ಮತ್ತಷ್ಟು ವಿಶೇಷ. ಅದರ ಕುರುಹಾಗಿ ಭುಜಬಲಿಯ ಚರಿತೆಯಲ್ಲಿಯೂ ಕೋಲಾಟದ ಉಲ್ಲೇಖವಿದೆ.

'ಕಡು ಚೆಲುವಿಂ ಸಿಂಗರಿಸಿ ಕೇರಿಕೇರಿಯೊಳ್। ಬೆಡಗಿನ ಪಾತ್ರ ಕೋಲಾಟ
ಬಡಿವ ನಾನಾ ವಾದ್ಯವರಗಳೊಪ್ಪಿದಾಗ । ಪೊಡವಿ ಭೋರಿಡುವಂದದೊಳ್ (೫-೧೧)

ಹಾಗೆ ಭುಜಬಲಿ ರಾಜಕುಮಾರನಾದರೂ ಅಣೆಕಲ್ಲಾಟ ಆಡಿದಂತೆ ಚಿತ್ರಿಸಿದ್ದಾರೆ.

"ತಿಣ್ಣಮೆನಿಪ ಗುಂಡನಣ್ಣೆಕಲ್ಲಾಡುವ । ಕಣ್ಣಿಗೆ ತೋರೆದ ಗಿರಿಯ
ಸಣ್ಣವರ್ನಡುಗೆ ಕಿತ್ತುಡುವ ದೋರ್ಬಲಿಯಾ । ಪುಣ್ಯಶಕ್ತಿಯನೇ ನೆನೆಂದೆ' (೪-೫೧)

ಹೀಗೆ ಕವಿಯು ತನ್ನ ಸಮಕಾಲೀನ ಜನಪದ ಆಟವನ್ನು ತಿಳಿಸಿದ್ದಾನೆ.

## ೫.೬ ಆರ್ಥಿಕ ಸಂಗತಿಗಳು

ಯಾವುದೇ ಸಮಾಜ ಅಥವಾ ಸಮುದಾಯದ ಬೆಳವಣಿಗೆ ಮತ್ತು ಬದುಕು ಅಲ್ಲಿನ ಆರ್ಥಿಕ ಪರಿಸ್ಥಿತಿಯ ಮೇಲೆ ಅವಲಂಬಿಸಿರುತ್ತದೆ. ಆದರೂ ಮಹಾತ್ಮ್ಯೆ ಕೃತಿಗಳಲ್ಲಿ ಆರ್ಥಿಕತೆಗೆ ಸಂಬಂಧಿಸಿದ ವಿಷಯಗಳು ಅತಿ ಹೆಚ್ಚು ಚಿತ್ರಿತವಾಗಿಲ್ಲ. ಪುರಾಣದ ಮೇಲುಗೈ ಅತಿ ಹೆಚ್ಚು ಆಗಿರುವುದರಿಂದ ಇಂತಹ ವಿಷಯಗಳು ಅವರ ಕೃತಿಗಳಲ್ಲಿ ಕಂಡುಬರುವುದಿಲ್ಲ ಎಂದರೂ ತಪ್ಪಾಗದು. ಆದರೆ ಪ್ರತಿಯೊಂದು ತೀರ್ಥಕ್ಷೇತ್ರಗಳಲ್ಲಿ ನೀತಿಕಥೆಗಳನ್ನು ಹೇಳುವಾಗ ಅಂದಿನ ಸಮಾಜದಲ್ಲಿ ಬ್ರಾಹ್ಮಣರಿಗೆ ಅತೀ ಹೆಚ್ಚಿನ ಒತ್ತನ್ನು ಕೊಡಬೇಕಿತ್ತು. ಅವರಿಗೆ ಅವಮಾನ ಮಾಡಿದರೆ ಪಾಪ ಬರುತ್ತದೆ ಎಂದು ಪ್ರತಿಯೊಂದು ಕಥೆಯಲ್ಲಿ ಬರುವ ಸಂದೇಶದಿಂದ ಅಂದಿನ ಕಾಲದಲ್ಲಿ ಶ್ರೀಮಂತ, ಮಧ್ಯಮ, ಬಡವ, ನಿರ್ಗತಿಕ ಎಂಬ ಎಲ್ಲಾ ವರ್ಗದ ಜನ ಸಮುದಾಯಗಳು ವಾಸಿಸುತ್ತಿದ್ದವು ಎಂದು ಕಂಡುಬರುತ್ತದೆ.

### ಅ. ಪಶು ಸಂಗೋಪನೆ

ಹಸುಗಳು ಆ ಕಾಲದಲ್ಲಿ ಮುಖ್ಯವಾದ ಸಾಕುಪ್ರಾಣಿಗಳಾಗಿರಬೇಕು. ಹಾಲು ಮತ್ತು ಹಾಲಿನ ತುಪ್ಪಗಳನ್ನು ಅಂದಿನ ಕಾಲದಲ್ಲಿ ಭಕ್ತಿಪೂರ್ವಕವಾಗಿ ದೇವರಿಗೆ ನೈವೇದ್ಯಕ್ಕೆ ಅರ್ಪಿಸುತ್ತಿದ್ದರು ಎಂದು ತಿಳಿದುಬರುತ್ತದೆ. ಅದರಂತೆಯೇ ಶ್ರೀ ಪರ್ವತ ಮಹಾತ್ಮೆಯಲ್ಲಿ ಗುಪ್ತವಂಶದ ದೊರೆಯಾದ ಚಂದ್ರಗುಪ್ತನಿಗೆ ಮತ್ತು ಸ್ವಯಂಪ್ರಭಾದೇವಿ ರಾಜದಂಪತಿಗಳಿಗೆ ಚಂದ್ರಾವತಿ ಕುವರಿಯಾಗಿ ಜನಿಸುತ್ತಾಳೆ. ಇವಳ ಲಾಲನೆ ಪಾಲನೆಗೋಸ್ಕರ ರಾಜನು ಬಹು 'ಪಯೋಧರವೆನಿಪ' ಅನೇಕ ಹಸುಗಳನ್ನು ಕೊಡುತ್ತಾನೆ. ಅವಳು ಬಾಲ್ಯವನ್ನು ಮುಗಿಸಿ ಎಲ್ಲಾ ವಿದ್ಯೆಗಳಲ್ಲೂ ಪರಿಣಿತಿಯನ್ನು ಪಡೆಯುತ್ತಾಳೆ. ಒಂದು ಸಲ ರಾಜನು ಅವಳ ಉಪಯೋಗಕ್ಕಾಗಿ ಬಿಟ್ಟ ಹಸುಗಳಲ್ಲಿ ಒಂದು ಕಾಮಧೇನು ತನ್ನ ಕರುವಿನ ಸ್ಥಾನಕ್ಕೆ ಹೋಗಿ ಬರುವಂತೆ ಪಾತಾಳಗಂಗೆಯನ್ನು ಪ್ರತಿನಿತ್ಯವೂ ಹಾದುಹೋಗಿ ಬರುತ್ತಿತ್ತು. ಇದರ ಆಶ್ಚರ್ಯವನ್ನು ನೋಡಲು ಗೋಪಾಲಕರೆಲ್ಲ ಒಂದು ದಿನ ಗೋವಿನ ಹಿಂದೆ ಹಿಂದೆಯೇ ಹೋದರು. ಆ ಸಂದರ್ಭವನ್ನು ಕವಿ ಹೀಗೆ ಚಿತ್ರಿಸಿದ್ದಾನೆ.

*'ಕೂಡಿರ್ದ ಗೋಪಾಲರೆಲ್ಲರೀ ಚೋದ್ಯಮಂ*
*ನೋಡುವೆವೆನುತ್ತ ಗವ್ಯಾಶ್ರಯದಿ ನಿಂದು ಮಾ*
*ತಾಡಿ ಪೊಜಿಮದ್ಯೆ ತದ್ಧೇನುವಿನ ಬಳಿಯಲೆಯ್ದಿ ಬರೆ ಮುನ್ನಿನಂತೆ*

*ಗಾರವೆತ್ತಿರ್ದ ಪಾತಾಳ ಜಾಹ್ನವಿಯ ತಡ*
*ಮಾಡುದುತ್ತರಿಸಿ ಹೊಂಕರಿಸುತ್ತ ಪೋಗೆ ಕಾ*
*ಲೂಡಿ ಬೇಸರದಿ ಗೋಪಾಲಕರು ಬಳಿ ತಂದು ಪೋನುತಿರಲಿಲ್ಲ ಮುಂತೆ' ॥೬-೩೫॥*

ಹೀಗೆ ನೋಡುತ್ತಿದ್ದಂತೆ ಆ ಹಸು ನದಿಯನ್ನು ದಾಟಿ ಸೂರ್ಯ-ಚಂದ್ರರ ಕಿರಣಗಳು ಪುಗದ ಅರಣ್ಯಕ್ಕೆ ಹೋಗಿ ಅಲ್ಲಿ ಹಾಲು ಕರೆದು ಬರುವುದನ್ನು ನೋಡಿದರು. ಅದನ್ನು ಚಂದ್ರವತಿಗೆ ಸವಿವರವಾಗಿ ಹೇಳುತ್ತಾರೆ. ಆ ಹಸು ಎತ್ತರವಾಗಿ ಬೆಳೆದ ಹುತ್ತದ ಹತ್ತಿರಕ್ಕೆ ಬಂದು ಹಾಲು ಕರೆಯುವುದನ್ನು ತಾನೂ ನೋಡಿ, ಆಳುಗಳಿಂದ ಅಗೆಯಿಸುತ್ತಾಳೆ. ಅಲ್ಲಿ ಸ್ವಯಂಭುಲಿಂಗವೊಂದು ಭಾನುಶತಕೋಟಿ ಪ್ರಕಾಶಮಾನದಿಂದ ಕಂಗೊಳಿಸುತ್ತದೆ. ಆಗ ಆಕೆ ಗದ್ಗದಿತಕಂಠಳಾಗಿ 'ಅನುಮಾನವುಳಿಯದೆನಿಪ ಲಿಂಗವಿದೆ' ಯೆನುತ ಭಜಿಸಲು ಪ್ರಾರಂಭಿಸುತ್ತಾಳೆ.

ಇದೇ ರೀತಿಯಲ್ಲಿ ಇನ್ನೊಂದು ಮಹಾತ್ಮೆಯ ಕೃತಿಯಾದ ಭುಜಬಲಿಯ ಚರಿತ್ರೆಯಲ್ಲೂ ಗೋವಳರ ಪ್ರಸ್ತಾಪ ಬಂದರೂ ವಿವರಗಳು ಕಡಿಮೆ ಎಂದೇ ಹೇಳಬೇಕು. ಅವರು ತಮ್ಮ ಗೋವುಗಳಿಗೆ ಇಡುತ್ತಿದ್ದ ಹೆಸರು ಮಾತನಾಡುತ್ತಿದ್ದ ರೀತಿಯನ್ನು ಕಾವ್ಯದಲ್ಲಿ ದಾಖಲಿಸಿರುವುದು ವಿಶಿಷ್ಟವಾಗಿದೆ.

*ಕಾಳಿ ಕಪಿಲೆ ಕೆಂದ ಕಣಬಿ ಹುನುಗಿ ಚಿಂತೆ । ಬೋಳಿಬಿರಿಗಿ ಮೈಲಿಯಳಗಿ*
*ಬಾಳು ಬಾ ಬೂವೆ ಕಂದಲ ವಾ ತಿನ್ನೆಂಬ ಗೋ। ಪಾಲರ ತಂಡ ಒಂದೆರಡು*

ಇಲ್ಲಿ ಮನುಷ್ಯನು ಮತ್ತು ಗೋವುಗಳ ಅವಿನಾಭಾವ ಸಂಬಂಧವನ್ನು ಅಂದಿನ ಗೋಪಾಲಕರು ಹೊಂದಿದ್ದ ಸಂಸ್ಕೃತಿಯನ್ನು ತಿಳಿಸುವುದರ ಮೂಲಕ ಅಂದು ಗೋಸಂಗೋಪನೆಯು ಎಷ್ಟು ಪ್ರಾಮುಖ್ಯತೆಯನ್ನು ಹೊಂದಿತ್ತು ಎನ್ನುವುದು ಕಂಡುಬರುತ್ತದೆ.

**ಆ. ಕೃಷಿ ವ್ಯವಸ್ಥೆ**

ಈ ಕಾಲದಲ್ಲಿಯೂ ಸಾಮಾನ್ಯವಾಗಿ ಕೆರೆ, ಬಾವಿ ಇದ್ದವೆಂದು ತಿಳಿದುಬರುತ್ತದೆ. ಸಹ್ಯಾದ್ರಿ ಖಂಡದಲ್ಲಿ ಗೋದಾವರಿಯ ಕಥೆಯಲ್ಲಿ ಒಂದು ಸಲ ಲೋಕಕ್ಕೆ ದುರ್ಭಿಕ್ಷೆ ಬಂದಾಗ ನದಿ, ಕೆರೆ, ಬಾವಿಗಳು ಬತ್ತಿ ಹೋಗಿ ಜೀವ ಜಂತುಗಳು ಸತ್ತು ಹೋದವು. ಇವುಗಳನ್ನು ನೋಡಿದ ಗೌತಮನು ಬ್ರಹ್ಮನನ್ನು ಉಗ್ರತಪಸ್ಸಿನಿಂದ ಪ್ರತ್ಯಕ್ಷ ಮಾಡಿಕೊಟ್ಟ, ಬಿತ್ತಿದ ಕೂಡಲೆ ಬೀಜವಾಗಿ ಸಮೃದ್ಧವಾದ ಬೆಳೆಯನ್ನು ನೀಡುವ ಮೂರು ಬೀಜಗಳನ್ನು ಪಡೆದುಕೊಂಡು ಗೌತಮನು ಆ ಬೀಜಗಳನ್ನು ಅಹಲ್ಯೆಗೆ ನೀಡಿದನು. ಆಕೆ ಬೀಜವನ್ನು ನೆಟ್ಟು ಸ್ನಾನಕ್ಕೆ ಹೋಗಿ ಬರುವಷ್ಟರಲ್ಲಿ ಅದು ಮೊಳಕೆಯೊಡೆದು ಮಧ್ಯಾಹ್ನಕ್ಕೆ ಫಲವಾಗುತ್ತಿತ್ತು.

"ಲೋಕದೊಳು ದುರ್ಭಿಕ್ಷವಾದುದು
ಸಾಕುವೆನು ನಾನಿದರೊಳೆಲ್ಲರ
ನೀ ಕರುಣಿಸೆ ನಗೀಗ ಬೀಜವ ಮೂರು ಬಿತ್ತಿದರೆ
ಆ ಕ್ಷಣವೆ ಫಲವಾಗಿ ಜನರಿಗೆ
ಸಾಕುಸಾಕೆಂದೆಂಬ ತದಲಿ
ಪಾಕಗಳ ಭುಂಜಿಸುವ ಕಾರಣವಾದ ಬೀಜಗಳು" ೧೯

ಈ ಕೃತಿ ರಚನೆಕಾರರ ಕಾಲದಲ್ಲಿ ಬರಗಾಲ ಬಂದಿರಬೇಕು. ಅದನ್ನು ಕವಿ ಪುರಾಣದ ಮೂಲಕ ಕಟ್ಟಿಕೊಡಲು ಪ್ರಯತ್ನಿಸಿದಂತೆ ಕಂಡುಬರುತ್ತದೆ. ಹಾಗೆ ಅಲ್ಲಿನ ಜನರಿಗೆ ಒಂದು ಹೊತ್ತಿನ ಊಟದ ಸಮಸ್ಯೆಯನ್ನು ಸಹ ಪುರಾಣದ ಹಿನ್ನೆಲೆಯಲ್ಲಿ ಕಟ್ಟಿಕೊಡಲು ಯತ್ನಿಸಿರುವುದನ್ನು ನೋಡಬಹುದು.

"ಮೂರು ಬೀಜದ ಕೊಟ್ಟು ಬ್ರಹ್ಮನು
ಸಾರಿದನು ತಾ ಸತ್ಯಲೋಕಕೆ
ವೀರಮಂದಿ ತಂದನನ ಹಲ್ಯಾದೇವಿನೊಲಿದಿತ್ತ
ಭೋರಿಜಿನ ಬೋಜನಕೆ ಬೀಜವ
ನೂರಿ ಸ್ನಾನಕೆ ಪೋಗಲಂಕುರ
ವೇರಿ ಫಲವಾಗುವದು ಮಧ್ಯಾಹ್ನಕ್ಕೆ ದಿನದಿನದಿ ॥೯-೪॥

ಬಂದ ಜನ ಮೃಷ್ಟಾನ್ನ ಉಣ್ಣುತ
ನಿಂದರಾ ಗೌತಮರ ಬಳಿಯಲಿ
ತಂದುದೀ ಪರಿ ಬಹಳ ಕಾಲವು ದೈವಗತಿಯಿಂದ
ಇಂದ್ರ ಮಳೆಯನು ಕರೆಯ ಲೋಕದೊ
ಳೆಂದಿನಂತೆ ಸುಭಿಕ್ಷವಾದುದು
ಚಂದದಿಂ ಬಾವಿ ಕೆರೆಗಳು ಸ್ವಚ್ಛಜವಾಯ್ತು" ೨೦

ಇದರಿಂದ ತಿಳಿಯವುದೇನೆಂದರೆ ದುರ್ಭಿಕ್ಷದಲ್ಲಿಯೂ ಜನರಿಗೆ ಅನ್ನವನ್ನು ನೀಡುತ್ತಿದ್ದರು. ಈ ಸುದ್ದಿ ತಿಳಿದು ದೂರದೂರದ ಊರುಗಳಿಂದ ಬ್ರಾಹ್ಮಣರು ಗೌತಮನ ಆಶ್ರಮಕ್ಕೆ ಬಂದು ಮೃಷ್ಟಾನ್ನವನ್ನು ಉಂಡು ಇಲ್ಲಿಯೇ ನೆಲೆಸಿದರಂತೆ. ಹೀಗೆ ಬಹಳ ಕಾಲ ಕಳೆಯಲು ಕ್ರಮೇಣ ದೇವರ ಕೃಪೆಯಿಂದ ಮಳೆಯಾಗಿ ಎಂದಿನಂತೆ ಒಳ್ಳೆಯ

ಕಾಲವು ಉಂಟಾಯಿತು ಎಂಬ ಕಥೆಯು ಬರುತ್ತದೆ. ಅದೇ ರೀತಿ ಸಹ್ಯಾದ್ರಿ ಖಂಡದಲ್ಲಿ ಕ್ಷೇತ್ರಗಳನ್ನು ವರ್ಣಿಸುವಾಗ ಬೀಜ ಮತ್ತು ಧಾನ್ಯ ಎಂಬ ಶಬ್ದಗಳ ಉಲ್ಲೇಖವು ಬರುತ್ತದೆ. ಅದು ೨೮ನೇ ಸಂಧಿಯಲ್ಲಿ ಮಾರ್ಕಂಡೇಯನ ಕಥೆಯಲ್ಲಿ

*ಸತ್ವರೂಪನೆ ವಿಷ್ಣು ನಮ್ಮಯ*
*ಸತ್ವವಾತನಧೀನ ಕ್ಷೇತ್ರದ*
*ಉತ್ತಮದ ಧಾನ್ಯಗಳು ಬೆಳೆದರೆ ಧಾನ್ಯವೇ ಮುಖ್ಯ*
*ಬಿತ್ತುವತನಕ ಬೀಜ ಮುಖ್ಯವು*
*ಮತ್ತೆ ಸಸಿಯೇ ಫಲವ ಕೊಡುವುದು*
*ಮರ್ತ್ಯವಾಗಿಹದಧಿಯ ನವನೀತಗಳ ತೆರನಂತೆ (೨೮-೧೭)*

ಎಂಬಂತಹ ಉಲ್ಲೇಖ ಬಂದರೆ, ಅದೇ ರೀತಿ ಗೌತಮನು ಒಂದು ಸಲ ಮುಪ್ಪಾದ ಗೋವು ಗದ್ದೆಗೆ ಹೋಗಿ ಬೆಳೆಯನ್ನು ತಿನ್ನುತ್ತಿದ್ದರೆ ಅದನ್ನು ಕಂಡು ಗೌತಮನು ತನ್ನ ಕಮಂಡಲದಲ್ಲಿದ್ದ ನೀರನ್ನು ಅದರ ಮೇಲೆ ಪ್ರೋಕ್ಷಿಸಿದನು. ಆಗ ಆ ಗೋವು ಪ್ರಾಣ ಬಿಡಲು ಗೌತಮನು ಭಯಗೊಂಡು ತಪಸ್ಸಿಗೆ ಕುಳಿತು ಶಿವನಿಂದ ಗಂಗೆಯ ಬಿಂದುಗಳನ್ನು ಪಡೆದನು. ಆಗ ಗೌತಮನು ಸತ್ತುಬಿದ್ದಿದ್ದ ಗೋವಿನ ಮೇಲೆ ಗಂಗೆಯನ್ನು ಸುರಿಯಲು ಆ ಗೋವು ಮರಳಿ ಪ್ರಾಣವನ್ನು ಪಡೆಯಿತು ಎಂಬಂತಹ ವರ್ಣನೆಯು ಬರುತ್ತದೆ.

ಈ ಮೇಲೆ ತಿಳಿಸಿದ ಬೆಳೆಗಳು, ಧಾನ್ಯಗಳನ್ನು ಸಾಂದರ್ಭಿಕವಾಗಿ ಕವಿಗಳು ತಿಳಿಸಿದ್ದಾರೆ. ಪ್ರಮುಖವಾಗಿ ಜೀವನ ನಡೆಸಲು ಆ ಕಾಲದಲ್ಲಿ ಆಹಾರದ ಬೆಳೆಗಳಾದ ದವಸ ಧಾನ್ಯಗಳನ್ನು ಬೆಳೆಯುತ್ತಿದ್ದರು. ಆ ಬೆಳೆಗಳನ್ನು ಪ್ರಾಣಿಗಳು ತಿಂದು ನಾಶ ಮಾಡುತ್ತಿದ್ದ ಅಥವಾ ಹಾನಿ ಮಾಡುತ್ತಿದ್ದವು ಅಂಶಗಳನ್ನು ತಿಳಿಸಿಕೊಡಲಾಗಿದೆ.

ಇಂದಿನಂತೆಯೇ ಆ ಕಾಲದಲ್ಲಿಯೂ ಬೀಜಗಳನ್ನು ನಾಟಿ ಮಾಡುತ್ತಿದ್ದರು ಎಂಬುದನ್ನು ಗೌತಮನ ಹೆಂಡತಿ ಅಹಲ್ಯೆಯು ನಾಟಿ ಮಾಡಿ ಒಂದು ದಿನದಲ್ಲೆ ಬೀಜಗಳಾಗಿ ಫಲಗಳಾಗಿ ಅವುಗಳಿಂದ ಬಂದ ಧಾನ್ಯಗಳನ್ನು ಬ್ರಾಹ್ಮಣರಿಗೆ ಅಡುಗೆ ಮಾಡಿ ಬಡಿಸುತ್ತಿದ್ದರು ಎನ್ನುವುದನ್ನು ನೋಡಿದರೆ ಈ ಕೃಷಿ ಪದ್ಧತಿಯಲ್ಲಿ ನಾಟಿ ಮಾಡುವ ಪದ್ಧತಿಯು ಹಿಂದಿನ ಕಾಲದಲ್ಲಿ ಕೂಡ ಇತ್ತು ಎನ್ನುವುದನ್ನು ತಿಳಿಯಬಹುದು. ಹಾಗೆ ಕಕುದ್ಗಿರಿ ಮಹಾತ್ಮ್ಯೆಯಲ್ಲಿ ಕವಿಗೆ ಕಕುದ್ಗಿರಿಯು ಸಾಕ್ಷಾತ್ ಶಿವನಂತೆ ಕಂಡುಬರುತ್ತದೆ. ಆ ಸಂದರ್ಭ ವರ್ಣನೆಯಲ್ಲಿ ಅಲ್ಲಿನ ಬೆಳೆಗಳನ್ನು ಉಲ್ಲೇಖಿಸಿದ್ದಾನೆ.

*ಶ್ಲೋಕ॥ ಶ್ರೀ ಮನ್ಮಂದಾರಿನೀ ಶೈಲಸ್ವಾಮಿನಂ ಚಂದ್ರಶೇಖರಮ್।*
*ವಂದೇಗೌರಿ ಕುಚಾಲಿಪ್ತಕಾಶ್ಮೀರಾಂಚಿತ ವಕ್ಷಸಮ್॥*
*ಜಯದೇವ ಜಗನ್ನಾಥ ಗಂಗಾಧರ ಮಹೇಶ್ವರ।*
*ಜಮದಾನ್ಯಾರ್ಚಿತಪಾದ ಪರಮಾರ್ಥೈಕ ಸಾಧನ॥*
*ನಮಃ ಶ್ವೇತಾದ್ರಿವಾಸಾಯ ಮಹಾನಜ್ವರ ವಾ*
*ನಮಸ್ತೆ ಧವಳಾಂಗಾಯ ನಮಸ್ತೆ ಭಸ್ಮಧಾರಿಣೆ॥*
*ನಮಸ್ತೇ ವಿಶ್ವನಾಥಾಯ ನಮೋ ಭಕ್ತವರಪ್ರದ*
*ಪಾಹಿಮಾಂ ಕೃಪಯಾ ದೇವ ತ್ವತ್ಪಾದ ಕಮಲಾಶ್ರಿಮ್॥* ಇತ್ಯಾದಿ

ಗಂಗಾಸುತನಾದ ಭೀಷ್ಮನು ಭಕ್ತಿಯಿಂದ ತೀರ್ಥಯಾತ್ರೆಯನ್ನು ಮಾಡುತ್ತ ಕಕುದ್ಗಿರಿಗೆ ಬಂದನು. ಆ ಗಿರಿ ಶಿವನಂತೆ ಸಕಲ ಪ್ರಾಣಿಗಳಿಗೆ ಆಶ್ರಯವಾಗಿರುವುದು ಮತ್ತು ಸುತ್ತಲೂ ನಾನಾ ವಿಧಗಳಾಗಿ ನಾಗವೃಕ್ಷ ಪುನ್ನಾಗ ತರುವೃಕ್ಷ ಜಾತಿಲಕೆ ಅಶ್ವತ್ಥ ಕಪಿತ್ಥ ಜಂಬುನಿಂದ ರಸಾಲತೀಂತ್ರಿಣೀ ವಟಲೋಧ್ರ ಖಜರ್ಣರ ಮಾಲತಿ ನಾಳಿಕೆರ ಪನಸ ಸರಳ ದೇವದಾರು ಹೇರಿಳಿ ನಿಂಬೆ, ಬಾಳೆ, ಅಡಿಕೆ, ಸಂಪಿಗೆ, ಅಶೋಕ, ಅಗ್ನಿಮುಖ, ಖದಿರ ಮೊದಲಾದ ಹಲವು ಪರಿಯಾದ ಲತೆಗಳಿಂದ ಸಂವೃತ್ತವಾದ ಫಲವು ಪುಷ್ಪಪ್ರಮಳಗಳಿಂದ ಸಂಕುಲಮಾದ ಪುಷ್ಪಗಳಿಂದ ಆ ಬೆಟ್ಟ ಕಂಗೊಳಿಸುತ್ತಿತ್ತು.

ಇಂದಿನಂತೆಯೇ ಅಂದು ಖರ್ಜೂರ, ನಿಂಬೆ, ಬಾಳೆ, ಅಡಿಕೆಗಳನ್ನು ಅಂದಿನ ಕಾಲದಲ್ಲಿ ಬೆಳೆಯುತ್ತಿದ್ದರು ಎಂಬಂತಹ ಸಂಗತಿಯನ್ನು ಕವಿ ಇಲ್ಲಿ ಶಿವನ ವರ್ಣನೆ ಮಾಡುವುದರ ಮೂಲಕ ಅಲ್ಲಿನ ಬೆಳೆಗಳನ್ನು ಕಟ್ಟಿಕೊಟ್ಟಿದ್ದಾನೆ.

ಇದೇ ರೀತಿಯಲ್ಲಿ ನಂದಿಯು 'ನಂದಿ ಮಹಾತ್ಮ್ಯೆ'ಯಲ್ಲಿ ಕೂಷ್ಮಾಂಡಪರ್ವತಕ್ಕೆ ಗಗನ ಮಾರ್ಗದಲ್ಲಿ ಬರುವಾಗ ಅಲ್ಲಿನ ಬೆಳೆಗಳನ್ನು ಸಾಂದರ್ಭಿಕವಾಗಿ ಕವಿ ವಿವರಿಸಿದ್ದಾನೆ. ಅದೆಂದರೆ ಅರವಟ್ಟಿಗೆಯಲ್ಲಿ ಮಲ್ಲಿಗೆ ಕಮಲ ಕೈರವಗಳ ಮೇಲ್ಪಟ್ಟ ಎಸೆದಿದ್ದಿತು. ಆ ಪ್ರದೇಶಗಳಲ್ಲಿ ಸಿಂಗಾರಗೊಂಡ ಪಾಮರಿಯರು ವಿಹರಿಸುತ್ತಿದ್ದರು. ಪ್ರಪಾಶಾಲೆಯಲ್ಲಿ ನೆರೆದವರನ್ನು ನಿಟ್ಟಿಸುತ್ತ ನಡೆದು ತಂದನು. ಆತ ಕೂಷ್ಮಾಂಡ ಪರ್ವತಕ್ಕೆ ಗಗನ ಮಾರ್ಗದಲ್ಲಿ ಬರುವಾಗ ಮೊಳಗದ್ದೆಗಳನ್ನು ಕಂಪನು ಗಿಣಿಗಳು ಗಂಧ ಶಾಲಿ ಬತ್ತದ ತೆನೆಯನ್ನು ಕುಳಿತು ಹಾಲನ್ನು ಕುಡಿಯುತ್ತಿದ್ದವು ಎಂಬ ವರ್ಣನೆಯಲ್ಲಿ ಇಲ್ಲಿ ನೀರಾವರಿ ವ್ಯವಸ್ಥೆ ಇದ್ದಿರಬೇಕು. ಅದರಿಂದ ಗದ್ದೆಗಳ ಉಲ್ಲೇಖ ಬರುತ್ತದೆ. ಅದರಲ್ಲಿ ಭತ್ತಗಳನ್ನು ಬೆಳೆಯುತ್ತಿದ್ದಿರಬೇಕು. ಅದರಿಂದಲೇ ಕವಿ ತನ್ನ ಕಾಲದ ಬೆಳೆಗಳನ್ನು ಈ ರೀತಿಯಾಗಿ ಚಿತ್ರಿಸಿದ್ದಾನೆಂದು ತಿಳಿದುಬರುತ್ತದೆ.

### ೫.೭ ನೀತಿ ಮತ್ತು ಮೌಲ್ಯ

ಮಹಾತ್ಮ್ಯೆ ಕೃತಿಕಾರರು ಕಾವ್ಯಗಳ ಉದ್ದಕ್ಕೂ ಅನೇಕ ಪುರಾಣದಲ್ಲಿರುವ ಅನೇಕ ಸಂಗತಿಗಳನ್ನು ಚಿತ್ರಿಸಿದ್ದಾರೆ. ಆ ಮೂಲಕ ಕವಿ ಸಮಾಜದಲ್ಲಿ ಮೌಲ್ಯಗಳನ್ನು ಭಿತ್ತಿ ಬೆಳೆಯಲು, ನೀತಿ ನಡಾವಳಿಗಳನ್ನು ಎತ್ತಿ ಹಿಡಿಯಲು ಯತ್ನಿಸಿದ್ದಾನೆ. ಅಂದಿನ ಜನರು ಪವಿತ್ರವೆಂದು ಭಾವಿಸುತ್ತಿದ್ದ ನದಿ ತೀರ್ಥಗಳ ದಾನ-ಯಜ್ಞಗಳ ಇತರ ಸಂಗತಿಗಳ ಬಗೆಗೆ ಈ ರೀತಿಯಲ್ಲಿ ಚಿತ್ರಿಸಿದ್ದಾರೆ.

*ಧೇನುಗಳೊಳಂ ಕಾಮಧೇನುವ*
*ನೂನ ತೀರ್ಥಂಗಳೊಳು ನಿರ್ಮಲ*
*ಮಾನಸಂ ನದಿಗಳೊಳು ದೇವತನೆಯು ಗುಣಗಳೊಳು*
*ದಾನ ಗುಣಮುಖಿರಾರ್ಥದೊಳು ವರ*
*ಮಾನಧನವುಂ ನಾಡೆ ಮಾ್ರವಿ*
*ತಾನ ದೊಳಗಗ್ರಜನು ಯಾಗದೊಳಶ್ವಮೇಧ ಮುಖಂ (೪-೨೮)*

ಎಂದು ನೀತಿಯನ್ನು ಹೇಳುವಾಗ ಕವಿ ಹಸುಗಳಲ್ಲೇ ಅತ್ಯುತ್ತಮವಾದ ಹಸು ಎಂದರೆ 'ಕಾಮಧೇನು ಮತ್ತು ಜನರು' ಪವಿತ್ರವೆಂದು ಭಾವಿಸುತ್ತಿದ್ದ ನದಿ, ತೀರ್ಥ, ದಾನ, ಯಜ್ಞದ ಮೌಲ್ಯಗಳನ್ನು ಕವಿ ಇಲ್ಲಿ ವರ್ಣಿಸಿದ್ದಾನೆ. ಹಾಗೆಯೇ ನೀತಿಯನ್ನು ಹೇಳುವ ಒಂದು ಸಂದರ್ಭವನ್ನು ನೋಡಬಹುದು.

*'ಗುರುವೆ ದೈವಂ ಗುರುವೆ ತೀರ್ಥಂ*
*ಗುರುವೆ ತತ್ವಂ ಗುರುವೆ ಮಂತ್ರಂ*
*ಗುರುವೆ ನಿತ್ಯಂ ಪಂಚಮೂರ್ತಿ ನಿಜಸ್ವರೂಪನಲ*
*ಗುರುವೆ ಗತಿಯಂ ಗುರುವೆ ಮತಿಯಂ*
*ಗುರುವೆ ಮಾತೆಯು ಗುರುವೆ ಪಿತನುಂ*
*ಗುರುವೆ ಪರ್ವಕ್ಕುಇಧತನೆಂದೊರೆದಪವು ವೇದಗಳು' (೭-೨೧)*

ಎಂದು ಹೇಳುವಾಗ ಕವಿ ಭಾರತೀಯ ಸಮಾಜದಲ್ಲಿ ಕಾಣುವ ಗುರುಹಿರಿಯರ ಸಂಬಂಧ ಮತ್ತು ಗೌರವವನ್ನು ತಿಳಿಸಿಕೊಡುತ್ತಾನೆ. 'ಅಂದರೆ ಮಾತೃದೇವೋಭವ, ಪಿತೃದೇವೋಭವ ಗುರುದೇವೋಭವ' ಎಂದು ಗುರುವಿಗೆ ತಂದೆ ತಾಯಿಗಳ ಅನಂತರದ ಸ್ಥಾನವನ್ನು ತಿಳಿಸುವುದರ ಮೂಲಕ ಗುರುದ್ರೋಹ ಮಹಾಪಾಪಾ ಎಂದು ಹೇಳುತ್ತಾನೆ.

ಇದೇ ರೀತಿಯಾಗಿ ಸಾಮಾಜಿಕ ಮೌಲ್ಯ ಮತ್ತು ನೀತಿಯನ್ನು ಹೇಳುವಲ್ಲಿ ಅತಿ ಹೆಚ್ಚಿನ ಒತ್ತನ್ನು ಕೊಟ್ಟು ಹೇಳಿರುವ 'ನಂದಿ ಮಹಾತ್ಮ್ಯೆ'ಯ ಒಂದು ಸಂದರ್ಭವನ್ನು ಹೀಗೆ ನೋಡಬಹುದು. ನಂದಿಯು ಗಿರಿಜೆಯ ಬಳಿ ಬರುವ ಸಂದರ್ಭದ ಒಂದು ನೋಟವಿದು. ನಂದಿಯು ಸಖಿಯರ ಮಧ್ಯೆ ಬರುವಾಗ ಅವರ ಮಧ್ಯದಲ್ಲಿ ಪಾರ್ವತಿಯನ್ನು ನೋಡುತ್ತಾನೆ. ಅವಳನ್ನು ವರ್ಣಿಸುವಾಗ ಕೆಲವು ಮೌಲ್ಯಗಳನ್ನು ತಿಳಿಸುತ್ತಾನೆ. ಅವೆಂದರೆ, ರತ್ನ ಸಂಚಯಗಳಲ್ಲಿ ಪದ್ಮರಾಗ, ಬಳ್ಳಿಗಳಲ್ಲಿ ಕಲಪತತೆ, ಪಾದಪಗಳಲ್ಲಿ ಶ್ರೀಗಂಧ, ರಸದಲ್ಲಿ ಸಿದ್ದರಸ, ಪುಷ್ಪದಲ್ಲಿ ಪಾರಿಜಾತ ಪರಮಂತ್ರಗಳಲ್ಲಿ ಪಂಚಾಕ್ಷರ, ನದಿಗಳಲ್ಲಿ ಸುರಗಂಗೆ, ತಾರೆಗಳಲ್ಲಿ ರೋಹಿಣಿ, ತೀರ್ಥಗಳಲ್ಲಿ ಮಣಿಕರ್ಣಿಕೆಯಂತೆ ಸತಿಯರ ಮಧ್ಯೆ ಆ ಶರ್ವಾಣಿ ಶೋಭಿಸಿದಳು ಎಂದು ಸಾಮಾಜಿಕವಾಗಿ ವಿಧಿಸಲಾದ ಹಲವು ಮೌಲ್ಯಗಳನ್ನು ಗೋವಿಂದ ಕವಿಯು ತುಂಬಾ ವಿವರಣಾತ್ಮಕವಾಗಿ ಚಿತ್ರಿಸಿದ್ದಾನೆ.

ಅದೇ ರೀತಿಯಲ್ಲಿ ನೀತಿಯನ್ನು ಹೇಳುವಾಗಲೂ ಕವಿ ಗುರುಹಿರಿಯರನ್ನು ಗೌರವಿಸಬೇಕು. ಕೆಟ್ಟದ್ದನ್ನು ಮಾಡಬಾರದು, ನಮ್ಮ ಸಂಸ್ಕೃತಿಯನ್ನು ಗೌರವಿಸಬೇಕು ಎನ್ನುವುದನ್ನು ಹೀಗೆ ಹೇಳಿದ್ದಾನೆ. ಗುರುವಾದವನು ಶಿಷ್ಯನಿಗೆ ಜೀವ ಹಿಂಸೆಯನ್ನು ಮಾಡದಿರುವುದೇ ಧರ್ಮ, ಅನ್ಯಸ್ತ್ರೀಯರನ್ನು ಬಯಸದಿರುವುದೇ ಶೀಲ, ಪರಧನಕ್ಕೆ ಹೋಗದವನೇ ನೀತಿವಂತ, ಸತ್ಯವೇ ಸದಾಚಾರ, ಆಧ್ಯಾತ್ಮವನ್ನು ತಿಳಿಯುವುದೇ ಜ್ಞಾನ, ಸ್ವಧರ್ಮವೇ ಧರ್ಮ, ಅತಿಥಿ ಪೂಜೆಯ ಪೂಜಾ ವಿಷಯ, ಸನ್ಮಾರ್ಗ, ದಾನ, ಸದ್ಧರ್ಮ, ಶಿವ ದೈವ ಎನ್ನುವುದೆ ಸಕಲ ಶಾಸ್ತ್ರಾರ್ಥ ಇನ್ನೂ ಮುಂತಾಗಿ ಬೋಧಿಸಿದನು. ಇದು ನಂದಿಯ ಬಳಿಯಿದ್ದು ಶಿವನು ಅಂತಃಪುರಕ್ಕೆ ಬರುವ ಸಂದರ್ಭವನ್ನು ಚಿತ್ರಿಸಿದ್ದಾನೆ.

ಮಹಾತ್ಮ್ಯೆಗಳಲ್ಲಿ ಇನ್ನೊಂದು ರೀತಿಯ ನೀತಿ ಕಥೆಗಳನ್ನು ನೋಡಬಹುದು. ಅವೆಂದರೆ ವಡ್ಡಾರಾಧನೆ ಮತ್ತು ಪಂಚತಂತ್ರದ ರೀತಿಯ ನೀತಿಕಥೆಗಳನ್ನು ಹೇಳುವುದು. ಇಲ್ಲಿ ಅತೀ ಹೆಚ್ಚಾಗಿ ಪ್ರಾಣಿಪಕ್ಷಿಗಳನ್ನು ಬಳಸಿಕೊಂಡು ನೀತಿಯನ್ನು ಸಾರುವುದು ಮುಖ್ಯ ಗುಣವಾಗಿದೆ.

**ಕೋತಿಯ ಕಥೆ :**

'ಒಂದು ಕಾಡಿನಲ್ಲಿ ಒಂದು ದೊಡ್ಡ ಮರದಲ್ಲಿ ಒಂದು ಕೋತಿ ಇದ್ದಿತು. ಆಗ ಒಬ್ಬ ಕಿರಾತನನ್ನು ಹಿಡಿದು ತಿನ್ನಲು ಒಂದು ಹುಲಿ ಓಡಿಸಿಕೊಂಡು ಬರಲು ಅವನು ಅದೇ ಮರವನ್ನು ಹತ್ತಿದನು. ಹುಲಿ ಕಪಿಯನ್ನು ಕುರಿತು ಆ ಬೇಡನನ್ನು ಕೆಳಗೆ

ತಳ್ಳುವಂತೆ ಕೇಳಿತು. "ನನ್ನ ಮನೆಗೆ ಬಂದಿರುವವನನ್ನು ನಾನು ತಳ್ಳುವುದಿಲ್ಲ"ವೆಂದು ಹೇಳಿ ಕೋತಿ ಮರದ ಕೊಂಬೆಯ ಮೇಲೆ ಮಲಗಿ ನಿದ್ರಿಸತೊಡಗಿತು. ಆಗ ಹುಲಿ ಬೇಡನಿಗೆ "ನಿನ್ನನ್ನು ಕೊಲ್ಲುವುದಿಲ್ಲ, ಆ ಕೋತಿಯನ್ನು ತಳ್ಳು" ಎಂದಿತು. ಬೇಡನು ಕೂಡಲೆ ಕೆಳಗೆ ಕೋತಿಯನ್ನು ತಳ್ಳಿದನು. ಕೆಳಗೆ ಬಿದ್ದ ಕೋತಿಯನ್ನು ಹುಲಿ ಹಿಡಿದುಕೊಂಡು ಅಪಹಾಸ್ಯ ಮಾಡುತ್ತ "ನೀನು ಆ ಕಿರಾತನನ್ನು ಉಳಿಸಿದೆ. ಆದರೆ ಅವನು ನಿನ್ನನ್ನು ತಳ್ಳಿದ. ಉಪಕಾರಸ್ಮರಣೆಯಿಲ್ಲದ ಆ ಕಿರಾತನನ್ನು ತಳ್ಳುವೆಯಾದರೆ ನಿನ್ನನ್ನು ಈಗಲೂ ಬಿಡುವೆನು" ಎಂದಿತು. ಅದಕ್ಕೆ ಕೋತಿ ಒಪ್ಪಿ ಮರವನ್ನೇರಿತು. ಅನಂತರ ಹುಲಿಯನ್ನು ಕುರಿತು "ಶತ್ರುವೆ ಆದರೂ ನನ್ನ ಮನೆಗೆ ಬಂದವನನ್ನು ನಾನು ತಳ್ಳುವುದಿಲ್ಲ; ನಿನ್ನ ಹಾದಿ ಹಿಡಿದು ನೀನು ಹೋಗು" ಎಂದಿತು. ಹುಲಿ ವಿಧಿಯಿಲ್ಲದೆ ಹೊರಟುಹೋಯಿತು. ಈ ಕಥೆಯನ್ನು ಕೇಳಿದ ಶಾಂಡಿಲ್ಯ ಮಹರ್ಷಿಯು "ಇದು ಶರಣಾಗತ ಸಂರಕ್ಷಣ ಧರ್ಮ ಸರ್ವಧರ್ಮಗಳಿಗಿಂತಲೂ ಇದು ಉತ್ತಮವಾದುದು. ಇದು ಪಶುಪಕ್ಷ್ಯಾದಿಗಳಲ್ಲಿಯೂ ಇರತಕ್ಕದ್ದು. ಆದರೆ ಇದಕ್ಕಿಂತಲೂ ವಿಶಿಷ್ಟವಾದ ಮತ್ತೊಂದು ವೃತ್ತಾಂತವನ್ನು ಹೇಳುವೆನು ಕೇಳಿರಿ" ಎಂದು ನಾಳೀಜಂಘನ ಕಥೆಯನ್ನು ಹೇಳಿದನು.

ಈ ಕಥೆಯಲ್ಲಿ ಮನುಷ್ಯನ ಸ್ವಾರ್ಥತನ ಮತ್ತು ಉಪಕಾರಕ್ಕೆ ಅಪಕಾರ ಬಗೆಯುವ ನೀತಿಯನ್ನು ಎತ್ತಿ ತೋರಿಸುವುದರ ಮೂಲಕ 'ಮನುಷ್ಯ ಧರ್ಮಕ್ಕಿಂತ ಪ್ರಾಣಿ ಧರ್ಮದ ನೀತಿಯೇ ಶ್ರೇಷ್ಠ ಎಂದು ಸಾರುವ ತತ್ವವನ್ನು ಚಿತ್ರಿಸಲಾಗಿದೆ. ಇದೇ ಹಿನ್ನೆಲೆಯಲ್ಲಿ ಚಿತ್ರಿತವಾಗಿರುವ ಇನ್ನೊಂದು ಪಕ್ಷಿಯ ಕಥೆಯಾದ ನಾಳೀಜಂಘನ ಕಥೆಯನ್ನು ಹೀಗೆ ನೋಡಬಹುದು. 'ಒಂದು ಅರಣ್ಯದಲ್ಲಿ ಒಂದು ಮರ, ಅದರಲ್ಲಿ ನಾಳೀಜಂಘವೆಂಬ ಒಂದು ರಾಜಹಂಸ ವಾಸಿಸುತ್ತಿತ್ತು. ಅದಕ್ಕೆ ಗಂಧರ್ವರಾಯನು ಸ್ನೇಹಿತನಾಗಿದ್ದನು. ಒಂದು ದಿನ ಒಬ್ಬ ಹರಿದ್ರ ಬ್ರಾಹ್ಮಣನು ಹಸಿವು ಬಾಯಾರಿಕೆಗಳಿಂದ ಬಹಳ ಬಳಲಿ ಅಲ್ಲಿಗೆ ಬಂದನು. ಅವನನ್ನು ಕಂಡ ಹಂಸವು ಉಪಚರಿಸಿತು. ಬ್ರಾಹ್ಮಣನು ತನ್ನ ದಾರುಣ ಬಾಳನ್ನು ಹೇಳಿಕೊಂಡನು. ಆಗ ಹಂಸವು ತನಗೆ ಗಂಧರ್ವ ರಾಜನು ಸ್ನೇಹಿತನೆಂದು ಹೇಳಿತು. ಅದರಂತೆ ಬ್ರಾಹ್ಮಣ ಗಂಧರ್ವ ರಾಜನಲ್ಲಿಗೆ ಹೋಗಿ, ನಾಳೀಜಂಘನ ವಿಷಯವನ್ನು ಹೇಳಿ, ಅವನಿಂದ ತಾನು ಹೊರುವಷ್ಟು ದ್ರವ್ಯವನ್ನು ಹೊತ್ತು ಮರಳಿ ನಾಳೀಜಂಘನಲ್ಲಿಗೆ ಬಂದನು. ಅವನಿಗೆ ಬಹಳ ಹಸಿವಾಗತೊಡಗಿತು. ಅಲ್ಲೆಲ್ಲಿಯೂ ಆಹಾರ ಸಿಗುವಂತೆ ಕಾಣಲಿಲ್ಲ. ಮರದ ಮೇಲೆ ನಾಳೀಜಂಘ ಮಲಗಿ ನಿದ್ರಿಸುತ್ತಿದ್ದಿತು. ಕೂಡಲೆ ಅದನ್ನು ಕೊಂದು ಅದರ ಮಾಂಸವನ್ನು ತಿಂದು ದ್ರವ್ಯವನ್ನು

ಹೊತ್ತುಕೊಂಡು ಅಲ್ಲಿ ಹೊರಟುಹೋದನು. ಕೆಲವು ಕ್ಷಣಗಳಲ್ಲಿಯೇ ಗಂಧರ್ವರಾಜನ ಭಟರು ಅಲ್ಲಿಗೆ ಬಂದರು. ಅವರು ನಾಳೀಜಂಘನನ್ನು ಕಾಣದೆ ಅದರ ಗರಿಗಳನ್ನು ಮಾತ್ರ ಕಂಡು ದ್ರವ್ಯವನ್ನು ಹೊತ್ತುಕೊಂಡು ಹೋದವನೇ ಅದನ್ನು ಕೊಂದವನೆಂದು ನಿರ್ಧರಿಸಿ, ಅವನನ್ನು ಬೆನ್ನಟ್ಟಿ ಹೋಗಿ ಕೊಂದರು. ನಾಳೀಜಂಘನಿಗೆ ಸ್ವರ್ಗವೂ, ಬ್ರಾಹ್ಮಣನಿಗೆ ನರಕವೂ ಪ್ರಾಪ್ತವಾದವು. ಅಲ್ಲಿಯೂ ನಾಳೀಜಂಘನು ದೇವತೆಗಳನ್ನು ಪ್ರಾರ್ಥಿಸಿ ಬ್ರಾಹ್ಮಣರನ್ನು ನರಕದಿಂದ ಸ್ವರ್ಗಕ್ಕೆ ಕರೆಸಿಕೊಂಡು ಇಬ್ಬರೂ ಸ್ವರ್ಗ ಸುಖವನ್ನನುಭವಿಸಿದರು. ಇಲ್ಲಿನ ಧರ್ಮನೀತಿ ಏನು ಹೇಳುತ್ತದೆ ಎಂದರೆ ನಾಳೀಜಂಘ ಕೇವಲ ಪಕ್ಷಿಯಾದರೂ, ಆ ಬ್ರಾಹ್ಮಣನನ್ನು ಲೋಕಾಂತರ ದೇಹಾಂತರಗಳೆರಡರಲ್ಲೂ ಕಾಪಾಡಿತು ಎಂದು. ಇದೇ ಶರಣಾಗತ ಸಂರಕ್ಷಣಾ ಧರ್ಮ ಎಂದು ಶಾಂಡಿಲ್ಯರ ಮೂಲಕ ಕವಿ ಹೇಳಿಸುತ್ತಾನೆ. ಹೀಗೆ ಹಲವಾರು ಮಹಾತ್ಮೆಯ ಕೃತಿಗಳಲ್ಲಿ ನೀತಿಯನ್ನು ಎತ್ತಿ ಹೇಳುವ ಕಥೆಗಳು ತುಂಬಾ ಚಿತ್ರಿತವಾಗಿವೆ. ಅವುಗಳಲ್ಲಿ ಸಂಪ್ರದಾಯದ ನೀತಿ, ಧರ್ಮದ ಬೋಧನೆಯೇ ಇವುಗಳ ಮುಖ್ಯವಾಹಿನಿಯಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಮಹಾತ್ಮೆಗಳು ನಮ್ಮ ಹಿಂದೂ ಸಂಸ್ಕೃತಿಯ ಅದರಲ್ಲೂ ಮುಖ್ಯವಾಗಿ ವೈಧ್ಧಿಕ ಮತ್ತು ಶೈವ ಸಂಸ್ಕೃತಿಯ ಪ್ರತಿಬಿಂಬ. ಇಲ್ಲಿ ಚಿತ್ರಿತವಾಗಿರುವ ಜೀವನದರ್ಶನ ಕೂಡ ಭಾರತೀಯರ ಜೀವನದರ್ಶನದಿಂದ ಅಭಿನ್ನವಾದುದೇನಲ್ಲ. ಈ ಮಹಾತ್ಮೆಗಳನ್ನು ವರ್ಣಿಸುವುದು ಆ ಕ್ಷೇತ್ರಗಳ ಹಿನ್ನೆಲೆಯಲ್ಲಿ. ಆದ್ದರಿಂದ ಕವಿಯ ಉದ್ದೇಶ ಕ್ಷೇತ್ರಗಳ ಮಹತ್ವವನ್ನು ವಿವರಿಸುವುದಾಗಿದೆ. ಹಾಗಾಗಿ ಇದರಲ್ಲಿ ನಾಯಕ-ನಾಯಕಿಯರಿಲ್ಲ. ಇಲ್ಲಿ ಹಲವಾರು ಕಥೆಗಳು ಪಾತ್ರಗಳು ಬರುತ್ತವೆ. ಆದರೆ ಅವೆಲ್ಲವೂ ಕಾವೇರಿಯ ಮಹಿಮೆಗಳನ್ನು ವರ್ಣಿಸುವುದಕ್ಕಾಗಿಯೇ ಬಂದಿವೆ.

ಈ ಕಥಾವಾಹಿನಿಯು ಸಂಪ್ರದಾಯದ ಮಾರ್ಗದಲ್ಲಿಯೇ ಸಾಗುತ್ತದೆ. ಇಲ್ಲಿ ತೀರ್ಥಗಳು, ದೇವಾಲಯಗಳು, ತೀರ್ಥಕ್ಷೇತ್ರಗಳನ್ನು ವರ್ಣಿಸುವುದರಿಂದ; ಅವುಗಳಿಗೆ ದೈವೀಭಾವವನ್ನು ಕಲ್ಪಿಸುವುದರಿಂದ ಮತ್ತು ಆ ನದಿಗಳಲ್ಲಿ ಸ್ನಾನ ಮಾಡಿದರೆ ರೋಗರುಜಿನಗಳು ಪರಿಹಾರವಾಗುತ್ತವೆ ಎಂದು ವರ್ಣಿಸಲಾಗುತ್ತದೆ. ಇಂತಹವುಗಳನ್ನು ವರ್ಣಿಸುವಂತಹ ಸಂದರ್ಭದಲ್ಲಿ ಕವಿ ಅರಿವಿಲ್ಲದೇ ತನ್ನ ಸಮಕಾಲೀನ ಸಂಸ್ಕೃತಿಯನ್ನು ಕಟ್ಟಿಕೊಟ್ಟಿದ್ದಾನೆ. ಅದರಿಂದ ಅಂದಿನ ಸಾಮಾಜಿಕ ಮೌಲ್ಯಗಳು, ಉತ್ಸವಗಳು, ಜಾತ್ರೆಗಳು ಹಾಗೂ ಅಂದಿನ ಕಾಲದ ಜನರ ಸ್ಥಿತಿಗತಿ, ಸಾಮಾಜಿಕ ಕಟ್ಟುಪಾಡುಗಳು, ಅವರ

ನಂಬಿಕೆಗಳು, ಆಚರಣೆಗಳು, ರೀತಿ-ರಿವಾಜುಗಳು, ಜೀವನ ಪದ್ಧತಿಗಳು ಮುಂತಾದವುಗಳನ್ನು ಅರಿಯಲು ಸಹಾಯಕವಾಗಿವೆ. ಹೀಗೆ ಭಾರತೀಯ ಸಂಸ್ಕೃತಿಯನ್ನು ಬಿಂಬಿಸುವ ಪ್ರಮುಖ ಕೃತಿಗಳಾಗಿ ಮಹಾತ್ಮೆಗಳು ಪ್ರಾಮುಖ್ಯತೆಯನ್ನು ಪಡೆದಿವೆ ಎಂದರೆ ತಪ್ಪಾಗಲಾರದು.

**ಅಡಿ ಟಿಪ್ಪಣಿಗಳು**

೧. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಪು.ಸಂ-೦೫

೨. **ಅದೇ ಪುಸ್ತಕ**, ಪು.ಸಂ-೦೫

೩. **ಶ್ರೀರಂಗನ ಕಾವೇರಿ ಮಹಾತ್ಮ್ಯೆ**, ಪು.ಸಂ-೨೫೪

೪. **ಅದೇ ಪುಸ್ತಕ**, ಪು.ಸಂ-೧೧೭

೫. **ಅದೇ ಪುಸ್ತಕ**, ಪು.ಸಂ-೧೧೮

೬. ತಿಮ್ಮಕವಿ, **ಯಾದವಗಿರಿ ಮಹಾತ್ಮ್ಯೆ**, ಪು.ಸಂ-೩೮

೭. **ಅದೇ ಪುಸ್ತಕ**, ಪು.ಸಂ-೪೬

೮. **ಅದೇ ಪುಸ್ತಕ**, ಪು.ಸಂ-೭೬

೯. **ಧರ್ಮಶಾಸ್ತ್ರದ ಇತಿಹಾಸ ಸಂಪುಟ-೫**, ಭಾಗ-೧, ಪು.ಸಂ-೧೯

೧೦. **ಕಕುದ್ಗಿರಿ ಮಹಾತ್ಮ್ಯೆ**, ಪು.ಸಂ-೧೧೧

೧೧. **ಅದೇ ಪುಸ್ತಕ**, ಪು.ಸಂ-೧೧೧

೧೨. **ಶ್ರೀರಂಗನ ಕಾವೇರಿ ಮಹಾತ್ಮ್ಯೆ**, ಪು.ಸಂ-೧೩೧

೧೩. **ಅದೇ ಪುಸ್ತಕ**, ಪು.ಸಂ-೨೭೬

೧೪. **ವೆಂಕಟಾಚಲ ಮಹಾತ್ಮ್ಯೆಯಂ**, ಪು.ಸಂ-೩೨

೧೫. ಚಿಕ್ಕುಪಾಧ್ಯಾಯ, **ಶ್ರೀರಂಗ ಮಹಾತ್ಮ್ಯೆ**, ಪು.ಸಂ-xxvii

೧೬. ಕವಿರಂಗ, **ಕಾವೇರಿ ಮಹಾತ್ಮ್ಯೆ**, ಪು.ಸಂ-xiv

೧೭. ಪಂಚಬಾಣ, **ಭುಜಬಲಿ ಚರಿತ್ರೆ**, ಪು.ಸಂ-೯೩

೧೮. ಅದೇ ಪುಸ್ತಕ, ಪು.ಸಂ–೯೧

೧೯. ಸಹ್ಯಾದ್ರಿಖಂಡ, ಪು.ಸಂ–೩೬

೨೦. ಅದೇ ಪುಸ್ತಕ, ಪು.ಸಂ–೩೭

ಅಧ್ಯಾಯ : ಆರು

# ಮಹಾತ್ಮೆಗಳ ಭಾಷಿಕ ಅಧ್ಯಯನ

೬.೧ ಛಂದಸ್ಸು

೬.೨ ವರ್ಣನೆಗಳು

೬.೩ ನಾಣ್ಣುಡಿ

೬.೪ ಗದ್ಯ

## ಅಧ್ಯಾಯ : ಆರು

# ಮಹಾತ್ಮ್ಯೆಗಳ ಭಾಷಿಕ ಅಧ್ಯಯನ

ಯಾವುದೇ ಒಂದು ಕೃತಿಯು ಉತ್ಕೃಷ್ಟವಾದ ಕಾವ್ಯಾವಾಗಬೇಕೆಂದರೆ ಅದರ ಕಾವ್ಯ ಸೌಂದರ್ಯ ಮುಖ್ಯವಾಗುತ್ತದೆ. ಕಾವ್ಯರಚನೆ ಆಯ್ಕೆ ಮಾಡಿಕೊಂಡ ಛಂದಸ್ಸು, ಆ ಛಂದೋಬಂಧದಲ್ಲಿ ಕವಿಯ ನೈಜ ಅಥವಾ ಕಲ್ಪನೆಯ ಕಥೆಯನ್ನು ಅಡಕ ಮಾಡುವಾಗ ಬಳಸಿದ ವರ್ಣನೆಗಳು, ಅಲಂಕಾರಗಳು, ರಸಗಳು ಒಂದಕ್ಕೊಂದರಂತೆ ಬೆಸೆದು ಕಟ್ಟಿದಾಗ ಆ ಕಾವ್ಯ ಭಾಷೆ ಅತ್ಯಂತ ಸುಂದರವಾಗಿ ಮೂಡಿಬರುತ್ತದೆ. ಕಥೆಯ ವಸ್ತುವಿಷಯವನ್ನು ಕುರಿತು ಹೇಳುವಾಗ ಅಲಂಕಾರಗಳನ್ನು ತುಂಬಿ ಓದುಗರ ಮನಸ್ಸನ್ನು ಆನಂದ ಅಥವಾ ಆಹ್ಲಾದಗೊಳಿಸುವಂತೆ ಭಾಷೆಯನ್ನು ರಚನೆ ಮಾಡಿದಾಗ, ಆ ಕಾವ್ಯ ಅತ್ಯಂತ ಪರಿಣಾಮಕಾರಿಯಾಗಿರುತ್ತದೆ. ಕವಿಗಳು ತಮ್ಮ ಕಥೆಗೆ ಯಾವ ಛಂದಸ್ಸು ಹೆಚ್ಚು ಸೂಕ್ತವಾಗುತ್ತದೆಯೊ ಅದನ್ನು ಗಮನಿಸಿಯೇ ಆಯ್ಕೆ ಮಾಡಿಕೊಂಡಿರುತ್ತಾರೆ. ತಾವು ಆಯ್ಕೆ ಮಾಡಿದ ಛಂದಸ್ಸಿನಲ್ಲಿ ತಮ್ಮ ಕಾವ್ಯ ಭಾಷೆಯಲ್ಲಿಯೇ ಪ್ರೌಢಿಮೆ, ಪಾಂಡಿತ್ಯಗಳನ್ನು ತುಂಬಿ ರಸವತ್ತಾದ ಕಾವ್ಯವನ್ನು ಸಿದ್ಧಪಡಿಸುತ್ತಾರೆ. ಮೀಮಾಂಸಕನಾದ ಭಾಮಹನು ಹೇಳುವಂತೆ ಹೆಣ್ಣು ಅಲಂಕಾರಗಳಿಲ್ಲದೆ ಹೇಗೆ ಶೋಭಿಸುವುದಿಲ್ಲವೋ ಕಾವ್ಯವೂ ಹಾಗೆಯೇ ವರ್ಣನೆಗಳು, ಅಲಂಕಾರಗಳು, ರಸಗಳಿಲ್ಲದೇ ಶೋಭಿಸುವುದಿಲ್ಲ ಎನ್ನುವುದನ್ನು ತಿಳಿದ ಸಂಗತಿ; ಹಾಗಾಗಿ ಯಾವುದೇ ಒಂದು ಕಾವ್ಯದ ರಚನೆಗೆ ಛಂದಸ್ಸು, ವರ್ಣನೆಗಳು, ಅಲಂಕಾರಗಳಿಂದ ಕೂಡಿದ ಭಾಷಿಕ ಸ್ವರೂಪವು ಪ್ರಮುಖವಾಗುತ್ತದೆ.

ಇಲ್ಲಿ ರಚನೆಯಾದ ಮಹಾತ್ಮ್ಯೆಗಳು ಒಂದು ಸಾಹಿತ್ಯ ಪ್ರಕಾರದಲ್ಲಿ ರಚನೆಯಾಗಿಲ್ಲ, ಎಲ್ಲಾ ರೀತಿಯ ಸಾಹಿತ್ಯ ಪ್ರಕಾರಗಳಿಂದ ಮಹಾತ್ಮ್ಯೆಗಳು ಚಿತ್ರಿತವಾಗಿವೆ. ಚಂಪೂ, ಷಟ್ಪದಿ, ಸಾಂಗತ್ಯ, ರಗಳೆ, ಚೌಪದಿ ಮತ್ತು ಗದ್ಯದಲ್ಲಿ ರಚನೆಯಾಗಿವೆ. ಆದರೆ ಅತೀ

ಹೆಚ್ಚು ಮಹಾತ್ಮ್ಯೆಗಳು ಕಾವ್ಯದಲ್ಲಿ ರಚನೆಯಾಗಿರುವುದನ್ನು ಇಲ್ಲಿ ಕಾಣಬಹುದು. ಆ ಕೃತಿಗಳು ಗದ್ಯ-ಪದ್ಯಗಳೆರಡನ್ನು ಒಳಗೊಂಡ ದೀರ್ಘವಾದ ಕಾವ್ಯವಾಗಿರುತ್ತದೆ. ಅದರಲ್ಲಿ ಸಂಸ್ಕೃತದ ಬಗೆಬಗೆಯ ವೃತ್ತಗಳು ಅಲ್ಲಿಲ್ಲಿ ಕಂಡುಬರುತ್ತವೆ.

ಇದಕ್ಕೆ ಕಾರಣ ಎಂದರೆ ಒಂದೇ ರೀತಿಯ ಪದ್ಯಜಾತಿಯನ್ನು ಬಳಸಿಕೊಂಡು ದೊಡ್ಡ ದೊಡ್ಡ ಕಾವ್ಯವನ್ನು ಬರೆದರೆ ಕೇಳುಗರಿಗೆ ಬೇಸರವಾಗುತ್ತದೆ; ಅಲ್ಲದೆ ಕಾವ್ಯವನ್ನು ವಾಚನ ಮಾಡಲು ಒಂದೇ ರೀತಿಯ ಭಾಷೆಯನ್ನು ಬಳಸಲು ಸಾಧ್ಯವಾಗದೆ ವಾಚನದ ಲಯಕ್ಕೆ ತಕ್ಕಂತೆ ಹಲವಾರು ಸಾಹಿತ್ಯದ ಪ್ರಕಾರಗಳಾದ ಷಟ್ಪದಿ, ಕಂದ, ರಗಳೆ, ಸಾಂಗತ್ಯ, ಚಂಪೂ, ಗದ್ಯವನ್ನು ಬಳಸಿಕೊಂಡು ಕಾವ್ಯ ರಚಿಸಿರಬೇಕು.

ಅಲ್ಲದೇ ರಾಜರುಗಳನ್ನು ಮತ್ತು ಮಠಾಧಿಪತಿಗಳನ್ನು ಓಲೈಸುವ ಉದ್ದೇಶದಿಂದ ಅಷ್ಟೇ ಅಲ್ಲದೇ ತಮ್ಮ ಪಾಂಡಿತ್ಯ ಪ್ರದರ್ಶನವನ್ನು ತೋರಿಸಲೋಸುಗ ಇಂತಹ ಲವಾರು ಭಾಷಿಕ ಪ್ರಯೋಗಗಳನ್ನು ಕೃತಿಯಲ್ಲಿ ತಂದಿದ್ದಾರೆ. ಇದರ ಮೂಲಕ 'ಪಾಂಡಿತ್ಯ ವಲ್ಲಭ', 'ಸರಸ್ವತಿಯ ಪುತ್ರ' ಎಂಬ ಹೆಸರು ಗಿಟ್ಟಿಸಿಕೊಳ್ಳುವ ಆಸೆಯು ಕಾರಣವಿದ್ದಿರಬೇಕು. ಇವೆಲ್ಲಕ್ಕಿಂತ ಮುಖ್ಯವಾಗಿ ಕವಿಯು ತಾನು ಹೇಳಬೇಕಾದ ಭಾವನೆಗಳು ಒಂದೇ ರೀತಿಯಾಗಿರದೆ ಬೇರೆ ಬೇರೆಯಾಗಿರಬೇಕು ಅಥವಾ ಕಥೆಯನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ವಿಧದ ಭಾವನೆಗಳಿಂದ ಕಾವ್ಯವನ್ನು ವರ್ಣಿಸಬೇಕಾಗುತ್ತದೆ. ಆಗ ಈ ಎಲ್ಲಾ ಬಗೆಯ ಭಾವನೆಗಳನ್ನೂ ಏಕ ಪ್ರಕಾರದಿಂದ ಸಮರ್ಪಕವಾಗಿ ಹೇಳಲು ಒಂದು ಸಾಹಿತ್ಯ ಪ್ರಕಾರದಿಂದ ಸಾಧ್ಯವಾಗುವುದಿಲ್ಲ. ಆಗ ಕವಿ ತನ್ನ ಭಾವನೆಗೆ ತಕ್ಕಂತೆ ಇರುವ ಭಾಷೆಯನ್ನು ಚಿತ್ರಿಸುವಾಗ ಹಲವು ಬಗೆಯ ಪ್ರಕಾರಗಳನ್ನು ಕಾವ್ಯರಚನೆಯಲ್ಲಿ ಬಳಸಿಕೊಂಡಿರಬೇಕು. ಆ ಎಲ್ಲಾ ರೀತಿಯ ಸಾಹಿತ್ಯ ಪ್ರಕಾರಗಳನ್ನು ಬಳಸಿಕೊಂಡು ತಮ್ಮ ಕಾವ್ಯಶಿಲ್ಪವನ್ನು ಹೇಗೆ ಕಟ್ಟಿಕೊಟ್ಟಿದ್ದಾರೆ ಎನ್ನುವುದನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

### ೬.೧ ಛಂದಸ್ಸು

ಮಾರ್ಗ (ಚಂಪೂ) ಸಾಹಿತ್ಯವೂ ಅತ್ಯಂತ ಪ್ರಬಲವಾಗಿ ಬೆಳೆದಿತ್ತು. ಇದು ಜನಸಾಮಾನ್ಯರಿಗೆ ಅರ್ಥವಾಗುತ್ತಿರಲಿಲ್ಲ. ಈ ಸಂದರ್ಭದಲ್ಲಿ ಕವಿಗಳು ತಾವು ಆಯ್ದುಕೊಂಡ ವಸ್ತು–ವಿಷಯಕ್ಕೆ ಚಂಪೂ ಪ್ರಕಾರವು ಸಮಂಜಸವಾದುದಲ್ಲ ಎಂದು ಮನಗಂಡು ದೇಶಿ ಛಂದಸ್ಸಿನಲ್ಲಿ ಪುರಾಣ ರಚನೆ ಮಾಡಬೇಕೆಂದು ನಿರ್ಧರಿಸುತ್ತಾರೆ. ಕಾರಣ ತಾವು ಆಯ್ಕೆ ಮಾಡಿಕೊಂಡ ವಸ್ತು ತತ್ವಕ್ಕೆ, ಧಾರ್ಮಿಕ ಭಕ್ತಿಗೆ ಮತ್ತು ಪುರಾಣಕ್ಕೆ ಸಂಬಂಧಿಸಿದುದು.

ಇದು ಸಾಮಾನ್ಯ ಜನರಿಗೆ ಅಂದಿನ ಕಾಲದಲ್ಲಿ ನಿಲುಕದ ಸಾಹಿತ್ಯ ಪ್ರಕಾರವಾಗಿತ್ತು. ಆದ್ದರಿಂದ ಈ ಪುರಾಣ ಸಾಹಿತ್ಯದಂತಿರುವ ಮಹಾತ್ಮೆ ಸಾಹಿತ್ಯವನ್ನು ಸಾಮಾನ್ಯ ಜನರಿಗೂ ತಲುಪಿಸಬೇಕು ಎಂಬ ಕವಿಗಳ ಆಶಯದಿಂದ ಈ ಕೃತಿಗಳನ್ನು ರಚಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಬಹು ಹಿಂದಿನಿಂದಲೂ ಕವಿಗಳಿಂದ, ವಿದ್ವಾಂಸರಿಂದ ತಿರಸ್ಕರಿಸಲ್ಪಟ್ಟಿದ್ದ ದೇಸಿ ಛಂದಸ್ಸನ್ನು ಹಲವಾರು ಕವಿಗಳು ದೇಸಿಯ ಛಂದೋಬಂಧದಲ್ಲಿ ತಮ್ಮ ಕಾವ್ಯವನ್ನು ಕಟ್ಟುವಲ್ಲಿ ಬಳಸುತ್ತಾರೆ. ೧೬-೧೭ನೇ ಶತಮಾನದ ಪ್ರಮುಖ ಸ್ಥಳ ಚರಿತ್ರೆಗಳನ್ನು ಒಂದು ದೈವಿಕ ಸ್ವರೂಪದ ಹಿನ್ನೆಲೆಯಲ್ಲಿ ಕಟ್ಟಿಕೊಟ್ಟರು. ಕವಿಯು ತನ್ನ ಅರಿವಿಲ್ಲದಂತೆಯೇ ಅಂದಿನ ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ ಪರಿಸ್ಥಿತಿಗಳನ್ನು ಹಾಗೂ ಧರ್ಮ-ಧರ್ಮಗಳ ನಡುವಿನ ಸಂಘರ್ಷಗಳನ್ನು ದೇಸಿ ಚಿಂತನೆಯ ಮೂಲಕ ಕಟ್ಟಿಕೊಡುತ್ತಾರೆ. ಸಂಸ್ಕೃತಭೂಯಿಷ್ಠ ಭಾಷೆಯನ್ನು ಸಂಪೂರ್ಣವಾಗಿ ತಿರಸ್ಕರಿದರೂ, ಕೆಲವು ಪದಗಳು ಶ್ಲೋಕಗಳಾಗಿ ಮತ್ತು ಪ್ರಾರ್ಥನಾ ಪದ್ಯಗಳಾಗಿ ಹಾಗೂ ಮಂಗಳ ಸ್ತುತಿಗಳ ಸಮಾಪ್ತಿಯಲ್ಲಿ ಸಂಸ್ಕೃತವನ್ನು ನೋಡಬಹುದು. ಆದರೆ ಹೆಚ್ಚು ಕಾವ್ಯ ಒಳಗೊಂಡಿರುವುದು ದೇಸಿಯ ನೆಲೆಯಲ್ಲಿ. ಸಂದರ್ಭ, ಸನ್ನಿವೇಶಗಳು, ಸಂಪ್ರದಾಯಗಳು, ನೀತಿಗಳನ್ನು ಕಟ್ಟಿಕೊಡುವ ಸಂದರ್ಭದಲ್ಲಿ ದೇಸಿ ಚಿಂತನೆಯ ಜಾಡನ್ನು ಇಲ್ಲಿ ಕಾಣಬಹುದು. ಮಹಾತ್ಮೆ ಕೃತಿಕಾರರು ಇಲ್ಲಿ ಬಳಸಿರುವ ವರ್ಣನೆಗಳಲ್ಲಿ, ಅಲಂಕಾರಗಳಲ್ಲಿ ಸಾಕಷ್ಟು ದೇಶೀ ಸೊಗಡಿನ ಸಂಭಾಷಣೆಗಳು ಹೆಚ್ಚಾಗಿರುವುದನ್ನು ನೋಡಬಹುದು.

**ಷಟ್ಪದಿ (ವರ್ಣಕ)**

ಶ್ರೀರಂಗನ ಕಾವೇರಿ ಮಹಿಮೆ, ಚಿದಾನಂದ ಅವಧೂತರ ದೇವಿ ಮಹಿಮೆ, ಬಾಲಭಾಸ್ಕರನ ಸಹ್ಯಾದ್ರಿ ಖಂಡ ಮುಂತಾದ ಕೃತಿಗಳು ದೇಶಿಯ ಛಂದೋಬಂಧದಲ್ಲಿ ರಚಿತವಾಗಿವೆ. ಕನ್ನಡದಲ್ಲಿ ಅವಜ್ಞೆಗೆ ಒಳಗಾಗಿದ್ದ ವರ್ಣಕವನ್ನು ಮುನ್ನೆಲೆಗೆ ತರಬೇಕೆಂಬ ಉದ್ದೇಶದಿಂದ ವಸ್ತುಕ ಕಾವ್ಯವನ್ನು ತಿರಸ್ಕರಿಸುತ್ತಾರೆ. ಆದಿಪ್ರಾಸ, ಅನುಪ್ರಾಸಗಳನ್ನು ಷಟ್ಪದಿಯಲ್ಲಿ ಸಾಮಾನ್ಯವಾಗಿ ಕಾಣಲಾಗುತ್ತದೆ. ಹಾಡುಗಬ್ಬವಾದ್ದರಿಂದ ಷಟ್ಪದಿ ಹೆಚ್ಚು ಜನಪ್ರಿಯತೆಯನ್ನು ಹೊಂದಿರಬೇಕು. ಅಲ್ಲದೇ ಕಥನ ಕಲೆಗೂ ಇದು ವಿಶೇಷವಾಗಿ ಹೊಂದಿಕೊಳ್ಳುವ ಛಂದೋಬಂಧವಾಗಿದ್ದರಿಂದ ಅತಿಹೆಚ್ಚು ಮಹಾತ್ಮೆಗಳು ಈ ಪ್ರಕಾರದಲ್ಲಿ ರಚನೆಯಾಗಿರಬಹುದು. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ೧೫-೧೬ನೇ ಶತಮಾನದಿಂದ ೧೮ನೇ ಶತಮಾನದವರೆಗಿನ ಕಾಲವನ್ನು 'ಷಟ್ಪದಿ ಯುಗ' ಎಂದು ಕರೆಯುವ ವಾಡಿಕೆ ಇದೆ. ಆ ಕಾಲದಲ್ಲಿ ಬಹುಸಂಖ್ಯೆಯ ಕಾವ್ಯಗಳು ಹುಟ್ಟಿಕೊಂಡಿವೆ. ೧೫ನೇ ಶತಮಾನದಲ್ಲಿ

ಷಟ್ಪದಿಗೆ ಹೆಚ್ಚು ಮಹತ್ವ ದೊರೆತದ್ದನ್ನು ಕಾಣಬಹುದು. ಮೊದಲ ಕನ್ನಡ ಮಹಾತ್ಮ್ಯೆ ಕೃತಿಯಾದ ಹರಿಹರ ಮಹಾತ್ಮ್ಯೆ ಎಂಬ ರಾಘವಾಂಕನ ಕೃತಿಯು ಮೊದಲನೆಯದೆಂದು ಹೇಳಲಾಗುತ್ತದೆ. ಆದರೆ ಅದು ಅನುಪಲಬ್ಧವಾಗಿದೆ. ಇದರ ನಂತರ ೧೬ನೇ ಶತಮಾನದಲ್ಲಿ ಷಟ್ಪದಿಯಲ್ಲಿ ರಚನೆಯಾದ ಮಹಾತ್ಮ್ಯೆಗಳನ್ನು ನೋಡಬಹುದು.

ಇವು ಹಿಂದಿನ ಚಂಪೂ ಕಾವ್ಯ ಪ್ರಕಾರದಿಂದ ಸ್ವಲ್ಪ ಭಿನ್ನವಾದ ರೀತಿಯಲ್ಲಿ ಹಲವು ಕಾವ್ಯಗಳು ರಚನೆಯಾದವು. ಅದು ಯಾವ ತೆರನಾದ ಭಿನ್ನತೆಯೆಂದರೆ ಕಥಾವಸ್ತುವಿನ ಆಯ್ಕೆ, ನಿರೂಪಣೆ, ಭಾಷಾ ಶೈಲಿಯನ್ನು ಗಮನೀಯವಾದ ಅನೇಕ ವ್ಯತ್ಯಾಸಗಳನ್ನು ಇಲ್ಲಿ ಕಾಣಬಹುದು. ಉದಾಹರಣೆಗೆ ಭಾಸ್ಕರ ಕವಿಯ ಸಹ್ಯಾದ್ರಿ ಖಂಡವನ್ನು ನೋಡಬಹುದು.

*ಬಾಲಕರು ಕನ್ನಡಿಯ ಪಿಡಿದರೆ*
*ಬಾಲಭಾಸ್ಕರನಲ್ಲಿ ಹೊಳೆವಂ*
*ತೀ ಲಲಿತ ಶಾಸ್ತ್ರವನು ಕನ್ನಡದಲ್ಲಿ ವಿವರಿಸುವೆ*
*ಪೇಳಿದೀ ಪದವರ್ಥವೆಲ್ಲವು*
*ಮೂಲಕಾವ್ಯದಲಿದ್ದ ತೆರದಲಿ*
*ಲಾಲಿಪರ ಮನ ಸೌಖ್ಯವಾಗಲಿ ಗುರುಕಟಾಕ್ಷದಲಿ (೧-೮)*

ಅಂದರೆ ಕವಿ ಇಲ್ಲಿ ಸಂಸ್ಕೃತದಲ್ಲಿರುವುದನ್ನು ಲಲಿತವಾದ, ಸರಳವಾದ ಭಾಷೆಶೈಲಿಯಲ್ಲಿ ಅಂದರೆ ಕನ್ನಡದಲ್ಲಿ ಸಹ್ಯಾದ್ರಿ ಮಹಾತ್ಮ್ಯೆಯನ್ನು ಹೇಳುತ್ತಿದ್ದೇನೆ ಎಂದು ಆರಂಭದಲ್ಲಿಯೇ ಹೇಳಿದ್ದಾರೆ. ಹಾಗೆ ಸಹ್ಯಾದ್ರಿ ಖಂಡದ ಕೃತಿಯ ಗಾತ್ರವನ್ನು ನೋಡಿದರೆ ಬೆರಳೆಣಿಕೆಯಷ್ಟು ಮಾತ್ರ ವರ್ಣನೆಗಳು ದೊರೆಯುತ್ತವೆ. ಇಲ್ಲಿನ ವರ್ಣನೆಗಳು ಸರಳವಾಗಿವೆ. ಈತನು ಇಲ್ಲಿ ಶಾಸ್ತ್ರ ವಿಚಾರಗಳನ್ನು ಕೂಡ ಸರಳವಾಗಿ ಪ್ರತಿಪಾದಿಸಿದ್ದಾನೆ. ಉದಾಹರಣೆಗೆ ೨೭-೧೮ರಲ್ಲಿ ಮಾಯೆಯನ್ನು ವಿಶ್ಲೇಷಿಸಿರುವುದ್ನು ಗಮನಿಸಬಹುದು.

ಬಹುತೇಕ ಮಹಾತ್ಮ್ಯೆಗಳು ವಾರ್ಧಕ ಮತ್ತು ಭಾಮಿನಿ ಷಟ್ಪದಿಯಲ್ಲಿ ರಚಿಸಲ್ಪಟ್ಟಿವೆ. "...... ಕನ್ನಡದಲ್ಲಿ ಷಟ್ಪದಿ ಎರಡು ಹಾದಿಯಿಂದ ನಡೆದಿದೆ; ಒಂದು ಗಂಭೀರವಾದ, ಸುಸಂಸ್ಕೃತವಾದ, ಪ್ರೌಢಶೈಲಿ ವಾರ್ಧಕ ಮಾರ್ಗದಲ್ಲಿ ನಡೆದುದು; ಇನ್ನೊಂದು ದೇಶಿ ನಿಷ್ಠವಾದ ಭಾಮಿನಿ ಶೈಲಿ"[೧] ಎಂಬ ಈ ಮಾತು ಮಹಾತ್ಮ್ಯೆ ಸಾಹಿತ್ಯ ಪ್ರಕಾರದಲ್ಲೂ ನೋಡಬಹುದು.

**ಭಾಮಿನಿ ಷಟ್ಪದಿ**

ಭಾಮಿನಿ ಷಟ್ಪದಿಯ ಲಯ ೩:೪, ೩:೪ರ ಗಣ ವಿನ್ಯಾಸದಿಂದ ಕೂಡಿದ್ದು, ಆ ಕಾರಣದಿಂದಾಗಿಯೇ ಅದು ಹಾಡುಗಾರಿಕೆಗೆ ಒಪ್ಪುವ ರಚನೆಯಾಗಿದೆ. ಹಾಗಾಗಿಯೇ ಹಲವು ಮಹಾತ್ಮ್ಯೆಗಳನ್ನು ಮಠಗಳಲ್ಲಿ ಹೆಚ್ಚು ಪ್ರವಚನಕ್ಕೆ ಬಳಸಿಕೊಳ್ಳಲಾಗುತ್ತದೆ. ಈಗಲೂ ಕೆಲವು ವಿಶೇಷ ಸಂದರ್ಭಗಳಲ್ಲಿ ಇಂತಹ ಮಹಾತ್ಮ್ಯೆಗಳ ವಾಚನವನ್ನು ಹಳ್ಳಿ, ಪಟ್ಟಣ, ಮಠಗಳಲ್ಲಿ, ದೇವಾಲಯಗಳಲ್ಲಿ ನೆಡೆಯುವುದನ್ನು ಕಾಣಬಹುದು. ಇದನ್ನು ಓದಿದ ಮತ್ತು ಕೇಳಿದ ಸರ್ವರಿಗೂ ಒಳ್ಳೆಯದಾಗುತ್ತದೆ ಎಂಬ ಭಾವನೆ ಈಗಲೂ ಜನರ ಮನಸ್ಸಿನಲ್ಲಿ ಬೇರೂರಿದೆ. ಈ ಎಲ್ಲಾ ಕಾರಣಗಳಿಂದಾಗಿಯೇ ಚಿದಾನಂದವಧೂತರ 'ದೇವಿ ಮಹಾತ್ಮ್ಯೆ' ಸಾಕಷ್ಟು ಪ್ರಸಿದ್ಧಿಯನ್ನು ಪಡೆದುಕೊಂಡಿದೆ.

ಮಹಾತ್ಮ್ಯೆಗಳು ದೇಶಿ ಸಾಹಿತ್ಯವು ಅತ್ಯಂತ ಪ್ರಬಲವಾಗಿ ಬೆಳೆಯುತ್ತಿದ್ದ ಸಂದರ್ಭದಲ್ಲಿಯೇ ಹುಟ್ಟಿಕೊಂಡವು. ಮಾರ್ಗ(ಚಂಪೂ) ಸಾಹಿತ್ಯದಲ್ಲಿ ಕೆಲವು ಮಾಹಾತ್ಮ್ಯೆ ಕೃತಿಗಳು ರಚನೆಯಾಗಿರುವುದು ವಿಶೇಚವಾಗಿದೆ. ಆದರೆ ಇವುಗಳಿಗಿಂತ ಅತೀ ಹೆಚ್ಚು ದೇಸಿ ಸಾಹಿತ್ಯದಲ್ಲಿ ರಚನೆಯಾಗಿರುವುದನ್ನು ಇಲ್ಲಿ ಗಮನಿಸಲಾಗಿದೆ.

ಇಂತಹ ಕಾವ್ಯ ರಚನೆಗೆ ವಸ್ತು ಸಂಸ್ಕೃತ ಪುರಾಣಗಳೇ ಆದರೂ ತಮ್ಮದೇ ಆದ ಸ್ವತಂತ್ರ್ಯ ರೀತಿಯಲ್ಲಿ ಮಾರ್ಪಾಡು ಮಾಡಿಕೊಂಡು ಕೃತಿ ರಚನೆಯನ್ನು ಕವಿಗಳು ಮಾಡಿದ್ದಾರೆ. ಇಲ್ಲಿನ ವಿಶೇಷತೆ ಎಂದರೆ 'ಕಾವ್ಯವನ್ನು ರಚಿಸುವ ಮೊದಲು ದೇವರ ಸ್ಮರಣೆ, ಪೂರ್ವ ಕವಿಗಳ ಸ್ಮರಣೆ, ಇತಿ ವೃತ್ತಾಂತವನ್ನು ಹೇಳುವುದರ ಮೂಲಕ ಕಾವ್ಯದ ಕೊನೆಯಲ್ಲಿ, ಕಾವ್ಯವನ್ನು ವಾಚಿಸುವುದರಿಂದ ಬರುವ ಫಲವನ್ನು ಹೇಳಿದ್ದಾರೆ. ಇದು ಎಲ್ಲಾ ಮಹಾತ್ಮ್ಯೆ ಕಾವ್ಯಗಳಲ್ಲೂ ಸಾಮಾನ್ಯವಾಗಿ ಕಂಡುಬರುತ್ತಿತ್ತು.

ಕವಿರಂಗನ ಕಾವೇರಿ ಮಹಾತ್ಮ್ಯೆಯಲ್ಲಿ ತನ್ನ ಕಾವ್ಯವನ್ನು ಕುರಿತು ಪ್ರಶಂಸೆಯ ಮಾತುಗಳನ್ನು ಅಥವಾ ಪ್ರಾರ್ಥಿಸಿರುವುದನ್ನು ನೋಡಬಹುದು.

*ಛಂದಕಂ ಸರಿಯಾಗಿ ಲಕ್ಷಣ*
*ಮೊಂದಿ ಮೃದುತರವಾದ ರಚನೆಗೆ*
*ಳಿಂದೆ ಪ್ರತ್ಯಯ ಭಿನ್ನವಾಗದೆ ಪ್ರಾಸಂ ಭೇದಗಳು*
*ಕುಂದದೊಲಲಂಕಾರ ಪುಷ್ಪಿಗ*
*ಳಿಂದ ಪೊಸತಾಗಿಯೆ ವಿಸಂಧಿ ಸ*
*ಮಂದಿಸದವೊಲಂ ಕೃತಿಯ ಪೇಳಿಸು ಶ್ರೀ ಗಿರೀಶ್ವರನೇ*

(ಪೀ. ೧೪)

ಅಂದರೆ ಕವಿ ಇಲ್ಲಿ ತನ್ನ ಕಾವ್ಯ ಸರ್ವಲಕ್ಷಣಭರಿತವಾಗಿದ್ದು ಅದು ಜನಪ್ರಿಯವಾಗುವಂತೆ ಕರುಣಿಸಬೇಕೆಂದು ತನ್ನ ಇಷ್ಟದೇವತೆಯನ್ನು ಪ್ರಾರ್ಥಿಸುತ್ತಾನೆ. ಇನ್ನೊಂದು ಕಡೆಯಲ್ಲಿ ಕವಿ ತನ್ನ ಕಾವ್ಯವನ್ನು ಬಹಳವಾಗಿ ಪ್ರಶಂಸಿದ್ದಾನೆ. ಅದು ಸಂಸ್ಕೃತ ಮೂಲದಿಂದ ರಚನೆಯಾಗಿದ್ದರೂ ಅದನ್ನು ತಾನು ಕನ್ನಡದಲ್ಲಿ ಮಹಾಕಾವ್ಯವಾಗಿ ರಚಿಸಿರುವುದಾಗಿ ಹೇಳಿಕೊಂಡಿದ್ದಾನೆ. ಅದನ್ನೇ "ಒಂದು ಕಡೆಯಲ್ಲಿ ಮಹಾ ಪ್ರಬಂಧವೆನ್ನುತ್ತಾನೆ; ಶೃಂಗಾರಾದಿ ರಸೋಜ್ವಲ ಭೂಗರ್ಭಿತ ಲಲಿತಪದ ವಿಶಿಷ್ಟಾಷ್ಟಾದಶ ವರ್ಣನಾತ್ಮಕವೃತ್ತಿ ರೀತಿ ಗುಣಾಲಂಕಾರ ಲಕ್ಷಣ ಲಕ್ಷಿತ ಮುಕ್ತಪದಗ್ರಸ್ಥ ಸರ್ವಲಘು ಪಶಸ್ತ ಯುಗಳೋಚ್ಚರೂ ಪ್ರಾಕೃತ ಪ್ರತ್ಯಯ ಪ್ರಾಸಾನುಪ್ರಾಸಭೇದವಿಸಂಧಿ ಪಾನದುಕ್ತ್ಯಾದಿ ದೋಷ ವಿವರ್ಜಿತಾರ್ಥ ಗೌರವ ಶಬ್ದ ಶ್ಲೇಷೋತ್ಪ್ರೇಕ್ಷಾದಿ ಮೋಹನೀಕೃತಮಪ್ಪಂತೊಪ್ಪುವೀ ಮಹಾಪ್ರಬಂಧ ಎನ್ನುತ್ತಾನೆ." ಆದರೆ ಒಂದು ಮಹಾಕಾವ್ಯಗಳಲ್ಲಿರಬೇಕಾದ ಲಕ್ಷಣಗಳೆಲ್ಲವೂ ತನ್ನ ಈ ಕಾವ್ಯದಲ್ಲಿದೆ ಎನ್ನುವುದನ್ನು ಕವಿ ಹೇಳುತ್ತಾನೆ.

ಈ ಮೇಲಿನ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಮಹಾತ್ಮ್ಯೆ ಸಾಹಿತ್ಯವು ಹೊಸದೊಂದು ಸಾಹಿತ್ಯ ಪ್ರಕಾರವಾಗಿ ಕನ್ನಡ ಸಾಹಿತ್ಯದಲ್ಲಿ ಪ್ರಮುಖವಾಗುತ್ತದೆ. ಇಂತಹ ಹೊಸ ದೇಶಿ ಅಂಶಗಳೊಂದಿಗೆ ಸಿದ್ಧಗೊಂಡಿರುವ ಈ ಮಹಾತ್ಮ್ಯೆಗಳ ಕಾವ್ಯಸೌಂದರ್ಯವನ್ನು ಹೇಗೆ ನಿರೂಪಿಸಿದ್ದಾರೆ, ಕಟ್ಟಿ ಬೆಳೆಸಿದ್ದಾರೆ ಎನ್ನುವುದನ್ನು ಮುಂದೆ ವಿಸ್ತೃತವಾದ ವಿವರಗಳೊಂದಿಗೆ ವಿಶ್ಲೇಷಿಸಲಾಗಿದೆ. ವರ್ಣನೆಗಳು, ನಿರೂಪಣೆಗಳು, ಅಲಂಕಾರಗಳು, ಗದ್ಯಶೈಲಿ ಕಾವ್ಯದಲ್ಲಿ ಹೇಗೆ ಮಿಳಿತಗೊಂಡಿದೆ ಎಂಬುದನ್ನು ಚರ್ಚಿಸಲಾಗಿದೆ.

**ವಾರ್ಧಕ ಷಟ್ಪದಿ**

೧, ೨, ೪, ೫ ನೆಯ ಪಾದದಲ್ಲಿ ೫ ಮಾತ್ರೆಯ ೪ ಗಣಗಳು ೩ ಮತ್ತು ೬ನೆಯ ಪಾದಗಳಲ್ಲಿ ೫ ಮಾತ್ರೆಯ ೬ ಗಣಗಳು ಕೊನೆಯಲ್ಲಿ ೧ ಗುರು ಬರುತ್ತದೆ. ಧೀರ್ಘ ವರ್ಣನೆಗೆ ಸಕಲ ರಸ ಪೋಷಣೆಗೆ, ಮಧುರಾಲಾಪನೆಗೆ ಷಟ್ಪದಿ ಹೇಳಿ ಮಾಡಿಸಿದಂತೆ ಕಂಡುಬರುತ್ತದೆ. ಬಹುಶಃ ಈ ಗುಣಗಳಿಂದಾಗಿಯೇ ಮಹಾತ್ಮ್ಯೆಗಳಲ್ಲಿ ಅತಿ ಹೆಚ್ಚು ವಾರ್ಧಕ ಷಟ್ಪದಿಯನ್ನು ಬಳಸಿರುವುದನ್ನು ನೋಡಬಹುದು.

ಈ ಸಾಹಿತ್ಯದ ಭಾಷೆಯು ಬಹುವಾಗಿ ಗಂಭೀರವು, ಸುಸಂಸ್ಕೃತವು, ಪ್ರೌಢವಾದ ಬಂಧಗಳನ್ನೊಳಗೊಂಡಿರುತ್ತದೆ. ಗೋಪಕವಿ ವಿರಚಿತ 'ನಂದಿ ಮಹಾತ್ಮ್ಯಂ' ಎಂಬ ಕಾವ್ಯ ವಾರ್ಧಕ ಷಟ್ಪದಿಯಲ್ಲಿ ರಚಿತವಾದ ಪ್ರೌಢ ಗ್ರಂಥವೆಂದು ಒಪ್ಪಿಕೊಳ್ಳಬಹುದು.

ಈ ಕಾವ್ಯವನ್ನು ಲಲಿತವಾದ, ಸರಳವಾದ, ಪೂರ್ಣವಾದ ಕಾವ್ಯವೆಂದು ಒಪ್ಪಲಾಗುವುದಿಲ್ಲ. ಏಕೆಂದರೆ ಇಲ್ಲಿ ಬಳಸಿರುವ ಭಾಷೆಯ ವಿಧಾನ ಇದಕ್ಕೆ ಮುಖ್ಯ ಕಾರಣವಾಗಿದೆ. ಉದಾಹರಣೆಗೆ

*ಲಕ್ಷ ಕಮಲಂ ಪಾರಿಜಾತೋದ್ಗಮಂ*
*ಲಕ್ಷ ತುಲಸೀ ಲಕ್ಷ ಬಿಲ್ವದಳ ಲಕ್ಷದ್ರೋಣಸುಮ*
*ಲಕ್ಷ ತಂಡುಲ ಲಕ್ಷ ಗೋಧೂಮ ಲಕ್ಷತಿಲ ಲಕ್ಷಯವ ಲಕ್ಷ ಮಾಷಂ*
*ಲಕ್ಷ ಚಂದನ ಪತ್ರ ಲಕ್ಷ ನಿರ್ಗುಂಡಿ ದೇಶ*
*ಲಕ್ಷ ಮಾರ್ಘ್ಯ ಪ್ರಸರಮಂ ಭಕ್ತಿಯಿಂದ ನಿ*
*ರ್ಲಕ್ಷರಿಗೆ ತ್ರ್ಯಕ್ಷಂಗೆ ಶಿಕ್ಷಂಗರ್ಪಿಸಿದ ನಂದಿ ಮೋದದಿಂದ*

ಇಲ್ಲಿ ದೇಶ್ಯ ಪದ ಭೂಯಿಷ್ಠವಾಗಿರುವುದು ನಿಜ. ಅದರ ಭರದಲ್ಲಿ ಲಾಲಿತ್ಯವಿಲ್ಲ; ಕೆಲವು ಚಮತ್ಕಾರದ ವರ್ಣನೆಗಳು ಮತ್ತು ಶಬ್ಧಾಲಂಕಾರಗಳು ಮಾತ್ರ ಕಂಡುಬರುತ್ತವೆ.

ಹಾಗೆಯೇ 'ನಂದಿ ಮಹಾತ್ಮ್ಯೆ'ಯಲ್ಲಿ ಗೋಪಕವಿ ಬಳಸಿರುವ ಸಂಸ್ಕೃತ ಮತ್ತು ಕನ್ನಡಗಳ ಕಸುವೆನ್ನು ಕಂಡು ಓದುಗ ಆಶ್ಚರ್ಯಪಡುವಂತೆ ಮಾಡಿದ್ದಾನೆ.

*ತಣ್ಣದಿರಗಂ ಮುಡಿಯ ತೆತ್ತ ತೊರೆವೆತ್ತನ*
*ಲ್ವೆಣ್ಗೊಡಲನಿತ್ತೆ ಮಿತ್ತಂ ತುತ್ತುಗೊಂಡ ಮೇ*
*ಗಣ್ಣೆ ನೆಗೆದೂರಿಜೆದರ್ಮಣಿಸಿ ಸರಳ್ಗೊಂಡ ಬಕ್ಕರಕ್ಕಸನಬಗಿದ*
*ಪಣ್ಣೆಂಡದಟ್ಟಿಯಂ ತಾಳ್ದ ಪಾವಿನ ಕೊರ್ಬ*
*ನೊಣ್ಗೊರಲ್ದೊಡೆದ ಗೋಡೆಯಡರ್ದಪನ್ನೆರಳ್*
*ಕಣ್ಣಾಸೆ ಪೆತ್ತೆಸೆವ ತಲೆಸರಂದಳೆದೆಸೆವ ಹರುಸದಿಂ ಪೊರೆಗೆ ತನ್ನ ||*

ಅದೇ ರೀತಿ 'ಶ್ರೀ ಪರ್ವತ ಮಹಾತ್ಮ್ಯೆ'ಯಲ್ಲಿ ಚೆನ್ನವೀರಾಂಕನ ಭಾಷೆಯ ಛಂದಸ್ಸನ್ನು ಹೀಗೆ ನೋಡಬಹುದು.

ತೆಳುವಾದ ಕಥಾ ಹಂದರವುಳ್ಳ ಮೂಲ ಕತೆಯ ಸುತ್ತಲೂ ಉಪಕತೆಗಳನ್ನು ಬೆಳೆಸಿ ಕಾವ್ಯ ರಚಿಸುವುದನ್ನು ಪುರಾಣ ಕಾವ್ಯ ಎಂದು ಕರೆಯಬಹುದಾರೆ 'ಶ್ರೀ ಪರ್ವತ ಮಹಾತ್ಮೆ' ಇದಕ್ಕೆ ಒಂದು ಉತ್ತಮ ನಿದರ್ಶನವಾಗುತ್ತದೆ. ಕವಿಯ ಕಥನಕಲೆ, ಪಾತ್ರಚಿತ್ರಣ ನೈಪುಣ್ಯತೆಗೆ, ನಂದಿಕೇಶ್ವರನ ಪಾತ್ರ ಚಿತ್ರಣ ನೈಪುಣ್ಯತೆಗೆ ಹಾಗೂ ಹಿರಿಣ್ಯಕಶಿಪುವಿನ ಕಥಾ ಪ್ರಸಂಗಗಳ ಸನ್ನಿವೇಶವನ್ನು ಇಲ್ಲಿ ನೋಡಬಹುದು.

*ತಿಳಿದು ನೋಡಲು ಶರತ್ಕಾಲದಂತತಿ ಬೆಳಕ*
*ಬೆಳತಿಗೆಯ ಬೆಳುದಿಂಗಳಿಗೆ ಹಸ್ತಪಾದಂಗ*
*ಳ ಳವಡಿಕೆಯಾ ಶಿವನ ಕೀರ್ತಿಪಾಡಂಬರಕೆ ಪಾದಮಂ ಕಿವಿಯಾದಳು*
*ಬೆಳೆದವಾ ಕೈಲಾಸಶೈಲ ತನ್ನಿಚ್ಛೆಯಿಂ*
*ಸುಳಿದಾಡ ಕಲಿತುದೋ ಅಜಾಂಡ ವೃಷಭಾಕೃತಿಯ*
*ತಳೆದುದೋ ಯೆನೆ ನಂದಿಕೇಶ್ವರನುಪಮಿಸುವಡುಪಮಾತೀತಾನಾಗಿಪ್ಪ (೧೨-೩೩)*

*ನಡೆದು ತಾರಾದ್ರಿಯೋಲ್ ನಡೆತಂದು ಮೇರುವಿಗೆ*
*ಪಡಿಯಾಗಿ ಮಾರ್ಮಲೆಸುನಿಂದು ಧಾಕ್ರೀತಳದೊ*
*ಳಡಿದಿಹ ಚರಾಚರಂಗಳು ತನ್ನ ನಾಶಿಕದ ವಿಶ್ವಾಸ ನಿಶ್ವಾಸಕೆ |*
*ಬಿಡದುಯ್ಯಲಾಡುತಿರೆ ದೆಸೆ ಮಸಕದಿಂದಲುಸು*
*ರಿಡುತ ಶೃಂಗಾಗ್ರದಿಂ ಕುಲನಗಂಗಳ ಮಿಾಂಟ*
*ಕೆಡುಪುತ್ತ ಸ್ವಚ್ಛೇದ ಲೀಲೆಯಿಂದ ವಿಹಾರಿಸ್ತುಲಾ ನಂದೀಶನು || (೧೨-೨೪)*

ಆದರೆ ಎಂ.ಶ್ರೀನಿವಾಸಮೂರ್ತಿಗಳು ಅಭಿಪ್ರಾಯಪಡುವಂತೆ ಈ ಕೃತಿಗಳು 'ಇದಕ್ಕೆ ಹಿಂದೆ ಬಂದ ಕವಿಗಳು ಸಾಮಾನ್ಯವಾಗಿ ಷಟ್ಪದಿ ಶೈಲಿಯ ಧೋರಣೆಯನ್ನು ಅಷ್ಟಾಗಿ ಗ್ರಹಿಸಿದಂತೆ ತೋರುವುದಿಲ್ಲ. ಆ ಪದ್ಯಗಳು ನಿರರ್ಗಳವಾಗಿ, ಧಾರಾಳವಾಗಿ, ಪ್ರವಾಹ ರೂಪವಾಗಿ ಓಡುವುದಕ್ಕೆ ಬದಲು ಅಲ್ಲಲ್ಲಿ ತೊಡರಿಸಿಕೊಂಡು ಭಾರ ಭಾರವಾಗಿ ಕತ್ತರಿಸಿ ಬಿದ್ದಂತೆ ಏನೋ ಬಗೆಯಾಗಿ ಕಾಣಬರುತ್ತವೆ. ಆ ಕಾಲದ ಕವಿಗಳು ಸಂಸ್ಕೃತ ವಾಕ್ಯಗಳನ್ನು ಪದಗಳನ್ನು ಹೇಗೆ ಹೇಗೋ ಮಧ್ಯದಲ್ಲಿ ತಂದು, ಪದಾರ್ಥಗಳ ಕೊನೆಯಲ್ಲಿ ಅನುಸ್ವಾದಾನ್ವಿತ ಪದಗಳನ್ನು ಸೇರಿಸಿ ಷಟ್ಪದಿಯ ಶೈಲಿಯ ಲಾಲಿತ್ಯಕ್ಕೆ ಕುಂದನ್ನುಂಟು ಮಾಡಿರುವರು........ ಭಾಮಿನೀ ಮತ್ತು ವಾರ್ಧಕ ಷಟ್ಪದಿಗಳು ಉತ್ತಮೋತ್ತಮವಾಗುತ್ತಾ ಕಥಾವಿಸ್ತರಣಾ ಕಾರ್ಯಕ್ಕೆ ಅತ್ಯುಪಯುಕತವಾಗಿ ಪರಿಣಮಿಸಿರುತ್ತವೆ' ಎಂಬ ಮಾತು ಇಲ್ಲಿ ಸತ್ಯವೆನಿಸುತ್ತದೆ.

ಅದೇ ರೀತಿ ಚಿತ್ರಚಾತುರ್ಯ (೧-೨೭) ಬಹುಭಾವ ನಾನಾ ಚಿತ್ರಬಂಧಗಳಿಂದ (೧-೨೩) ಚಿತ್ರಪದದಿಂದ (೧-೨೫) ಕೂಡಿ ಗೋಪಕವಿಯ ಶೈಲಿಯು ಅತ್ಯಂತ ಹೃದ್ಯವಾಗಿರುವುದನ್ನು ಕಾಣಬಹುದು.

*ಚಿತ್ರಚಾತುರ್ಯ ಛಂದೋಬಂಧ ಸಂಧಿ ವರ*
*ಮಿತ್ರತ್ವ ರಸರೀತ ಭಾವಗುಣಗಣ ಕಥಾ*
*ಸುತ್ರಾ ಸುಕಲಾ ಕ್ರಿಯಾಲಂಕಾರ ದೇಶೀಯ ದುಷ್ಕರ ಪ್ರಾಸನೇಮಂ*
*ಸತ್ರಾಣಯತಿ ಗತಿನಯಂ ಸುಲಕ್ಷಣದಿ ಲೋ*
*ಕೋತ್ರಮನೆ ಪದವನಿಡಲಜೆಯದಾಂ ಪಾಣಿಶತ*
*ಪತ್ರಮಂ ಮುಗಿದು ಭಿನ್ನೈಸುವೆಂ ಸುಕವಿಜನರೊಲಿರೊಪ್ಪುಗೊಂಬುದೆಂದು|| (೧-೧೭)*

ಎನ್ನುವ ಮಾತು ಆತನ ವಿನಯವನ್ನು ತೋರಿಸುತ್ತದೆ. ಈತನ ಕಾವ್ಯದಲ್ಲಿ.

*ಸುರಸರಣಿಯಂತೆ ತರಣಿ ಪ್ರಚಾರಂ ಪಾಂಡ*
*ವರಭವನದಂತೆ ಕೃಷ್ಣಾಲಂಕೃತಂ ಸಮು*
*ತ್ಕರುಷವನದಂತೆ ಪೃಥುರೋಮೋತ್ಕರಾಂಚಿತಂ ಶೇಷನಂತಚಲಾವೃತ್ತಂ*
*ಹರಿಯಂತೆ ಸಕಿಲಭುವನಾತ್ಮಕಂ ತಾನಾಗಿ*
*ಕಜೆದುದತಿ ಕೌತುಕವನಬ್ಧೀಂದ್ರನತಿ ರೌದ್ರಘೋಷ ಭೀಷಣಮಾನಾಂತು*

ಎನ್ನುವ ಕ್ಲಿಷ್ಟವಾದ ರಚನೆಗಳಿರುವಂತೆಯೇ

*ಪಲ್ಲಮಜೆಗಳ್ಗೆ ಮೊಲೆಯೂಡಿ ಸಲಹುವ ಸಿಂಹ*
*ವಲ್ಲಭೆಯರಿಂದೆಳೆಗಜುವ ಪಕ್ಕೆಯೊಳಿಕ್ಕಿ*
*ಸಲ್ಲೀಲೆಯಿಂದೋವುತಿರ್ಪ ಪುಲಿಮ್ಲೊಳಿಂದೆಂಟಡಿಗ ಪೋತಂಗಳ*
*ಸಲ್ಲವದ ಪಾಸಿನೊಳು ಪಟ್ಟರಿಸಿ ಮರದನೆಳ*
*ಲಲ್ಲಿ ಪೋಷಿಪ ಜವಳಿದಲೆವಕ್ಕಿಯಂ ದೇವ*
*ಬಲ್ಲಹನ ಬೆಳ್ಳಿಮಲೆಯಲ್ಲಿ ನಿರ್ಮಪ್ಪರದಿ ತಳ್ತಿರ್ಪುವಳ್ತಿಯಂದ || (೧೧೨-೫೧೧)*

ಎನ್ನುವ ಸರಳ ರಚನೆಗಳೂ ಇಲ್ಲಿವೆ.

*ಪುಟ್ಟಿದಮಗಂ ದೋಷಿ ಪೆಂಡತಿಯ ನಡೆ ಮೂರು*
*ಬಟ್ಟೆ ಪೆಣ್ಮಗಳು ಚಂಚಲೆಯೊದಳಿರ್ದ ನೆಲೆ*
*ಗೆಟ್ಟು ಭಂಗಂ ಬಟ್ಟೆ ಕಡುಜಡಧಿಯೆನಿಸುತ್ತ ಜಗದೊಳಪ್ರಿಯನಾದೆನು*
*ಮುಟ್ಟಿ ನೀರೊಳ್ ಕಂಲತು ಪೋಯಿತೆನ್ನ ಸಂಸಾರ*
*ಕೆಟ್ಟುದಕ ಚೆಂದೆಣಿನ ನಿಟ್ಟುಸುಯ್ವಂತೆ ನೀರೊಟ್ಟಲೊಪ್ಪಿ ಮೆರೆದುದು || (೧೮೦-೨೧೧)*

## ೬.೨ ವರ್ಣನೆಗಳು

ಮಹಾತ್ಮ್ಯೆ ಕೃತಿಕಾರರು ದೇಸಿ ಛಂದಸ್ಸಿನಲ್ಲಿ ಪುರಾಣ ರಚನೆ ಮಾಡಿದ್ದರೂ ಸಂಸ್ಕೃತ ಕಾವ್ಯಗಳು ಮತ್ತು ಪ್ರಾಚೀನ ಕನ್ನಡ ಚಂಪೂ ಕಾವ್ಯಗಳಲ್ಲಿ ಬಳಕೆಯಾಗುತ್ತಿದ್ದ ಅಷ್ಟಾದಶ ವರ್ಣನೆಗಳನ್ನು ಬಳಸಿಕೊಂಡಿದ್ದಾರೆ. ಒಂದು ಕಾವ್ಯ ಪರಿಪೂರ್ಣತೆಗೆ ಅದರ ರಮ್ಯತೆಗೆ ಅಷ್ಟಾದಶ ವರ್ಣನೆಗಳು ಅತೀ ಮುಖ್ಯವೆಂದು ಪರಿಗಣಿಸಿದ್ದಂತಹ ಪ್ರಾಚೀನ ಕವಿಗಳು ತಮ್ಮ ಕೆಲವು ಕಾವ್ಯಗಳಲ್ಲಿ ಇಂತಹ ವರ್ಣನೆಗಳನ್ನು ತಂದಿದ್ದಾರೆ.

ಅಷ್ಟಾದಶ ವರ್ಣನೆಗಳಿಲ್ಲದ ಕಾವ್ಯಗಳನ್ನು ಅಪೂರ್ಣಕಾವ್ಯಗಳೆಂದು ಕರೆಯುವ ಅಭಿಪ್ರಾಯವೂ ಕೆಲವರಲ್ಲಿ ಇತ್ತು. ಹಾಗಾಗಿ ಯಾವುದೇ ವಸ್ತುವಿಷಯದ ಕಾವ್ಯಾವಾದರೂ ಅದರಲ್ಲಿ ಈ ಹದಿನೆಂಟು ವರ್ಣನೆಗಳಲ್ಲಿ ಕೆಲವನ್ನಾದರೂ ಬಳಕೆ ಮಾಡಿದ್ದಾರೆ. ಕೆಲವು ಕವಿಗಳು ತಮ್ಮ ಕೃತಿಗಳಲ್ಲಿ ಸಂದರ್ಭಕ್ಕೆ ಉಚಿತವಾಗಿ ಕೆಲವು ವರ್ಣನೆಗಳನ್ನು ತಂದಿದ್ದಾರೆ.

ಮಾಹಾತ್ಮ್ಯೆ ಕಾವ್ಯಗಳಲ್ಲಿ ಭಕ್ತಿರಸ ಪ್ರಧಾನವಾದರೂ ಇದಕ್ಕೆ ಪೂರಕವಾದ ಅನೇಕ ಅಂಶಗಳು ಇವುಗಳಲ್ಲಿ ಹಾಸುಹೊಕ್ಕಾಗಿವೆ. ಕವಿತಿಮ್ಮನ ಕೃತಿಗಳಲ್ಲಿ ವಿಷಯಕ್ಕೆ ಹೊರತಾದ ಹಲವಾರು ವರ್ಣನೆಗಳನ್ನು ನೋಡಬಹುದು. ಆದರೆ ಕವಿರಂಗನು ತನ್ನ ಕೃತಿಯಾದ ಕಾವೇರಿ ಮಾಹಾತ್ಮ್ಯೆಯಲ್ಲಿ ಮೂಲವರ್ಣನೆಗಳ ಪ್ರಭಾವದೊಂದಿಗೆ ಸ್ವಾನುಭವದಿಂದ ಪ್ರಕೃತಿ ವರ್ಣನೆ, ವೇಶ್ಯೆಯರ ವರ್ಣನೆ, ಬೇಟೆಯ ವರ್ಣನೆಗಳನ್ನು ತಂದಿದ್ದಾನೆ. ಕವಿರಂಗ, ಭಾಸ್ಕರನಂತಹ ಕವಿಗಳು ವರ್ಣನೆಗಳನ್ನು ಇನಿತು ಇನಿತು ತಂದು ವಸ್ತು ಪ್ರಾಧ್ಯಾನತೆಯನ್ನು ಎತ್ತಿಹಿಡಿಯುತ್ತಾರೆ. ಕಾವ್ಯಕ್ಕೆ ಎಷ್ಟು ಅವಶ್ಯಕತೆ ಇದೆಯೋ ಅಷ್ಟು ವರ್ಣನೆಗಳನ್ನು ಕವಿರಂಗನ ಕಾವೇರಿ ಮಾಹಾತ್ಮ್ಯೆಯಲ್ಲಿ ಕಂಡುಬಂದರೆ, ತಿಮ್ಮಕವಿಯು ಇವನನ್ನು ಮೀರಿಸುವ ಕಾವ್ಯಗುಣ ವರ್ಣನಾ ಕೌಶಲ್ಯ ಸಂಸ್ಕೃತ ಪದ ಬಳಕೆಯು ಬೆರಗನ್ನು ಮೂಡಿಸುತ್ತದೆ. ತಿಮ್ಮಕವಿ ಮತ್ತು ಗೋಪಕವಿ ವರ್ಣನೆಗಳ ಜಾಲದಲ್ಲಿ ಮುಳುಗಿ ವರ್ಣನೆಗಳ ರಸದೌತಣವನ್ನು ನೀಡುತ್ತಾರೆ. ಈ ರೀತಿಯ ಹೆಚ್ಚಿನ ವರ್ಣನೆಗಳನ್ನು ಮಾಡಿರುವುದರಿಂದ ಕಾವ್ಯದ ಸ್ವರೂಪಕ್ಕಾಗಲಿ, ಅದರ ಬಂಧಕ್ಕೇನು ಆಭಾಸವಾಗಿಲ್ಲ. ಮೂಲವನ್ನು ಪಾಲಿಸುತ್ತಾ ವರ್ಣನೆಗಳನ್ನು ತಂದಿದ್ದಾರೆ. ಹೀಗೆ ಎಲ್ಲಾ ಕಾವ್ಯ ಸೌಂದರ್ಯವು ಅವರ ವರ್ಣನೆಗಳಲ್ಲಿ ಹೇಗೆ ಬೆಸದುಕೊಂಡಿದೆ ಎನ್ನುವುದನ್ನು ಮುಂದೆ ವಿಶ್ಲೇಷಿಸಲಾಗಿದೆ.

ಅಷ್ಟಾದಶ ವರ್ಣನೆಗಳಲ್ಲಿ ಪ್ರಕೃತಿಯ ವರ್ಣನೆಯು ಅತ್ಯಂತ ಪ್ರಮುಖವಾದ ವರ್ಣನೆಯಾಗಿದೆ. ಕವಿಗಳು ತಮ್ಮ ಕಾವ್ಯದಲ್ಲಿ ಬೇಟೆಯಾಡುವ ಸಂದರ್ಭ, ಕ್ಷೇತ್ರದ

ಸುತ್ತಮುತ್ತಲಿರುವ ಸ್ಥಳಗಳನ್ನು ವರ್ಣಿಸುವಾಗ ಪ್ರಕೃತಿಯ ವರ್ಣನೆಯನ್ನು ಅತ್ಯಂತ ರಮ್ಯವಾಗಿ ಚಿತ್ರಿಸಿದ್ದಾರೆ. ಪ್ರಕೃತಿಯಲ್ಲಿ ಕಾಣುವ ಅನೇಕ ವಸ್ತುಗಳಾದ ಗಿರಿಶಿಖರಗಳು ಹೂದೋಟಗಳು, ದಟ್ಟಕಾಡುಗಳು, ರಾಜವೈಭವದ ನಗರಗಳು, ಮಳೆಗಾಲದ ವರ್ಣನೆ, ಸೂರ್ಯನ ಉದಯ, ಸೂರ್ಯಾಸ್ಥಮಾನದ ವರ್ಣನೆಗಳನ್ನು ತುಂಬಾ ಸುಂದರವಾಗಿ ಚಿತ್ರಿಸಿರುವುದನ್ನು ಇಲ್ಲಿ ನೋಡಬಹುದು.

ಚೆನ್ನವೀರಾಂಕನಂತಹ ಕವಿ ೧೮ ವರ್ಣನೆಗಳ ಬಗೆಗೆ ತನ್ನ ಒಲವು ಇಲ್ಲವೆಂದೂ, ಅದಕ್ಕೆ ಕಾರಣ ಹರನು ಪೂರ್ವದಲ್ಲಿ ಪಾರ್ವತಿಗೆ ಹೇಳಲಿಲ್ಲವೆಂದೂ 'ತತ್ಯಾಲೋಚಿತಕೆ ತಕ್ಕ ಉತ್ತರವನು ಸೇರಿಸುವೆನು' ಎಂದು ಹೇಳಿದ್ದಾನೆ. ಹೀಗೆ ೧೮ ವರ್ಣನೆಗಳ ಬಗೆಗೆ ತನ್ನದೇ ಮಿತಿಯನ್ನು ಇಟ್ಟುಕೊಂಡಿದ್ದರೂ, ಕಾವ್ಯ ಬೆಳೆದಂತೆ ಆ ಮಿತಿಯನ್ನು ಮೀರಿರುವುದೇ ಹೆಚ್ಚು. ಆತ ತನ್ನ ಮಿತಿಯನ್ನು ಮುರಿದಿರುವುದಕ್ಕೆ ಉದಾಹರಣೆ ನೋಡಬಹುದು.

*"ಒಲ್ಲೆನವುಷಧಿಯನೆಂದೆಂಬವರ ಕುಸ್ತರಿಸಿ*
*ಬೆಲ್ಲಮಂ ಸವಿದೋಱೆ ಮದ್ದುಣಿಸಿ ವ್ಯಾದಿಯವು*
*ನಿಲ್ಲೆನೆನೆ ನಿಂಜರಂ ಮಾಡುವಂದದಲಿ ಶ್ರೀಪರ್ವತ ಮಾಹಾತ್ಮ್ಯೆಯೊಳಗೆ |*
*ಅಲ್ಲಿಲ್ಲಿಗಿನಿತಿನಿತು ವರ್ಣನೆಗಳು ಪೇಳ*
*ಉಲ್ಲಾಸದಿಂ ಕೇಳಿ ಭವಪಾಶಮಂ ಹಱೆದು*
*ಮಲ್ಲಿಕಾರ್ಜುನನ ಸಾಯುಜ್ಯಪದಮಂ ಪಡೆವರೆಂದಪೇಳದ ಕೃತಿಯಿದು"*[೩]

ಎಂದು ಅಲ್ಲಲ್ಲಿ ಇನಿತಿನಿತು ವರ್ಣನೆಗಳನ್ನು ಹೇಳುತ್ತೇನೆಂದು ಹೇಳಿದ್ದಾನೆ. ಆದರೆ ಕಾವ್ಯದುದ್ದಕ್ಕೂ ವರ್ಣನೆಗಳನ್ನು ಕವಿ ಹೆಚ್ಚಾಗಿ ತುಂಬಿದ್ದಾನೆ. ಪ್ರಕೃತಿಯ ವರ್ಣನೆಯನ್ನು ಲೀಲಾಜಾಲಾವಾಗಿ ಶಿವಮಯವಾಗಿ ಚಿತ್ರಿಸಿದ್ದಾನೆ. ತನ್ನ ಪ್ರತಿಭಾ ಶಕ್ತಿಯನ್ನೆಲ್ಲಾ ಇದಕ್ಕೆ ಮೀಸಲಿರಿಸಿದ್ದಾನೆ ಎನ್ನಬಹುದು.

*ಶಿಲೆ ಮಾತ್ರಮಲ್ಲ ಶಿವಮಯ ತೋರ್ಪಕುಜಾ ಮಹಾ*
*ಕುಲಮೆಲ್ಲ ಸುರ ಸಮೂಹಂ ಚರಿಸುತಿಹ ಮ್ಲೇಚ್ಛ*
*ಒಲುಮೆಯ್ದೆ ರುದ್ರಗಣವಾಯಡೆಯಲಪ್ಪ ನಾರಿಯರೆಲ್ಲ ಶಾಂತಿ ಸಂಗ |*
*ಜಲಮಲ್ಲ ದಿವ್ಯತೀರ್ಥಂ ಭಾವಿಸಲೆಯು*
*ನೆಲನೆಲ್ಲ ಕೈವಲ್ಯದಿಕ್ಕೆ ನೆಲವನೆಯೆಂದು*
*ನೆಲೆಯಾಗಿ ಪೇಳ್ದೆನಿರವೆಂಬುದಂ ನೀನೆಂದು ಪಾರ್ವತಿಗೆ ಮತ್ತಿಂತೆಂದನು (೪-೪೫)*

ಎಂದು ಶ್ರೀಶೈಲ ಪರ್ವತದ ಮಹಿಮೆಯನ್ನು ವರ್ಣಿಸಲಾಗಿದೆ. ಐದನೇ ಸಂಧಿಯಲ್ಲಿ ಗುಪ್ತವಾಂಶದ ಸ್ಥಾಪಕನಾದ ಚಂದ್ರಗುಪ್ತನಾ ರಾಜಧಾನಿಯಿಂದ ಹೇಮಾಂಗದ (ಪಾಟಲೀಪುತ್ರ) ಪುರದ ವರ್ಣನೆಗೆ ಮೀಸಲಾಗಿದೆ. ಹೀಗೆ ಕಾವ್ಯದುದ್ದಕ್ಕೂ ವರ್ಣನೆಗಳನ್ನು ತಂದಿದ್ದಾನೆ.

ಇದೇ ರೀತಿ ಕವಿ ರಂಗನ ಕಾವೇರಿ ಮಹಾತ್ಮೆಯಲ್ಲಿ ಪ್ರಕೃತಿಯ ವರ್ಣನೆಯನ್ನು ತುಂಬಾ ಸುಂದರವಾಗಿ, ರಸವತ್ತಾಗಿ ಚಿತ್ರಿಸಿದ್ದಾನೆ. ಶ್ರೀ ಹರಿ ಆದಿತಿಯ ಗರ್ಭದಲ್ಲಿದ್ದಾಗಿನ ಒಂದು ಸುಂದರ ಚಿತ್ರಣವಿಲ್ಲಿದೆ -

*ಪೂವಿನೊಳು ಪರಿಮಳವಡಸುವೊಲು*
*ಜೀವನೊಳು ಪರಮಾತ್ಮನುಂ ಬೇರೆ*
*ತಾವಲಿಸುವೊಲು ಗಂಗೆಯುಂ ಶಿವನುತ್ತಮೊಂಗದಲಿ*
*ತೀವಿ ನೆಲೆಸಿದವೋಲು ಸತೀಮಣಿ*
*ಯೊ ವಿಮಲ ಗರ್ಭಾಬ್ಧಿಯೊಳಗಂ*
*ತಾವರೆಯ ಮಗನ್ನೆಯನುಂ ನೆಲೆಗೊಂಡನೇಳ್ಗೆಯಲಿ (೭-೩೫)*

ಅಂದರೆ ಹೂವಿನಲ್ಲಿ ಪರಿಮಳ, ಜೀವನದಲ್ಲಿ ಪಾರಮಾತ್ಮ ಶಿವನೊಡನೆ ಶಿವೆ ಅವಿನಾಭಾವ ಸಂಬಂಧದಲ್ಲಿ ಬೆರೆತಂತೆ ಅಧಿತಿಯ ಗರ್ಭದಲ್ಲಿ ಶ್ರೀ ಹರಿ ಬೆಳೆದ ಎಂದು ಬಹಳ ಅಲಂಕಾರಿಕವಾಗಿ ಕವಿ ವರ್ಣಾಸಿದ್ದಾನೆ. ಕವಿ ಪ್ರಕೃತಿಯು ವರ್ಣನೆಯನ್ನು ಕೂಡ ಅಷ್ಟೇ ಸುಂದರವಾಗಿ ಕಟ್ಟಿಕೊಟ್ಟಿದ್ದಾನೆ. ಅದರಲ್ಲಿ ಮುಂಗಾರು ಮಳೆ ಮೋಡಗಳ ಬಣ್ಣ ವೈಭವದ ವರ್ಣನೆಯನ್ನು ಕವಿ ಹೀಗೆ ಚಿತ್ರಿಸಿದ್ದಾನೆ.

*ಕೆಮ್ಮುಗಿಲು ಕಾರ್ಮುಗಿಲ್ಗಳಂ ಪುಸಂ*
*ರಿ ಮೆರೆವ ಬಲ್ಮುಗಿಲ್ಗಳೊತ್ತಿನ*
*ಗಮ್ಮನೆ ಸೆವರಿನೆನದ ವಣ್ಣದ*
*ನೆಮ್ಮಿಕೊಂಡಿಹ ಪೊಸಮುಗಿಲ್ಗಳಂ*
*ಹಮ್ಮಿ ಪಸರಿಪ ತೋರ್ದನಾ ವರ್ಷ ಪ್ರವೇಶದಲಿ ೧೭-೪೨*

ಹಾಗೇ ತೀವ್ರ ಬೇಸಿಗೆಯ ಪರಿಣಾಮ ಎಷ್ಟರ ಮಟ್ಟಿನದು ಎನ್ನುವುದನ್ನು ಒಂದು ಪದ್ಯದಲ್ಲಿ ಚಿತ್ರಿಸಿರುವ ರೀತಿ ಪರಿಣಾಮಕಾರಿಯಾಗಿದೆ. ಬಿಸಿಲಿನ ಝಳದಿಂದಾಗಿ ನೀರಿಲ್ಲದೆ ಬರಿದಾಗಿದ್ದ ಕೆರೆ, ತೊರೆಗಳು ಸೂರ್ಯನೆಂಬ ವ್ಯಾಪಾರಿ ತನ್ನ ಪ್ರಯಾಣದಲ್ಲಿ ಬಳಲಿ, ಬಾಯಾರಿ ಅವುಗಳ ನೀರನ್ನೆಲ್ಲಾ ಕುಡಿದನೋ ಎಂಬಂತೆ ಕಾಣುತ್ತಿದ್ದುವಂತೆ ಎನ್ನುವ ಇಲ್ಲಿಯ ಕಲ್ಪನೆ ಹೊಸತನದಿಂದ ಕೂಡಿದೆ ಎನ್ನುವುದನ್ನು ಗುರುತಿಸಲಾಗಿದೆ.

ಪ್ರತಿಯೊಂದು ಋತುಮಾನದಲ್ಲಿ ಪ್ರಕೃತಿಯಲ್ಲಾಗುವ ಬದಲಾವಣೆ ಮತ್ತು ಅವುಗಳ ನೈಜ ಚಿತ್ರಣಗಳನ್ನು ಕೆಲವು ಪದ್ಯಗಳಲ್ಲಿ ವರ್ಣಿಸಿದ್ದಾನೆ. ಅವುಗಳಲ್ಲಿ ಮಳೆಗಾಲದ ಆಗಮನದ ವರ್ಣನೆಯೂ ಒಂದು.

*ಮೊಳಗೆನಿಪ ವಾದ್ಯಂಗಳಿಂ ಥಳ*
*ಥಳಗೆ ಸೆಳೆಸೆಳೆದಿಡುವ ಮಿಂಚಿನ*
*ಹೊಳೆಹೆನಿಪ ಖಡ್ಗ ಪ್ರಕಾಶಗಳಿಂದ ಧರೆಗಳಿದು*
*ಒಲುಮೆಯೆಂ ದುರ್ಭಿಕ್ಷೆ ಮಂಬರಿ*
*ಗಳೆದು ಶರಜಾಲವನೆ ಸುರಿಸುರಿ*
*ದೊಲಿದು ವರ್ಷಾಗಮದೆ ಕಂಗೆಸೆದುವ ನೃಪಾಲನೊಲಂ* (೧೭-೩೬)

*ತೇರೆ ಸಿಂಗರಿಸಿರ್ದ ಮೊಳ್ಗೆಯಾ*
*ಲೇರಿ ಬರುತಿಹ ಕಾರ್ಮುಗಿಲ್ಗಳ*
*ಘೋರರ ವದುದಿಳೆಗೆ ಥಳಥಳನೆಸೆವ ಮಿಂಚುಗಳ*
*ಹಾರದಿಂ ಮುಗಿಲ್ವಕ್ಕಿಗಳಿಗಾ*
*ಹಾರಮೀವುತೆ ಘನಸಲಲಿತಾ*
*ಸೌರದಿಂದಾಸಾರೆದಿಂ ವರ್ಷಗಮಂ ಬರಲು.* (೧೭-೩೮)

ಅದೇ ರೀತಿ ಚಳಿಗಾಲದ ವರ್ಣನೆಯನ್ನು ತುಂಬಾ ವರ್ಣಾನಾತ್ಮಕವಾಗಿ ಚಿತ್ರಿಸಲಾಗಿದೆ. ಚಳಿಯಿಂದಾಗಿ ಜಲಾಶಯಗಳು ಹೆಪ್ಪುಗಟ್ಟಿ, ಘನೀಭೂತವಾದುದು, ಶ್ರೀತೋದಕಗಳು ಹುಟ್ಟಿಕೊಂಡವು. ಗಿರಿಶಿಖರಗಳು ನುಣ್ಣಗಾದವು ಮತ್ತು ಜನರ ಮೈಬಣ್ಣವೆಲ್ಲ ಕೆಟ್ಟು ಹೋಯಿತು ಎಂದು ವರ್ಣಿಸಿರುವುದನ್ನು ಇಲ್ಲಿ ಗಮನಿಸಬಹುದು.

*ಸಣ್ಣ ಸಂದೋರುತ್ತ ಹಿಮವ*
*ಹಣ್ಣಿಸುತ ದೆಸೆದೆಸೆಯ ಝಳಮಂ*
*ಸಣ್ಣಿಸಂತ ಶೀತೋದಕಂಗಳನಲ್ಲಿ ಪುಟ್ಟಿಸುತ್ತ*
*ಬಣ್ಣಗೆಡಿಸುವ ಜನಗಳೆಲ್ಲರ*
*ನುಣ್ಣನೆಸಗುತ್ತದ್ರಿಗಳನುರೆ*
*ಕಣ್ಣಿಗಚರಿಯೊಗಿ ಕಾಣಿಸಿದುದು ಹಿಮತ್ವಮಯ* (೧೭-೬೦)

ಇಂತಹ ಚಳಿಗಾಲದ ಚಳಿಯನ್ನು ತಾಳೆಲಾರದೆ ಪ್ರೇಮಿಗಳು ಒಬ್ಬರನ್ನೊಬ್ಬರು ತಬ್ಬಿ ಮುದ್ದಿಸುವ ಮೂಲಕ ಮೈಬಿಸಿಯೇರಿಸಿಕೊಂಡು ಚಳಿಯನ್ನು ಹೋಗಲಾಡಿಸಿದ ಪ್ರಸಂಗದ ವರ್ಣನೆಯನ್ನು ಸಹ ಕವಿ ಈ ರೀತಿಯಲ್ಲಿ ಚಿತ್ರಿಸಿದ್ದಾರೆ.

*ಬಾಲೆಯೆರ ಕಠಿಣ ಸ್ತನಂಗಳ*
*ಮೇಲೆ ಕರಕಂಜಗಳಿದ್ದುವಿ*
*ಶಾಲಾಬಾಹುಗಳಿಂದ ಬಿಮ್ಮನೆ ಬಿಗಿದಂ ತೆಕ್ಕೈನೆ*
*ಲೀಲೆಗೊಳಗಾಗೋರ್ವರೋರ್ವರು*
*ಏಳಿಗೆಯೊಳತ್ಯುಷ್ಣಕಂ ರತಿ*
*ಕೇಳಿಗೆಳ ಸುತ್ತಿರ್ದರಾ ತೋರುವ ಹಿಮಾಗಮದಿ* (೧೭-೬೧)

ಅನಂತರದಲ್ಲಿ ಬರುವ ಮದಿಸಿದ ಕಾಡಾನೆಗಳ ಚಿತ್ರಣವನ್ನು ತುಂಬಾ ಸೊಗಸಾಗಿ ಚಿತ್ರಿಸಲಾಗಿದೆ.

*ಹಾಯ್ದು ಗಂಡ ಸ್ಥಲಯುಗದ ಪೊರ*
*ಪಾಯ್ದೆಸೆವ ಮದಧಾರೆಗಂಪಿಗೆ*
*ಬಾಯ್ದೆನೆ ದಡವರ್ಾರೆಡಿಗಳು ಪೇರ್ಗಿವಿಗಳಿಂದೆ*
*ಪೊಯ್ದು ಕೊಡುಪುತೆ ಸರನೆಯಂ ಪೊ*
*ತಾಯ್ದು ಕಮಲವ ಕಾಲ್ದೊಡರ್ವ ಲತೆ*
*ಗೊಯ್ದು ಕೀಳ್ತೀಡಾಡುಕಂ ಮದಕರಿಗೊಳೊಪ್ಪಿದುವು* (೬೦-೨೧)

ಸುಂದರವಾದ ಲಾವಣ್ಯವತಿಯವರು ಜಲಕ್ರೀಡೆಯಾಡುವ ಪ್ರಸಂಗವನ್ನು ಕವಿ ತುಂಬಾ ವರ್ಣಾನಾತ್ಮಕವಾಗಿ ಕಟ್ಟಿಕೊಟ್ಟಿರುವುದನ್ನು ಇಲ್ಲಿ ನೋಡಬಹುದು.

*ಚೆಲ್ಲೆಗರಿಗಳ ಚಪಲೆಯರು ಕರ*
*ಪಲ್ಲವತಿ ಮೊಗೆಮೊಗೆದು ಜವನು*
*ಚೆಲ್ಲಿದರು ದೆಸೆದೆಸೆಯ ಲಾವಣ್ಯದಿ ರಸಗಳನು*
*ಕಳ್ಳತನದಿಂ ಕೊಂಡು ಪೀರ್ದೊಡ*
*ನುಲ್ಲಸದೆ ಸಾಕೆಂಬ ನೆವದಿಂ*

ಲಾವಣ್ಯವತಿಯರು ನೀರಾಟವಾಡಿಯಾದ ಮೇಲೆ ದಡವನ್ನು ಸೇರಿದ ಬಗೆಯ ವರ್ಣನೆಯನ್ನು ಹೀಗೆ ಚಿತ್ರಿಸಲಾಗಿದೆ.

*ಬಟ್ಟ ಮೊಲೆಗಳೆನಿಪ್ಪ ಬುರುಡೆಯ*
*ಕೊಟ್ಟು ತಳ್ಕಿಸುತಜ್ಜಲತೆಗಳ*
*ಮೆಟ್ಟಿ ಕೀಲ್ತೊಡದನೆ ತೆಪ್ಪವ ಮೊಡವರ ಮೇಲೆ*
*ನೆಟ್ಟಿನಿನಿಯರ ಕುಳ್ಳಿರಿಸಿ ಕೊಂ*
*ಡಿಟ್ಟಣಿಸಿ ಬಹ ಘಟ್ಟದೆಲೆಗಳ*
*ನಟ್ಟಿ ಸರಸಿಯ ತಿಟ್ಟನಡೆ ಗಡಿಯಿಟ್ಟಿರ ಬಲೆಯರು (೫೨-೨೨)*

ಇಲ್ಲಿ ಅವರ ಘನಕುಂಚಗಳೇ ಗಾಳಿ ಬುರುಡೆಗಳು, ಕಮಲೆದೆಲೆಗಳೇ ತೆಪ್ಪದಹಾಸು, ಆ ಲಾವಣ್ಯವತಿಯರೇ ತೆಪ್ಪಗಳು, ಅವುಗಳ ಮೇಲೆ ತಮ್ಮಿನಿಯರೊಂದಿಗೆ ಅವರ ಪ್ರಯಾಣವನ್ನು ಸೊಗಸಾಗಿ ಚಿತ್ರಿಸಿದ್ದಾರೆ. ಅದೇ ರೀತಿ ಗೋಪಕವಿಯ ಪ್ರಕೃತಿಯ ವರ್ಣನೆಯನ್ನು ನಂದಿ ಮಾಹಾತ್ಮ್ಯೆಯಲ್ಲಿ ನೋಡಬಹುದು. ಕೈಲಾಸ ಪರ್ವತವನ್ನು ವರ್ಣಿಸುವ ಸಂದರ್ಭದಲ್ಲಿ ಅಲ್ಲಿನ ಋಷಿಗಳ ತಪೋಮಹಿಮೆಂದ ಅವರ ತಪೋವನಗಳಲ್ಲಿ ಪ್ರಕೃತಿ ವೈಪರೀತ್ಯವಿರಲಿಲ್ಲ ಎನ್ನುವುದನ್ನು ಕವಿ ಹೀಗೆ ವರ್ಣಿಸಿದ್ದಾನೆ -

*ಅಳಿತುಳಿಯಮ್ಮವಲರಂ ಕಮಲ ತಂಡುಲಂ*
*ಗೊಳಲಮ್ಮವರಸಂತೆ ಪರಿಪಕ್ವಫಲಗಳಂ*
*ಗಿಳಿಕರ್ದುಕಲಮ್ಮ ನಬಾಕ್ಷರ ತಾಟಕ ಪ್ರಪೂರ್ಣೋದಕದಿ ಜಲಚರು*
*ಸುಳಿಯಲಮ್ಮವು ಜಾತನವಶಾಡ್ವಲಗ್ರಾಸ*
*ಕೆಳಸಲಮ್ಮವು ಮೃಗಪ್ರಸತಿ ಕುಳಿರಂ ಮಾಣ್ಬು*
*ಪಳಚಲಮ್ಮದು ಗಾಳಿ ಬಿಸಿಯ ಬಿಸಲಂ ಗೊಸಲಮ್ಮನಿನಸಂವನದೊಳು*

*ನಂದಿ ಮಾಹಾತ್ಮೆ (೨-೨೨)*

ಹಾಗೆ ತಿಮ್ಮಕವಿಯ ಪ್ರಕೃತಿಯ ವರ್ಣನೆಯನ್ನು ನೋಡಿದರೆ ಕ್ಲಿಷ್ಟವಾದ ರಚನೆಯಲ್ಲಿ ವರ್ಣನೆಗಳನ್ನು ತಂದಿದ್ದಾನೆ. ಅದು ಕಾವೇರಿ ಬಯಲಿನ ಶಾಲೀವನಕ್ಕೆ ಮುತ್ತುತ್ತಿದ್ದ ಗಿಳಿಗಳನ್ನು ಓಡಿಸುತ್ತಿದ್ದ ಓರ್ವ ಪಾಮರಿಯ ವರ್ಣನೆ ಹೀಗಿದೆ -

*ಜಾಟಿ ಕುಚಾಂಬರು ಕುಣಿಯ ಕರ್ಣದೊಳೋಲೆ ಲಲಾಟದೊಳ್‌ಕರುಳ್*
*ಮಿಜೆಯಲುಂಗೆ ಬಟ್ಟಮೊಲೆ ಕಂಪಿನ ಬಳ್ಕೆ ಸುಮಧ್ಯದೇಶಮೊ*
*ಳ್ವೇಜೆ ನಿಂತಂಬಮುಂ ಪೊಡರೆ ನೊಪುರ ಕಂಕಣರಾದ ಮುಣ್ಣೆನೌಂ*
*ಸಾಜುತುಮಿಟ್ಟು ಕೈರವದಿ ನೋಡಿದಳ್ ಮದಕೀರಬೃದಮಂ (೧-೫೦)*

ಅದೇ ರೀತಿ ತಿಮ್ಮಕವಿಯ ಯಾದವಗಿರಿ ಮಹಾತ್ಮೆಯಲ್ಲಿ ಸಂಜೆಯನ್ನು ವರ್ಣಿಸುವ ಪರಿ ಹೀಗಿದೆ -

*ವರುಣಾಶಾಂಗಗೆ ಕಾಲಮೆಂ ವಿಟನೊಳ್ ಕೊಡಲ್ ಮಹಾರಾಗ*
*ದಿಂ ದಿರದಸ್ತಾದ್ರಿ ಪಯೋಧರಾಗ್ರಮಿಳದುದ್ಯರಾಗ ಚೇಲಾಂಚಮಂ*
*ಭರದಿಂ ಜಾಜಿರೆಸೆದಂತೆ ಸಂಜೆಯುಡುಗಿತ್ತು ನ್ಮತತ್ತಿತ್ಕಂತಳೋಷ್ಕರ*
*ಮೆಂಬಂತೆ ತಮಂ ಕಳಲ್ದರಲ್ಲಳೆಂಬಂಕೊಪ್ಪುಗುಂ ತಾರೆಗಳ್ (ಯಾ.ಮಾ. ೩-೫೭)*

ಮಾಹಾತ್ಮೆಗಳಲ್ಲಿ ಪ್ರಕೃತಿಯ ಬಗ್ಗೆ ಅತೀ ಹೆಚ್ಚು ವರ್ಣನೆಗಳು ಸಿಕ್ಕರೂ, ಅಲ್ಲಲ್ಲಿ ಮಹಾಕಾವ್ಯದ ಅಷ್ಟಾದಶ ವರ್ಣನೆಗಳಾದ ಸಮುದ್ರ, ಮೇರು, ಮೃಗಯಾವಿಹಾರ, ಸೂಳೆಗೇರಿ ಮುಂತಾದವುಗಳ ವರ್ಣನೆಯನ್ನು ಕವಿಗಳು ಇಲ್ಲಿ ಪ್ರಾಸಂಗಿಕವಾಗಿ ತಂದಿದ್ದಾರೆ.

ಕವಿ ಮಾಡಿರುವ ಮೃಗಯೊವಿನೋದದ ಒಂದೆರಡು ಉದಾಹರಣೆಗಳನ್ನು ಕೊಡಬಹುದು. ಶಬರರು ಮೃಗಗಳನ್ನು ಭೇಟಿಯಾಡಿದ ರೀತಿಯನ್ನು ಹೀಗೆ ಚಿತ್ರಿಸಲಾಗಿದೆ.

*ಪೋರಿದರು ತೂರಿದರಂ ಶರಗಳ*
*ನೂರಿದರಂ ಜಾರಿದರಂ ಪದಪಿಂ*
*ಚೇರಿದರಂ ಮೀರಿದರುರುಲ್ಲಳನಿಕ್ಕುತಡಗಟ್ಟಿ*
*ಪಾರಿದರಂ ಕೀರಿದರ್ದರುಬೆಯವ*
*ಕಾರಿದರು ಬೀರಿದರು ಮೆಚ್ಚರಿ*
*ತೋರಿದರು ಸಾರಿದಿರುಮರಸಗೆ ಶಬರಸಂದೋಹ (೯-೬೯)*

*ಇರಿದರೀಟಿಯೊಳರಿದರಸಿಯಂ*
*ತರಿದು ಚಕ್ರದೆ ಸುರಿದು ಶರಗಳ*
*ಕೊರೆದರೆದೆಗಳ ಬರುವ ಮಿಗಗಳ ನಿಲ್ಲಿನಿಲ್ಲೆನುತ*
*ತರುಬಿ ಪೊಯ್ದರು ತುರುಗಿ ಕೊಯ್ದರು*
*ಕರಿಕರುಗಳ ಕೆಡಪಿ ಸೆರೆಗಳ*
*ನೆರೆದು ಪಿಡಿದರು ಕನಲಿ ಬಡಿದರು ಶಬರರೊಗ್ಗಾಗಿ*

ಇಲ್ಲಿ ಕವಿ ಮಾಡಿರುವ ಮೃಗಯಾವಿನೋದ, ಅಂದು ಬೇಟೆಗಾರರು ಬಳಸುತ್ತಿದ್ದ ಬೇಟೆಯ ಪರಿಕರಗಳ ಬಗ್ಗೆ ತಿಳಿಸುತ್ತದೆ.

### ಅಲಂಕಾರ

ಕವಿಗಳು ತಮ್ಮ ಕಾವ್ಯವು ಸೊಗಸಾಗಿ ವ್ಯಕ್ತಗೊಳ್ಳಲು ಅಲಂಕಾರಗಳನ್ನು ಬಳಸಿಕೊಂಡು ಬಂದಿದ್ದಾರೆ. ಕನ್ನಡ ಕೈಪಿಡಿಯಲ್ಲಿ ಅಲಂಕಾರವನ್ನು ಕುರಿತು "ಸಾಹಿತ್ಯದಲ್ಲಿ ಅಲಂಕಾರವೆಂದರೆ ಅನುಪ್ರಾಸ, ಉಪಮೆ ಮುಂತಾದ ಶಬ್ದಾರ್ಥ ವೈಚಿತ್ರ್ಯಗಳೆಂದು ಒಂದು ಅರ್ಥ. ಕಾವ್ಯದಲ್ಲಿರುವ ಸೌಂದರ್ಯ ಎಂದು ಮತ್ತೊಂದು ಅರ್ಥ"[೪] ನೀಡಿದೆ. ವ್ಯವಹಾರಿಕ ಭಾಷೆಯನ್ನು ಹೊರತುಪಡಿಸಿ ಕಾವ್ಯದಲ್ಲಿ ಅಲಂಕಾರಗಳು ಮೂಡಿಬರುತ್ತವೆ. ಕವಿ ತನ್ನ ಭಾವನೆಗಳ ಸ್ಪಷ್ಟತೆಗಾಗಿ ಮತ್ತು ಅವು ಓದುಗರಲ್ಲಿ ರಸಾನಂದ ಉಂಟುಮಾಡಲು ಅಲಂಕಾರಗಳನ್ನು ಬಳಸಿಕೊಂಡಿರುತ್ತಾರೆ. ಇದೇ ತರಹದ ಅಲಂಕಾರಗಳನ್ನು ಮಹಾತ್ಮೆಗಳಲ್ಲಿ ಯಾವ ಸಂದರ್ಭದಲ್ಲಿ ಬಳಸಿಕೊಂಡಿದ್ದಾರೆ ಎಂಬುದನ್ನು ಈ ಕೆಳಗೆ ನೋಡಲಾಗಿದೆ.

ಶಬ್ದಾಲಂಕಾರಗಳಲ್ಲಿ ಛೇಕಾನುಪ್ರಾಸ, ವೃತ್ತ್ಯಾನುಪ್ರಾತ, ಯಮಕಗಳನ್ನು ಪದ್ಯಗಳೊಂದಿಗೆ ತಿಳಿಸಿದೆ. ಅರ್ಥಲಂಕಾರಗಳಲ್ಲಿ ಉಪಮೆ, ದೃಷ್ಟಾಂತಗಳನ್ನು ತಿಳಿಸಿದೆ.

### ಛೇಕಾನುಪ್ರಾಸ

"ಶಬ್ದಾಲಂಕಾರಗಳಲ್ಲಿ ಒಂದು ಮುಖ್ಯವಾದ ಪ್ರಕಾರ ಅನುಪ್ರಾಸ. ಅನುಪ್ರಾಸದಲ್ಲಿ ಎರಡು ಅಕ್ಷರಗಳು ಜತೆ ಜತೆಯಾಗಿ ಹಲವು ಕಡೆ ಬಂದರೆ 'ಛೇಕಾನುಪ್ರಾಸ'ವೆಂದು ಹೆಸರು."[೫]

*ದೇವ ಶ್ರೀಮನ್ಮದೇವ ದೇವಾರಾಧ್ಯ*
*ದೇವ ದೇವೋತ್ತಮಂ ದೇವ ಸರ್ವಾಧಾರ*
*ದೇವ ಸರ್ವಾತ್ಮಕಂ ದೇವ ಸರ್ವೇಶ್ವರಂ ದೇವ ನಿರ್ಮಳ ನಿರವಯ*
*ದೇವ ಗತಿ ದೇವ ಮತಿ ದೇವ ವಾದಂ ದೇವ*
*ದೇವ ಗುರು ಪ್ರಿಯ ಚೆನ್ನಮಲ್ಲಿಕಾರ್ಜುನ ಸದಯ*
*ನೀವೀಗಲೆನ್ನ ಮಸ್ತಕದೊಳಿರ್ಪುದೆಂದೆನಲು ನಾವಾತಗಿಂಕೆಂದವು*

*(ಪ.ಮಾ. || ೧ - ೬೪ ||)*

*ಮಿಸುಪಂಕುರದಲೊಮ್ಮೆ ಕಿಸಲಯಂಗಳಿನೊಮ್ಮೆ*
*ಕುಸುಮಕುಲದಿಂದೊಮ್ಮೆ ಪಸುರ್ಮಿಡಿಗಳಿಂದೊಮ್ಮೆ*
*ಕಸುಗಾಯಿಗಳಿಂದೊಮ್ಮೆ ನಸುದೋರೆಗಳಿನೊಮ್ಮೆ ಒಳ್ದೋರೆಗಳಲಿನೊಮ್ಮೆ |*
*ಎಸೆವ ಪಣ್ಗಳಿನ್ನೊಮ್ಮೆ ತನಿವಣ್ಣಳಿಂದೊಮ್ಮೆ*

*ಮುಸುಗುವಳಿ ಕೋಕಿಲ ಸ್ವನದಿನೊಮ್ಮೊಮ್ಮೆಯಿಂ*
*ವಸುಧಾತಳಕ್ಕೆ ಸಮ್ಮುದಮನೊದವಿಸುತಲಿಮ್ಮಾವು ಕಡುಚೆಲ್ವೆಸದಿರೆ*

(ಪ-ಮಾ. || ೫ - ೨೪ ||)

*ಲಕ್ಷ ಕಮಲಂ ಲಕ್ಷ ಪಾರಿಜಾತೋದ್ಗಮಂ*
*ಲಕ್ಷ ತುಲಸೀ ಲಕ್ಷ ಬಿಲ್ವದಳ ಲಕ್ಷದ್ರೋಣಸುಮ*
*ಲಕ್ಷ ತಂಡುಲ ಲಕ್ಷ ಗೋಧೊಮ ಲಕ್ಷ ತಿಲ ಲಕ್ಷ ಯವ ಲಕ್ಷ ಮಾಷಂ*
*ಲಕ್ಷ ಚಂದನ ಪತ್ರ ಲಕ್ಷ ನಿರ್ಗುಂದೆ ದಶ*
*ಲಕ್ಷ ಮಾರ್ಘ್ಯ ಪ್ರಸರಮಂ ಭಕ್ತಿಯಿಂದ ನಿ*
*ರ್ಲಕ್ಷ್ಯರಿಗೆ ತ್ರ್ಯಕ್ಷಂಗೆ ದಕ್ಷ ಶಿಕ್ಷಂಗರ್ಪಿಸಿದ ನಂದಿ ಮೋಹದಿಂ*

(ನ-ಮಾ. || ೧೮ - ೮ ||)

*ಶರಭ ಶುಕ ಸೌರಿ ಸಾನಂದನುಂ ವೃಂದನುಂ*
*ವರುಷವಾಹನ ವಾರ್ಧಿವಾಸನುಂ ಕೇಶನುಂ*
*ಚರೆಕ ಚಂಚಲ ಚಪಲಗಾತ್ರನುಂ ಚಿತ್ರನುಂ ಮತಿಕಾಯನುಂ ಮಾಯನುಂ*
*ಉರಗಾಸ್ಯನುಲ್ಕಮಂದಾರನುಂ ತಾರನುಂ*
*ಕರಿಮುಖ ಕಪರ್ದಿ ಮಾರ್ಕಂಡನುಂ ಕುಂಡನುಂ*
*ವರಲೋಹಿತಾಂಗ ವಸುಹಸ್ತನುಂ ಧ್ವಸ್ತನುಂ ಶಿವನೋಲಗದೊಳಿರ್ದರು*

(ನ-ಮಾ. || ೫ - ೩೨ ||)

**ವೃತ್ತ್ಯಾನುಪ್ರಾಸ**

ಶಬ್ದಾಲಂಕಾರಗಳಲ್ಲಿ ಒಂದು ಮುಖ್ಯವಾದ ಪ್ರಕಾರ ಅನುಪ್ರಾಸವಾಗಿದೆ. ಅನುಪ್ರಾಸ ಎಂದರೆ ಅಕ್ಷರಗಳ 'ಆವೃತ್ತಿ'. "ಅನುಪ್ರಾಸದಲ್ಲಿ ಒಂದೋ ಎರಡೋ ಮೂರೋ ಅಕ್ಷರಗಳು ಮತ್ತೆ ಮತ್ತೆ ಬಂದರೆ ಅದಕ್ಕೆ ವೃತ್ತ್ಯಾನುಪ್ರಾಸವೆಂದೂ, ಎರಡು ಅಕ್ಷರಗಳು ಜತೆ ಜತೆಯಾಗಿ ಹಲವು ಕಡೆ ಬಂದರೆ 'ಛೇಕಾನುಪ್ರಾಸ'ವೆಂದು ಹೆಸರು."[೬]

*ಶರಣು ಗಂಗಾ ಜೂಟ ಶರಣು ಚಂದ್ರ ಕಿರೀಟ*
*ಶರಣು ಸಿದ್ಧುಣಸಿಂಧು ಶರಣು ಸಜ್ಜನಬಂಧು*
*ಶರಣು ಗಿರಿಜಾನಾಥ ಶರಣು ವೃಷಭೂರೂಢ ಘನಪುಣ್ಯಶಾಲಿ ಶೂಲಿ*
*ಶರಣು ತ್ರಿಪ್ಪುರಹರಣ ಶರಣು ಭಕ್ತೋದ್ಧರಣ*

*ಶರಣು ಮನ್ಮಥಮಥನ ಶರಣು ಪಾವನ ಕಥನ*

*ಶರಣು ಜಗದಾರಾಧ್ಯ ಶರಣು ಭಾವಡ್ವೈದ್ಯ ಭವ ಶರಣು ಶರಣು ಶರಣು*

*(ನ-ಮಾ. || ೨೫ - ೪೩||)*

*ಅತ್ರಿ ಮಿತ್ರಾ ವರುಣಮುಖ್ಯ ಮುನಿನಿಕರನುತಿ*

*ಪಾತ್ರ ಗಾತ್ರಾನಂತರತ್ನ ಹಿಮಕರದ ವೀತಿ*

*ಹೊತ್ರ ನೇತ್ರ ಗಜಾಸುರಾರಿ ತ್ರಿಪುರಾರಿ ಗಂಗಾತರಂಗೋತ್ತಮಾಂಗ*

*ಚಿತ್ರ ಚಾರಿತ್ರ ವಿಶ್ವೈಕರಕ್ಷಣ ಧನಜ*

*ಮಿತ್ರ ಗೋತ್ರಸುತಾ ಕಳವು ನಿರ್ಮಳ ವೃಷಭ*

*ಪತ್ರ ಚಿತ್ರಾಪಘನ ಚರ್ಮಚೆಲ ಸುಲೀಲೆಯಂ ಪಾಲಿಸೊಲಿದುನಲಿದು*

*(ನ-ಮಾ. ||೨೧ - ೧೬||)*

ಇಲ್ಲಿ 'ತ್ರ' ಪುನಾರವರ್ತನೆಯಾಗಿದೆ.

*ಪೋರಿದರು ತೂರಿದರು ಶರಗಳ*

*ನೂರಿದರು ಜಾರಿದರು ಪದವಂ*

*ಚೀರಿದರು ಮೀರಿದರುರುಲ್ಗಳನಿಕ್ಕುತಡಗಟ್ಟಿ*

*ಪಾರಿದರು ಕೀರಿದರುರುದೆಯವ*

*ಕಾರಿದರು ಬೀರಿದರು ಮಚ್ಚರಿ*

*ತೋರಿದರು ಸಾರಿದರುಮರಸಗೆ ಶಬರಸಂದೋಹ*

*ನ-ಮಾ. || ೯ - ೬೯ ||*

ಇಲ್ಲಿ 'ರಾ' ಪುನಾರವರ್ತನೆಯಾಗಿದೆ. ಆದಿ ಪ್ರಾಸವಿದೆ.

**ಲಿಂಗ** ನಿಜ**ಲಿಂಗ** ಚಿರ**ಲಿಂಗ** ತೇಜೋ**ಲಿಂಗ**

**ಲಿಂಗ** ಚಿದುಘನ**ಲಿಂಗ ಲಿಂಗ**ಲಿಂಗಾಲಯನಾ

**ಲಿಂಗ** ಸರ್ವಾಂಗೋತ್ತಮಾಂಗ ಸ್ವಯಂಭು ಶಿವಲಿಂಗಕುಲ ಚಕ್ರವರ್ತಿ

**ಲಿಂಗ** ನಿರವಯ**ಲಿಂಗ** ನಿತ್ಯನಿರ್ಗುಣದಿವ್ಯ

**ಲಿಂಗ** ತ್ರಿಬನಾಧಾರ**ಲಿಂಗ** ತ್ರಿಗುಣಾತೀತಾ

**ಲಿಂಗ** ಜ್ಯೋತಿರ್ಮಯ ಮಹಾ**ಲಿಂಗ** ಮತ್ಪ್ರಾಣ**ಲಿಂಗ**

ಜಯ ಜಯ ಜಯ ಜಯ

(ಪ-ಮಾ. ||೮ - ೭೪||)

ಇದರಲ್ಲಿ ಆದಿ ಪ್ರಾಸವಿದೆ. ಲಿಂಗ ಎನ್ನುವ ಪದ ಪುನಾರಾವರ್ತನೆಯಾಗಿದೆ.

ಹೀರದಿಂ ಘನಸಾರ ಹೀರ ಘನಸಾರದಿಂ
ಸಾರ ಶಂಖಿಂ ಹೀರ ಘನಸಾರ ಶಂಖದಿಂ
ಚಾರು ಮೌಕ್ತಿಕ ಹೀರ ಘನಸಾರ ಶಂಖ ಮೌಕ್ತಿಕದಿಂದಲೂ ಕ್ಷೀರವು
ಹೀರ ಘನಸಾರ ಶಂಖ ಸಾಮುಕ್ತ ಕ್ಷೀರದಿಂ
ಸಾರಸಾ ಹೀರ ಘನಸಾರ ಶಂಖ ಸುಮುಕ್ತ
ಕ್ಷೀರ ಸಾರಸದಿಂದ ಶುಭ್ರಾ ನಿಘನನಾದ ನಂದೀಶ ಪಾಹಿಸತತಂ

(ನ-ಮಾ. ೧೩ - ೧)

**ಯಮಕ**

"ಶಬ್ದಾಲಂಕಾರಗಳಲ್ಲಿ ಒಂದು ಪ್ರಕಾರ ಯಮಕ. ಮೂರು ಅಥವಾ ಅದಕ್ಕಿಂತ ಹೆಚ್ಚಿನ ಅಕ್ಷರಗಳುಳ್ಳ ಪದವೋ, ಪದಭಾಗವೋ ಒಂದು ಪದ್ಯದ ಆದಿ ಮಧ್ಯೆ ಅಂತ್ಯ ಈ ಸ್ಥಾನಗಳಲ್ಲಿ ನಿಯತವಾಗಿ ಪುನಃ ಪುನಃ ಬಂದರೆ ಅದಕ್ಕೆ ಯಮಕವೆಂದು ಹೆಸರು."[೬]

ಬಿನ್ನಣದ ಪುಟವಿಳಿದ ಸೊನ್ನೆಯ ತಿರಸ್ಕರಿಪ
ಚೆನ್ನೆಯರ್ ಶೋಭಾಪ್ರಸನ್ನೆಯರ್ ಪೆಣ್ಮುಡಿಯ
ರನ್ನೆಯರ್ ಸದ್ಗುಣೋತ್ಪನ್ನೆಯರ್ ಸೌಖ್ಯಸಂಪನ್ನೆಯರ್ ಪೊಸಹರೆಯದ
ಕನ್ನೆಯರ್ ಪ್ರಿಯರ ಮನದನ್ನೆಯರ್ ಸತ್ಕಲಾ
ಭಿನ್ನೆಯರ್ ಲೋಕಮೋಹನ್ನೆಯರ್ ವಿವಿಧ ವಿ
ತ್ಪನ್ನೆಯರ್ ಸ್ಮರನೃಪನ ಮನ್ನೆಯರ್ ನಸುನಗೆಯ ಚೆನ್ನೆಯಾರ್ ನಡೆತಂದರು

(ನ-ಮಾ. ೪೩ - ೩೧)

ಸರಸಮೃದುವಾಣಿಯರ್ ಸುಕಲಾ ಪ್ರವೀಣೆಯರ್
ಸುರುದೆರಾಪಾಂಗೆಯರ್ ಸತ್ಕುಚೋತ್ತುಂಗೆಯರ್
ಸರಸಿರುಹ ವದನೆಯರ್ ಸಲ್ಲಲಿತ ರದನೆಯರ್ ಸುಳಿಗುರುಳ ಸುಂದರಿಯರು
ಸಿರಿಮುಡಿಯ ಮಾನೆಯರ್ ಸಮದಗಜಯಾನೆಯರ್
ಸುರಮೋಹನಾಂಗಿಯರ್ ಸದ್ಗುಣ ತರಂಗೆಯರ್
ಸರಿ ಸೊಗಸುಗಾರ್ತಿಯರ್ ಸಲಿಲಕ್ರೀಡಾರ್ತಿಯರ್ ಸರಸಿಯಂ ಸರ್ದಾರಾಗ

(ನ-ಮಾ. ೬ - ೨೭)

ಕೋಟಿಪದ್ಮದಿ ಕೋಕಿಲಾದಿತ್ಯರುಂ ಕ್ಷೋಣಿ
ಕೋಟಿ ಸಹ ತರಾಂಗ ಮೂವತ್ತೆರಳ್ಪೆದ್ಮೆ

**ಕೋಟಿಯಿಂ** ಸಂತಾನಕರಂ ಮಹಾಶಂಖದೊಡ ನಾಭೀಲಲೋಹಿತಾಂಗಂ
**ಕೋಟಿಮೂವತ್ತಾಱಿಜಿಂ** ಕರಾಳಂ ಲಕ್ಷ
**ಕೋಟಿಯಿಂ** ಮುಂಡ ಪಿಪ್ಪಲ ನಿಕುಂಭಂ ತಿಳಿಯೆ
**ಕೋಟಿಮೂವತ್ತೆ**ರಳ್ಗಣ ನಾಯಕರ್ ಸಹಂ ಸಿರಿಕಂದನೊ ಲಗಿಪರು

(ನ-ಮಾ. ೫ - ೨೩)

**ಹರಿಯೆ** ಸಂಪನ್ನತಿಕೆ **ಹರಿಯ**ಲೊದಗಿದ ಭೋಗ
**ಹರಿಯೆ** ಕಳೆಯಂ ಕಳಾಪದಿ **ಹರಿಯ** ಘನ ರೋಷ
**ಹರಿಯೆ** ವಿಕ್ರಮದೇಳ್ಗೆ **ಹರಿಯ** ಘನತರ ತೇಜ **ಹರಿಯ** ಪ್ರತಾಪೋನ್ನತಿ
**ಹರಿ**ಸುತನ ಸೌಂದರ್ಯ **ಹರಿಯ** ತನುಜನುದಾರ
**ಹರಿ**ನಂದನನ ಸತ್ಯ **ಹರಿ**ಯೊತ್ಮಜನದರ್ಪ
ವೆರವಲ್ಲದೆಂಬದಿಳೆ ಗುಪ್ತಾನ್ವಯಾಬ್ಧಿ ಚಂದ್ರ ಚಂದ್ರಗುಪ್ತನೃಪನು

(ಪ-ಮಾ. ೫ - ೬೫)

**ಶಿಲೆ** ಮಾತ್ರಮಲ್ಲ ಶಿವಮಯ ತೋರ್ಪ ಕುಜಾ ಮಹಾ
**ಕುಲಮೆಲ್ಲ** ಸುರಸಮೂಹಂ ಚರಿಸುತಿಹಮ್ಲೇಚ್ಛ
**ಬಲಮೆಯ್ದೆ** ರುದ್ರಗಣವಾಯೆಡೆಯಲಿಪ್ಪ ನಾರಿಯರೆಲ್ಲ ಶಾಂತಿ ಸಂಗಾ
**ಜಲಮೆಲ್ಲ** ದಿವ್ಯತೀರ್ಥಂ ಭಾವಿಸಲ್ಕೆಯಾ
**ನೆಲನೆಲ್ಲ** ಕೈವಲ್ಯದಿಕ್ಕೆ ನೆಲೆವನೆಯೆಂದು
**ನೆಲೆಯಾಗಿ** ಪೇಳ್ದೆನಿರವೆಂಬುದಂ ನೀನೆಂದು ಪಾರ್ವತಿಗೆ ಮುಕ್ತಿಂಪೆಂದನು

(ಪ-ಮಾ. ೪ - ೪೫)

**ಮೆಲ್ಲನೆ** ಚುಂಬಿಸುತ್ತೆ ಎಂಗ **ಮೆಲ್ಲನೆ** ತಳ್ಕಿಸುತೊಲ್ದು ಕಂಠದೊಳ್
**ಮೆಲ್ಲನೆ** ನಾದಮಂ ರಚಿಸಿದ **ಮೆಲ್ಲನೆ** ಸುತ್ತಲುಮಿಾಕ್ಷಿಸುತ್ತೆ ಮೇಣ್
**ಮೆಲ್ಲನೆ** ಲಲ್ಲೆಗೆಯ್ದು ನಖದಂತಕೃತಕ್ಷತಮಲ್ಪಮಪ್ಪವೋಲ್
**ಮೆಲ್ಲನೆ** ಮಾಡಿ ಕೂಡಿ ರತಿ ಸೌಖ್ಯಮನಾಂತವಳ್ ವಿನೋದದಿಂ

(ಯಾ.ಮಾ. ತೃ.ಆ. - ೨೦)

**ಕಡಿದು** ಕರಿಗಳ **ಹೊಡೆದು** ಮರಿಗಳ
**ತಡೆದು** ಸೆರೆಗಳ **ಪಿಡಿದು** ಶರಗಳ

*ತೊ ಗಿ ತೂಗುತ ಮಿಡಿಗೆ ನೋಡುತ ಗಿಡಗಳೆಡೆಗೊಂಡು*

*ಪೈಡೆಯ ತೋರದೆ ಪಡೆಯ ಸೇರದೆ*

*ಕಡುಗಿ ರೋಷದೆ ಕಗಲಿ ವೇಷದೆ*

*ನಡೆದು ಮಿಗಗಳ ಕೆಡಹಿ ಖಗಗಳ ಕೊಂದರಟವಿಯಲಿ*

*(ಕಾ-ಮಾ. ೯ - ೭೧)*

ಹೀಗೆ ಮಹಾತ್ಮೆಗಳಲ್ಲಿ ಶಬ್ದಾಲಂಕಾರಗಳನ್ನು ಅಪಾರವಾಗಿ ಕೆಲವು ಮಹಾತ್ಮೆಗಳಲ್ಲಿ ವಿಶೇಷವಾಗಿ ಬಳಸಿದ್ದಾರೆ. ಅದರಲ್ಲೂ ಪರ್ವತ ಮಹಾತ್ಮೆ, ಕಾವೇರಿ ಮಹಾತ್ಮೆ, ಯಾದವಗಿರಿ ಮಹಾತ್ಮೆ, ನಂದಿ ಮಹಾತ್ಮೆಗಳಲ್ಲಿ ಕವಿಗಳು ಅತೀ ಹೆಚ್ಚಿನ ಒಲವು ಶಬ್ದಾಲಂಕಾರದಲ್ಲಿ ತೋರಿಸಿದ್ದಾರೆ. ಹಲವು ಬಗೆಯ ಶಬ್ದಾಲಂಕಾರಗಳು ಈ ಕಾವ್ಯಗಳಲ್ಲಿ ಅಡಿಗಡಿಗೆ ಬಳಕೆಯಾಗಿ ಕಾವ್ಯವನ್ನು ರಂಜನೀಯಗೊಳಿಸಿವೆ.

**ಉಪಮೆ**

ಅರ್ಥಲಂಕಾರಗಳಲ್ಲಿ ಉಪಮೆ ಮುಖ್ಯವಾದುದು. ಉಪಮೇಯಗಳನ್ನು ವರ್ಣಿಸುವಾಗ ಕವಿ ಸ್ಪಷ್ಟತೆಗಾಗಿ ಉಪಮಾನಗಳನ್ನು ಬಳಸಿ ವರ್ಣಿಸಿರುವುದು ಮತ್ತಷ್ಟು ಸೊಬಗು ಬಂದಿದೆ. ಮಹಾತ್ಮೆಗಳಲ್ಲಿ ಉಪಮೆಗಳು ಕೆಲವು ಕಡೆ ಸಂದರ್ಭಕ್ಕಾಗಿ ಬಳಕೆಯಾಗಿರುವುದನ್ನು ನೋಡಬಹುದು.

*ತೈಲ ತೀರಿದ ಸೊಡರು ಉರಿವಂ*

*ತಾಲಿ ಬೊಬ್ಬಿಡುತಾ ಮಹಾಬಲ*

*ಏಳೆ ದುಃಶಕನಂಗಳಾದುವು ಸೂಚಿಸುವ ತೆರದಿ*

*ಮೇಲೆ ಹದ್ದೆರಗಿದವು ಕರಿಗಳು*

*ಘೀಳೆನುತ ಕೂಗಿದವು ಕಿಚ್ಚುರಿ*

*ಗಾಳಿಗಳು ಭೂಕಂಪವಾದವು ಬಗೆಯನ ಸುರೇಂದ್ರ*

*(ಸ. ಖ. ೧ - ೨೨)*

*ಕಾಣದಂಥಗೆ ಕಣ್ಣು ಬಂದಂ*

*ತಾ ನರರೊಳಿದು ಸಫಲವೆನ್ನುತ*

*ತಾನು ಸುಖದೊಳಗಿರ್ದು ಕಾಲಾಂತರದಲಾ ವಿಪ್ರ*

*ವಾನವಾಸಿಗೆ ಬಂದು ವರದಾ*

*ಸ್ನಾನದಲಿ ಮಧುಕೇಶಲಿಂಗನ*

*ಧ್ಯಾನಿಸುತ ಶಿವಪದವ ಪಡೆದ ಸುಧರ್ಮನಂತ್ಯದಲಿ*

*(ಸಾ-ಖ. ೧೬ - ೧೪)*

*ಸೊಂದ ಹುಣ್ಣೆಸೊಳುಪ್ಪನಿಡುವಂ*
*ತಂದವಾದುದು ಮತ್ತೆ ಮತ್ತಿ*
*ನ್ನೆಂದು ಫಲವೇ ನಿನ್ನು ಗತಜನ ಸೇತು ಬಂಧನವು*
*ಕೊಂದು ಪಾಂಡರವನ್ನು ರಣದಲಿ*
*ನಿಂದಿಸುವೆನೊಬ್ಬ ವನ ಪಾಪಕೆ*
*ವೃಂದವಳಿವಂತಾಯ್ತು ದುಷ್ಪುತ್ರನಲಿ ಕುಲಗೇಡು*

*(ಸಾ-ಖ. ೫೭ - ೨೦)*

*ಗಜವ ಬೆರಸುವ ಸಿಂಹನಂದದಿ*
*ಗಜಬಜಿಸಿ ಖಳಬಲವ ಪೊಕ್ಕರು*
*ಭುಜಗವಿಂಡಿಗೆ ಗರುಡನಂದದಿ ರಾಕ್ಷಸರ ಹಿಡಿದು*
*ಭುಜವು ತಲೆ ಕಾಲುಗಳ ಕಡಿವೃತ*
*ತ್ರಿಜಗವನು ಸಂಹರಿಪ ರುದ್ರನ*
*ನಿಜಗುಣರೊಯೆಂಬಂತೆ ಸವರಿದರಖಿಳಖಳಬಲವ*

*(ಸಾ-ಖ. ೪೬ - ೭)*

### ೬.೩ ನಾಣ್ನುಡಿ

ಅಲ್ಲಲ್ಲಿ ಕೆಲವು ನೀತಿ ಮಾತುಗಳು ಸೂತ್ರಪ್ರಾಯದ ನುಡಿಗಳು ಎಲ್ಲಾ ಕಾವ್ಯ ಕೃತಿಗಳಲ್ಲಿ ಕಂಡುಬರುತ್ತವೆ.

*ಅದು ನಿಮಿತ್ಯದಿ ಪುಣ್ಯಕಥೆಗಳ*
*ಬದಲುಬುದ್ಧಿಯ ಬಿಟ್ಟು ಕೇಳ್ವುದು*
*ಮದನಹರನೊಲವಹುದು ನಿಮಗಿನ್ನಿತರ ಭಯವಿಲ್ಲ*
*ವಿದಿಸಿದುದೆ ನಿಮಗಿನಿತು ಭಕ್ತಿಯ*
*ಇದು ನಿಧಾನವು ನಮ್ಮ ಪುಣ್ಯಗ*
*ಳಧಿಕ ಲಾಭಗಳೆನುತ ಹೊಗಳಿದನಜನು ನಂದನರ*

*(ಸ-ಖ. ೭ - ೨೧)*

*ಬಹಳ ಪರಿಚಿತಿಯಿಂದ ಲೋಕದಿ*
*ವಿಧಿತವೇ ವಿಪರೀತವಪ್ಪುದು*
*ಕುಹಕಬುದ್ಧಿಯ ತೆಗೆದರದರೊಳು ದೋಷವನು ಮುನಿಗೆ*

*ವಹಿಸಿದರೆಯದರಿಂದ ಚಿಂತೆಯೆ*
*ಗಹನದಲಿ ಮುಳುಗುವನು ನಮ್ಮಯ*
*ಗೃಹಕೆ ಪೋಗುವ ಬಳಿಕಲೆಂದರು ತಮ್ಮತಮ್ಮೊಳಗೆ*

*(ಸ-೩. ೯ - ೯)*

*ನಗುತ ಕ್ಷೇಮದ ಕೇಳಿ ನಾರದ*
*ದುಗುಡವೇನೈ ಬಹಳ ಕೋಪವು*
*ಬಗೆಯರಿದು ನೋಡಿದರೆ ಕ್ಷಮೆಯೇ ಸಜ್ಜನರ ಮತವು*
*ನಿಗಮ ಧರ್ಮವಿದೀಗ ತಿಳಿದವ*
*ನಗಣಿಸದ ನೀತಿಯನು ನೀನೀ*
*ಸೊಗಸಳಿದ ಕಾರಣವ ಪೇಳೆನೆ ಕಾಲನಿಂತೆಂದ*

*(ಸ-೩. ೧೦ - ೧೭)*

**೬.೪ ಗದ್ಯ**

ಮಹಾತ್ಮೆಗಳ ಕಥನ ಕ್ರಮ ವಿಶಿಷ್ಟವಾದದ್ದು. ವಿನೂತನವಾದುದು. ಸಮಕಾಲೀನರ ಚರಿತ್ರೆ, ಸಮಕಾಲೀನ ಇತಿಹಾಸದ ಘಟನೆಗಳನ್ನು ತಂದು, ತಾವು ರಚಿಸಿರುವ ಮಹಾತ್ಮೆಗಳು ಪಂಡಿತರಿಂದ ಹಿಡಿದು ಪಾಮರರವರೆಗಿನ ಎಲ್ಲಾ ವರ್ಗದ ಜನರು ಓದಿ ಅರಗಿಸಿಕೊಳ್ಳುವತಿರಬೇಕು ಎಂದು ಮಾರ್ಗ ಕಾವ್ಯ ಪರಂಪರೆಯನ್ನು ಕೆಲವರು ದೂರವಿಡುತ್ತಾ, ಶುದ್ಧ ದೇಸಿ ಮಾರ್ಗದಲ್ಲಿ ಸರಳ ಸುಂದರವಾಗಿ ಸ್ಪಷ್ಟವಾಗಿ ಅರ್ಥವಾಗುವಂತೆ ರಚಿಸಿದ್ದಾರೆ. ಕಥಾ ಸಂವಿಧಾನದಲ್ಲಿ ಮಾರ್ಗ ಸಾಹಿತ್ಯದಂತೆ ಒಂದೇ ಮಾದರಿಯಲ್ಲಿ ರಚಿಸದೆ; ಕಥನ ಕಲೆಯಲ್ಲಿ ಹೊಸ ತಂತ್ರಗಾರಿಕೆಯನ್ನು ಮಾಡುತ್ತಾರೆ. ಕಥೆಯನ್ನು ನೇರವಾಗಿ ಹೇಳದೆ ಕಥೆಗಳಲ್ಲಿ ಉಪಕಥೆಗಳು (ವಡ್ಡಾರಾಧನೆಯ ಕಥನ ಕ್ರಮ) ಬರುವಂತೆ ಚಿತ್ರಣ ಮಾಡಲಾಗಿದೆ.

ಸಾಧಾರಣವಾದ ವಿಷಯಗಳನ್ನು ನಿರೂಪಿಸುವುದಕ್ಕೆ ಮಾತ್ರ ಕವಿಗಳು ಕಾವ್ಯಗಳಲ್ಲಿ ಅಲ್ಲಲ್ಲಿ ಗದ್ಯವನ್ನು ಬಳಸಿದ್ದಾರೆ. ಇಲ್ಲಿಯ ಕಥಾ ಶೈಲಿಯು ವಡ್ಡಾರಾಧನೆಯಂತೆ ಇದ್ದು, ಕಥೆಯೊಳಗೆ ಕಥೆಯು ಬರುವುದರ ಮೂಲಕ, ಆ ಕತೆಗಳನ್ನು ತೀರ್ಥಕ್ಷೇತ್ರಗಳ ಮೂಲಕ ತತ್ವನೀತಿ ಹಾಗೂ ಧರ್ಮವನ್ನು ಬೋಧಿಸುವಂತಹ ಕಥನ ಕ್ರಮವು ಬರುತ್ತದೆ. ಇಲ್ಲಿ ಪ್ರಸಿದ್ಧವಾದ ಪುರಾಣಕಾರರನ್ನು ತೀರ್ಥಕ್ಷೇತ್ರಗಳ ನಾಮಾಂಕಿತವಾಗಿ ಬಳಸಿಕೊಳ್ಳಲಾಗಿದೆ. ಇಂತಹ ಕತೆಗಳಲ್ಲಿ ಶಾಂತರಸವೇ ಪ್ರಮುಖವಾಗಿ ಕಂಡುಬರುತ್ತದೆ.

ಆದರೆ ಪಶ್ಚಿಮರಂಗಕ್ಷೇತ್ರ ಮಹಾತ್ಮೆಯಲ್ಲಿ ಗದ್ಯವನ್ನು ಪದ್ಯದ ಸಮಾಪ್ತಿಯಲ್ಲಿ, ಅಂದರೆ ಒಂದು ಸಂಧಿ ಪದ್ಯದ ಪ್ರಕರಣ ಮುಕ್ತಾಯವಾಗುವ ಸಂದರ್ಭದಲ್ಲಿ ಗದ್ಯವನ್ನು ಅತಿ ಹೆಚ್ಚಾಗಿ ಬಳಕೆ ಮಾಡಿರುವುದು ಕಂಡುಬರುತ್ತದೆ. ಹಾಗೆಯೇ ಅತಿ ಹೆಚ್ಚು ಸಂಸ್ಕೃತಮಯವಾಗಿರುವುದನ್ನು ಹೀಗೆ ನೋಡಬಹುದು.

*"ಇದು ವಿನಮದಮರೆವರ ಕಮಲಭವಮುಖಸುರಸಮಿತಿ ಮಕುಟತಘಟಿತ ಮಂಜು*
*ಮಾಣಿಕ್ಯಪ್ರಭಾಪುಂಜ ರಂಜಿತಬಾಲಾತಪವಿತಸತ್ಪಶ್ಚಿಮರಂಗಂಗ ಧಾಮ ಕೋಮಲ*
*ಚರಣಾರುಣ ಸರಸಿಪರಾಗಪಟಲ ಚಂಚಚ್ಚಂಚರೀಕಾಯಮಾನ ರಾಜಾಧಿರಾಜ*
*ರಾಜಪರಮೇಶ್ವರ ಪ್ರೌಢಪ್ರತಾಪ ಬಿರುದೆಂರೆಂಬರಗಂಡ ಯದುವಂಶಪಾಯಃ*
*ಪಾರಾವಾರಪೂರ್ಣ ಸುಧಾಕರ ಶ್ರೀ ವೀರ ಚಿಕ್ಕದೇವ ಮಹಾರಾಜ*
*ಕೃಪಾರಸಾಶ್ರಯ ಸಚಿವಾಗ್ರಣಿ ಚಿಕ್ಕುಪಾಧ್ಯಾಯ ನಿರೂ*
*ಪಣದಿಂ ಕವಿತಿಮ್ಮ ಪ್ರಣೀತಮಾಸ ಕರ್ನಾಟಭಾಷಾಲಸಿತ*
*ಪಶ್ಚಿಮರಂಗ ಮಹಾತ್ಮೆದೊಳ್*
*ಶ್ರೀರಂಗವಿಮಾನ ವರ್ಣನಂ*
*ತೃತೀಯಾಶ್ವಾಸಂ ಸಮಾಪ್ತಂ"* ೮

ಅದೇ ರೀತಿ ತಿಮ್ಮಕವಿಯ ಯಾದವಗಿರಿಯ ಮಹಾತ್ಮೆಯಲ್ಲಿ ಪದ್ಯದಂತೆ ಗದ್ಯವು ಸಂಸ್ಕೃತ ಮಯವಾಗಿದೆ. ಇದಕ್ಕೆ ಉದಾಹರಣೆಯಾಗಿ ಚಿಕ್ಕದೇವರಾಯನನ್ನೇ ವರ್ಣಿಸುವ ಒಂದು ಭಾಗವನ್ನು ನೋಡಬಹುದು.

*"ಶ್ರೀ ಚಿಕ್ಕದೇವರಾಯ ಚಂದ್ರಿಕಾವಿಹಾರಾರ್ಥಂ ಮನಂದಂದು*
*ಪರಿಮಳಮಿಳ ತೋಷ್ಣಜಲಪ್ರಕ್ಷಾಳಿತಕರಚರಣಾನನಾಂಬುಜಂ ಮೃಗದರ*
*ಚಿರತಿಲಕವಿಲಸಿತ ನಿಟಲತಟಂ ಸುರುಚಿರಸುರಭಿಪರಿಲಸಿತಚರನಸರ*
*ಸಿಜಾರ್ಪಿತ ಪ್ರಸಾದಾಸ್ವಾದನಮುದಿತ ಹೃದಯಂ ಸಾರಕಪೂರ್ವರ*
*ಖಂಡಮಂಡಿತರ ಮಣಿಯಹೇಮರೇಖಾಕಲಿಸ ಲಲಿತಾಂಬ*
*ರಾಚಿತಂ ಆಚ್ಛಾದಿತಮಂಜುಳಕೃಷ್ಣ ಕಂಬಳಂ ನಾಗರಿಕಾದಿ*
*ಭೋಗಯೋಗ್ಯಸಬೀಜನಪರಿ ವೃತಂ ಕರಗೃಹೀತಾಮಾಸ್ಯ*
*ಹಸ್ತಪಲ್ಲವಂ ನಿಜಕಟಾಕ್ಷಾವಲೋಕನುರುಚಿ ಸಾಂದ್ರಚಂದ್ರಿಕಾ*
*ದ್ವಿಗುಣೀಕೃತಕೌಮುದೀ ವಿಳಾಸನಾಗಿ ಪೊರಮಟ್ಟು"*

ಇಲ್ಲಿ ಕಾವ್ಯ ಸಂಪ್ರದಾಯದ ಜಾಡಿನಲ್ಲೇ ಸಾಗಿದೆ. ಇವನೊಬ್ಬ ಪಂಡಿತ ಕವಿ. ಶೈಲಿ ಸಂಸ್ಕೃತಮಯವಾಗಿದೆ. ಇದೊಂದು ಸಂಸ್ಕೃತ ಭಾಷಾಂತರ ಕೃತಿಯಾಗಿದೆ. ಇವನ ಭಾಷಾಂತರದಲ್ಲಿ ನಾವು ಸಂಸ್ಕೃತಭೂಯಿಷ್ಠ ಪದಪುಂಜಗಳನ್ನು ಹೆಚ್ಚಾಗಿ ಕಾಣಬಹುದು. ಕೆಲವೆಡೆ ಮೂಲವನ್ನು ಬಹಳ ಸಂಗ್ರಹವಾಗಿ, ಯಥಾವತ್ತಾಗಿ ತಂದಿದ್ದಾನೆ ಎಂದು ಸಂಪಾದಕರಾದ ಎಂ.ಪಿ.ಮಂಜಪ್ಪ ಶೆಟ್ಟಿ ಅವರು ಪ್ರಸ್ತಾವನೆಯಲ್ಲಿ ಹೇಳಿದ್ದಾರೆ. ಅಧಿಕ ವಿವರಣೆ, ಉಪದೇಶ, ಅನಗತ್ಯ ವರ್ಣನೆಗಳು ಬಂದಲ್ಲಿ ಸಂಗ್ರಹಿಸಿದ್ದಾರೆ.

ಅದೇ ರೀತಿ ಚಿಕ್ಕುಪಾಧ್ಯಾಯ ವಿರಚಿತ ಶ್ರೀರಂಗ ಮಹಾತ್ಮ್ಯೆ ಕೃತಿಯು ಗದ್ಯದಲ್ಲಿದೆ. ಇದರ ಹೆಸರೇ ಹೇಳುವಂತೆ ಇದು ಶ್ರೀರಂಗವೆಂದು ಪ್ರಸಿದ್ಧವಾಗಿರುವ 'ಪೂರ್ವರಂಗ'ದ ಕ್ಷೇತ್ರ ಮಹಿಮೆಯನ್ನು ವರ್ಣಿಸುತ್ತದೆ. ಇದು ಆ ಕ್ಷೇತ್ರ ವರ್ಣನೆಗೆ, ಮಹಿಮೆಗೆ ಶ್ರೀ ವೈಷ್ಣವ ಧರ್ಮ ಪ್ರಚಾರಕ್ಕೆ ಮೀಸಲಾಗಿದೆಯೇ ವಿನಃ ಸಾಮಾಜಿಕ ದೃಷ್ಟಿಯಿಂದ ಮಹತ್ವದ್ದಾಗಿಲ್ಲ. ಬ್ರಾಹ್ಮಣ ಕವಿಗಳ ವಾಡಿಕೆಯಂತೆ ಚಿಕ್ಕದೇವರಾಜನ ವಂಶಾವಳಿಯನ್ನು ಪ್ರಾರಂಭದಲ್ಲಿ ಹೇಳಿ ಕಾವ್ಯವನ್ನು ಮುಂದುವರಿಸಿದ್ದಾನೆ.

ತನ್ನ ಆಶ್ರಯದಾತನ ಆದೇಶದಂತೆ ಶ್ರೀರಂಗ ಕ್ಷೇತ್ರದ ಮಹಿಮೆಯನ್ನು 'ಅನುನಯದಿಂದೆಲ್ಲರತೆವವೊಲ್' ಎಂದು ಗದ್ಯದಲ್ಲಿ ರಚಿಸುವುದೇ ಆಗಿದೆ. ಹೀಗಾಗಿ ಇವನು ಸಂಸ್ಕೃತ ಬ್ರಹ್ಮಾಂಡ ಪುರಾಣದಲ್ಲಿ ಹೇಳಿರುವ ಶ್ರೀರಂಗ ಮಹಾತ್ಮ್ಯೆಯನ್ನು ಯಥಾವತ್ತಾಗಿ ಕನ್ನಡಕ್ಕೆ ಭಾಷಾಂತರಿಸಿದ್ದಾನೆ. ಇದು ಸಾಮಾನ್ಯ ಓದುಗರು ಅರ್ಥ ಮಾಡಿಕೊಳ್ಳಲು ಸಹಕಾರಿಯಾಗಿದೆ.

"ಬಳಿಕ ಸರಸೀರುಹಾಸನಂ ಸಮಾರಾಧನವಿಷಯದಲ್ಲಿ ತಿಳಿಯಲು ಯೋಗ್ಯಮಾದರ್ಥಂಗಳಂ ಭಿನ್ನಹವೆಂ ಮಾಡುತ್ತಿದ್ದನು. ಎಲೇ ಅಚ್ಯುತ, ಕೇಳು ನಿನ್ನ ಪೂಜೆಗೆ ಮಂತ್ರಮಾವುದು. ಶ್ರೀ ಪಂಚಾತ್ರದಲ್ಲಿಹಂಥಾ ಸಂಹಿತೆಗಳೊಳಗೆ ನಿನಗಭಿಮತ ಮಾದ ಸಂಹಿತೆ ಯಾವುದು, ನಿನ್ನ ಪೂಜೆ ತಾನಾವುದು, ಪೂಜೆಯಿಂದಲೆ ಮುಕ್ತಿಯಪ್ಪುದೆಂದು ಮೊದಲು ಪೇಳ್ದಿರಿ ಆ ಪೂಜೆಗೆ ಫಲಮಾವುದು. ಈ ಸಕಲಮಂ ನಿರೂಪಿಸಬೇಕೆಂದು ವನಜಾಸನಂಗೆ ಸರ್ವೇಶ್ವರನಿಂತೆಂದಂ ನೂರೆಂಟು ಸಂಹಿತೆಗಳೊಳಗೆ ಶಾಶ್ವತಮೆಂದು ಪೌಷ್ಕರಮೆಂದು ಎರಡು ಸಂಹಿತೆಗಳ ಶ್ರೇಷ್ಠ... ಎಂದು ಕಥೆ ಮುಂದುವರೆಯುತ್ತದೆ.

ಪ್ರತಿಯೊಂದು ಪರಿಚ್ಛೇದದ ಪ್ರಾರಂಭವು ಕಂದ ಪದ್ಯದಿಂದ ಆರಂಭವಾದರೂ ಕವಿ ಈ ಕೃತಿಯಲ್ಲಿ ಪದ್ಯಕ್ಕಿಂತ ಗದ್ಯವನ್ನೇ ಪ್ರಧಾನ ಮಾರ್ಗವನ್ನಾಗಿ ಬಳಸಿಕೊಂಡಿದ್ದಾನೆ.

ಕಥಾ ನಿರೂಪಣೆಗೆ ಗದ್ಯ ಅವಶ್ಯಕವೆಂದು ಕವಿ ಇಲ್ಲಿ ತೋರಿಸಿಕೊಟ್ಟಿದ್ದಾನೆ. ದೀರ್ಘವಾಗಿ ಗದ್ಯ ಬಂದರೂ, ಇಲ್ಲಿನ ಗದ್ಯ ಚೊಕ್ಕವಾಗಿದೆ. ಇವನ ಶೈಲಿಯ ಗುಣವಿಶೇಷದ ಪರಿಮಿತಿಯನ್ನು ಹೊಂದಿದೆ.

ಕನ್ನಡ ಗದ್ಯ ಸಾಹಿತ್ಯ ವಿಫುಲವಾಗಿ ಸಮರ್ಥವಾಗಿ ಬೆಳೆಯುವಂತಹ ಕಾಲದಲ್ಲಿ ಕಳಲೆ ನಂಜರಾಜನ ಗದ್ಯ ಕೃತಿಯಾದ ಕಕುದ್ಗಿರಿ ಮಹಾತ್ಮ್ಯೆ ಅಥವಾ ಶಿವಗಂಗೆ ಮಹಾತ್ಮ್ಯೆಯ ರಚನೆಯಾಗಿದೆ. ಈ ಕೃತಿಯು ಗದ್ಯ ಪ್ರಧಾನವಾಗಿದೆ. ಈ ಕೃತಿಯಲ್ಲಿ ಸುದೀರ್ಘವಾದ ಗದ್ಯವನ್ನು ಚಿತ್ತಾಕರ್ಷಕವಾಗಿ ಕವಿಯು ತಂದಿದ್ದಾನೆ. ಅತಿಶಯೋಕ್ತಿ ಇದ್ದರೂ ಮನೋಹರತೆ ಇದೆ. ಕಥನಕ್ರಮವನ್ನು ಸರಳವಾಗಿ ಚಿತ್ರಿಸಲಾಗಿದೆ. ಹೇರಳವಾದ ಹೋಲಿಕೆಗಳಿಲ್ಲ. ಎಲ್ಲವನ್ನು ಹದವರಿತು ಕೃತಿಯನ್ನು ರಚಿಸಲಾಗಿದೆ. ದೇಸಿ ನುಡಿಗಟ್ಟುಗಳು ಬಂದರು ಇಲ್ಲಿ ಪಾಂಡಿತ್ಯ ಪ್ರದರ್ಶನ ತುಂಬಿಲ್ಲ. ಕಥೆಯ ಬೆಳವಣಿಗೆಯ ದೃಷ್ಟಿ, ವಿವರಗಳ ಸಂಕ್ಷಿಪ್ತತೆ, ಸ್ಪಷ್ಟತೆ, ಸರಳತೆ, ಹೃದ್ಯತೆ ವಿಶೇಷವಾಗಿದೆ. ಅದನ್ನು ಈ ಕೆಳಗಿನಂತೆ ನೋಡಬಹುದು.

ಪೂರ್ವದಲ್ಲಿ ವ್ಯಾಸಮುನಿ ಶಿಷ್ಯನಾದ ಸೂತಪೌರಾಣಿಕೊತ್ತಮನು ನೈಮಿಷಾರನ್ಯವಾಸಿಗಳಾದ ಶೌನಕಾದಿ ಮುನಿವರರುಗಳಿಗಿಳೆಯೊಳುತ್ತಮವಾದ ಶ್ರೀಶೈಲಮಹಿಮೆಯುಂ ವಿಸ್ತರಿಸಿ ನಿರೂಪಿಸಿ ಬಳಿಕಿಂತೆಂದನು ಎಲೈ ವಿಪ್ರ ಶ್ರೇಷ್ಠರುಗಳಿರಾ! ನಿಮಗೆ ಶುಭಕರಮಾದ ಆ ಗಿರಿಯೆ ವಿಭವಮಂ ಪೇಳಿದೆ ಇನ್ನು ಮೇಲೆ ಎನ್ನಾಶ್ರಮಕ್ಕೆ ಪೋಗಿ ನಿತ್ಯಕರ್ಮಭೋಜನಾದಿಗಳಂ ಮಾಡಿ ತಿರುಗಿ ನಿಮ್ಮಾಶ್ರಮಕ್ಕೆ ಬರುವೆನು ಆ ಬಳಿಕ ನೀವೇನು ಕೇಳಿದರು ಪೇಳುವೆನೆಂದು ನುಡಿದು ಸೂತಮುನಿ ತೆರಳಲನಂತರದಲ್ಲಿ ಶೌನಕಾದಿ ಋಷಿಗಳೆಲ್ಲರೂ ತಮ್ಮ ತಮ್ಮ ಆಶ್ರಮಂಗಳಿಗೈದಿ ಶ್ರೀಪ್ರದಲ್ಲಿ ನಿತ್ಯನೈಮಿಸ್ತಕಾದಿ ಕರ್ಮಂಗಳನ್ನಾಚರಿಸಿ ಭೋಜನಾಚಮನಂಗಳಂ ಮಾಡಿ ತಿರುಗಿ ಗಂಗೆಯ ಮಳಲೊತ್ತಿನಲ್ಲಿ ಬಂದಿರುತ್ತಿದ್ದವರಾರೆಂದರೆ ಭಾರಧ್ವಾಜನು ಅತ್ರಿ ಜಬಾಲಿ ಗೌತಮನು ಗಾಲಬ ಭೃಗು ಅಂಗಿರಸ....." ಇತ್ಯಾದಿ.

ಇಲ್ಲಿ ಕವಿಯು ಹೇಗೆ ಕಥೆಯನ್ನು ಹೇಳಲು ಭೂಮಿಕೆಯನ್ನು ಸಿದ್ಧಪಡಿಸಿಕೊಂಡಿರುವನು ಎನ್ನುವುದನ್ನು ಇಲ್ಲಿ ಗಮನಿಸಬಹುದು. ಮೇಲಿನ ಈ ಗದ್ಯಭಾಗದಲ್ಲಿ ಎಲ್ಲವೂ ಸರಳವಾದ ಪದಗಳಿಂದ ಕೂಡಿ ಯಾವುದೇ ಸಂಸ್ಕೃತಭೂಯಿಷ್ಠತೆಯ ಪದಗಳಿಲ್ಲದೇ ಓದುಗರಿಗೆ ಸರಳವಾಗಿ ಸುಲಭವಾಗಿ ಅರ್ಥವಾಗುವಂತಿದೆ. ಅನೇಕ ಕಡೆ ಗಂಗಾಧರೇಶ್ವರನ ಪ್ರಾರ್ಥನೆಗೆ ಸಂಸ್ಕೃತಶ್ಲೋಕಗಳನ್ನು ಬಳಸುತ್ತಾನೆ. ಅದರಲ್ಲಿ ಒಂದೆರಡನ್ನು ಉದಾಹರಣೆಯಾಗಿ ನೋಡಬಹುದು.

*ಕಕುದದ್ರಿ ಕಂದರ ಕರವಸತಿಂ*
*ಕಕುದಂ ವಿಧಾತೃ ಮುಖನಿರ್ಜರಸಮ್ ।*
*ಸುರಸಿಂಧು ಭಾಸುರಜಟಾಪಟಲಂ*
*ನಿಟಲೇಕ್ಷಣಂ ಹೃದಿಭಜೇ ಸತತಮ್ ॥*

***ಶ್ಲೋಕ :***

*ಶ್ರೀ ಮನ್ಮಂದಾರನೀ ಶೈಲಸ್ವಾಮಿನಂ ಚಂದ್ರಶೇಖರಮ್ ।*
*ವಂದೇಗೌರೀ ಕುಜಾಲಿಪ್ತ ಕಾಶ್ಮೀರಾಂಚಿತ ವಕ್ಷಸಮ್ ॥*
*ಜನದೇವ ಜಗನ್ನಾಥ ಗಂಗಾಧರ ಮಹೇಶ್ವರಃ ।*
*ಜಮದಾಗ್ನ್ಯಾರ್ಚಿತಪಾದ ಪರಮಾರ್ಥೈಕ ಸಾಧನ ॥*
*ನಮಃ ಶ್ವೇತಾದ್ರಿವಾಸಾಯ ಮಹಾಗಹ್ವರವಾಸಿನೇ ।*
*ನಮಸ್ತೇ ಧವಳಾಂಗಾಯ ನಮಸ್ತೇ ಭಸ್ಮಧಾರಿಪಿ ॥*
*ನಮಸ್ತೇ ವಿಶ್ವನಾಥಾಯ ನಮೋ ಭಕ್ತವರಪ್ರದ ।*
*ಪಾಹಿಮಾಂ ಕೃಪಯಾ ದೇವ ತ್ವತ್ಪಾದಕಮಲಾ*
*ಶ್ರೀತಮ್ ॥* ಇತ್ಯಾದಿ.

ಪ್ರಾಸಂಗಿಕವಾಗಿ ಕವಿ ಅಲ್ಲಲ್ಲಿ ನೀತಿಗೆ ಸಂಬಂಧಿಸಿದ ಸಂಗತಿಗಳನ್ನು, ಸಾಮಾಜಿಕ ರೀತಿ–ನೀತಿಗಳನ್ನು ನಿರೂಪಿಸುತ್ತಾನೆ. ಮನುಷ್ಯನ ಸ್ವಭಾವವನ್ನು ಕವಿಯ ಮಾತುಗಳಲ್ಲಿಯೇ ನೋಡುವುದಾದರೆ 'ಮಾನವರು ಮಂದಮತಿಗಳು ಮಾಯಾಪಾಶಾಸಂಗತರಾಗಿ ಪುತ್ರದಾರ ಗೃಹಕ್ಷೇತ್ರ ವಿತ್ತ ಬಂಧುಗಳಲ್ಲಿ ಅತ್ಯಂತಾಸಕ್ತರಾಗಿರುವರು, ಅದರೊಳು ಕೆಲವರಲ್ಪಾಯುಷ್ಯರು, ಕೆಲವರು ವ್ಯಾಧಿಪೀಡಿತರು, ಕೆಲವರು ನಿದ್ರಾಲಸ್ಯಾಹತರು, ಕೆಲವರು ಸಂಸಾರೋದ್ಯೋಗ ತತ್ಪರರು, ಮತ್ತೇ ಕೆಲವಂಧಕರು, ಕೆಲವರು ಬಧಿರರು, ಹೆಳವರು ಕೆಲವರು, ಕೆಲವರು ಪಾಪಬುದ್ಧಿಗಳು, ಈ ಮಂದಬುದ್ಧಿಗಳಾದ ದುರಾತ್ಮರಾದ ಗತಿಹೀನರಾದ ಮನುಜರಿಗೇನು ಗತಿ? ಸತ್ಯವಾಗಿ ಪೇಳು. ಅವರೀ ಲೋಕದಲ್ಲಿ ತೃಣಾಗ್ರದಲ್ಲಿರ್ದ ಜಲಬಿಂದುಬಿನಂತೆ ಕ್ಷಣಿಕವಾದ ಅಲ್ಪಸುಖವನು ಸುಖವೆಂದು ಭ್ರಮಿಸಿ ಶ್ವಾನ ಸಂಗಮ ಸುಖವ ಬಯಸುವಂತೆ ವಿಷಯ ವಿಶ್ವಾಸದಿಂದ ಸುಕೃತ ದುಷ್ಕೃತಂಗಳ ಮೆರೆದು ಅಹಂಕಾರಿಗಳಾದ ಜನರಿಗೆ ನರಕ ಸಾಗರ ಕಡೆಯಿಲ್ಲ. ಮನುಷ್ಯನ ಸ್ವಭಾವದ ಯಥಾವತ್ತಾದ ಚಿತ್ರಣವನ್ನು ಕವಿ ಇಲ್ಲಿ ನೀಡಿದ್ದಾನೆ. ಎಲ್ಲಾ ಧರ್ಮಗಳು ಸಾರುವುದು ಇದನ್ನೇ. ಈ ಲೋಕದ ಸುಖ

ಶಾಶ್ವತವಲ್ಲ; ಪರಲೋಕವನ್ನು ಪಡೆಯಲು ಹೇಗೆ ಈ ಲೋಕದಲ್ಲಿ ಬಾಳಬೇಕೋ ಅದರಂತೆ ಇಲ್ಲಿ ಬದುಕುವುದನ್ನು ಕಲಿ ಎಂಬ ಉಪದೇಶವನ್ನು ಸಹ ನೀಡಲಾಗಿದೆ. ಉಪದೇಶ ಬಂದಲ್ಲೆಲ್ಲಾ ನೀತಿ ವೈರಾಗ್ಯದ ತತ್ವಗಳ ಬೋಧನೆಯನ್ನು ಮಾಡಲಾಗಿದೆ.

ಇಲ್ಲಿನ ಭಾಷೆ ತೀರಾ ಹೊಸಗನ್ನಡಕ್ಕೆ ಹತ್ತಿರವಾದದ್ದು. ೧೭ನೆಯ ಶತಮಾನದ ಮಧ್ಯಭಾಗದಿಂದ ಮಹಾತ್ಮೆಗಳು ಹುಟ್ಟಿಕೊಂಡಿರಬಹುದಾದ ಕಾರಣದಿಂದ ಇದು ಸಹಜ. ಮಹಾತ್ಮೆಗಳು ಪುರಾಣಗಳಿಂದ ಕಥೆಗಳನ್ನು ತೆಗೆದುಕೊಂಡು ಹೇಳಿದೆ. ಮಹಾತ್ಮೆಗಳು ಜನಸಾಮಾನ್ಯರನ್ನು ಉದ್ದೇಶಿಸಿ ಬರೆದವುಗಳಾದ್ದರಿಂದ ಅವು ಬಹು ಸುಲಭವಾದ ಭಾಷೆಯಲ್ಲಿವೆ. ಧಾರ್ಮಿಕ ಕೃತಿಗಳು ಇವಾಗಿರುವುದರಿಂದ ಸಂಸ್ಕೃತ ಪದಗಳ ಬಳಕೆ ಅನಿವಾರ್ಯವಾಗಿದ್ದು; ಜನಸಾಮಾನ್ಯರಿಗೆ ಅರ್ಥವಾಗುವಂತಹ ಸಂಸ್ಕೃತ ಪದಗಳ ಆಗಿವೆ. ಉಪಮೆಗಳು ಅಲ್ಲಲ್ಲಿ ಕಂಡುಬರುತ್ತವೆ. ಇತರೆ ಅಲಂಕಾರಗಳು ಬಹಳ ಕಡಿಮೆ. ಕಥಾಂಶ ಹೆಚ್ಚಾಗಿರುತ್ತದೆ.

ಒಟ್ಟಾರೆಯಾಗಿ ಮಹಾತ್ಮೆಗಳ ಸಂವಿಧಾನ ನೋಂಪಿ ಕಥೆಗಳ ಸಂವಿಧಾನದಂತೆಯೇ ಇದೆ. ಕ್ರಮದಲ್ಲಿ ಒಂದು ಶ್ಲೋಕ ಅಥವಾ ಪದ್ಯ ಇರುತ್ತದೆ. ಕಥೆಯ ಮಧ್ಯದಲ್ಲಿ ಶ್ಲೋಕ ಅಥವಾ ಪದ್ಯ ಕೆಲವು (ಗದ್ಯ) ಮಹಾತ್ಮೆಗಳಲ್ಲಿ ಕಂಡುಬರುತ್ತದೆ. ಇದು ಕಂಡು ಬರಲೇಬೇಕೆಂಬ ನಿಯಮವೇನೂ ಇಲ್ಲ. ಅಂತ್ಯದಲ್ಲಿ ಒಂದು ಪದ್ಯ ಮತ್ತು ಫಲಶ್ರುತಿ ಇರುತ್ತದೆ. ಆ ಕತೆಯನ್ನು ಹಿಂದೆ ಯಾರು ಯಾರಿಗೆ ಹೇಳಿದರು ಮತ್ತು ಆ ಮಹಾತ್ಮೆಯನ್ನು ಓದಿದ್ದರಿಂದ ಅಥವಾ ಕೇಳಿದ್ದರಿಂದ ಬಂದ ಲಾಭವೇನು ಅಥವಾ ಓದಿಸದೇ ಇದ್ದುದರಿಂದ ಇಲ್ಲವೇ ಕೇಳದೆ ಇದ್ದುದರಿಂದ ಆದ ನಷ್ಟವೇನೂ ಇತ್ಯಾದಿಗಳು ಫಲಶ್ರುತಿಯಲ್ಲಿ ಇರುತ್ತವೆ. ಈ ಫಲಶ್ರುತಿಗಳು, ಪೂಜೆಗೆ ಸಂಬಂಧಿಸಿದ ವಿಚಾರಗಳು, ವ್ರತಗಳು ಪದೇ ಪದೇ ಪುನರಾವರ್ತನೆ ಆಗುವುದನ್ನು ನೋಡಬಹುದು. ಒಟ್ಟಿನಲ್ಲಿ ಈ ಮಹಾತ್ಮೆಗಳು ಕನ್ನಡ ಗದ್ಯ ಸಾಹಿತ್ಯಕ್ಕೆ ತಮ್ಮ ಕೊಡುಗೆಯನ್ನು ಸಾಕಷ್ಟು ಸಲ್ಲಿಸಿವೆ ಎಂದರೆ ಉತ್ಪ್ರೇಕ್ಷೆಯಾಗಲಾರದು.

**ಅಡಿ ಟಿಪ್ಪಣಿಗಳು**

೧. ಹಿರೇಮಠ (ಸಂ), **ಪದ್ಮರಾಜ ಪುರಾಣ,** ಪು.ಸಂ-೮೯, ೯೦

೨. ಮಂಜಪ್ಪ ಶೆಟ್ಟಿ ಎಂ.ಪಿ(ಸಂ)., **ಕವಿರಂಗನ ಕಾವೇರಿ ಮಹಾತ್ಮೆ,** ಪು.ಸಂ-ixv

೩. ಉಮಾಪತಿ ಎಸ್.(ಸಂ)., **ಪರ್ವತ ಮಹಾತ್ಮೆ,** ಪು.ಸಂ–xix

೪. ಪುಟ್ಟಪ್ಪ ಕೆ.ವಿ.(ಸಂ)., **ಕನ್ನಡ ಕೈಪಿಡಿ ಸಂ–೧,** ಪು.ಸಂ–೧೬೯

೫. **ಅದೇ ಪುಸ್ತಕ,** ಪು.ಸಂ–೨೬೯

೬. **ಅದೇ ಪುಸ್ತಕ,** ಪು.ಸಂ–೨೬೯

೭. **ಅದೇ ಪುಸ್ತಕ,** ಪು.ಸಂ–೨೭೦

೮. ಮಂಜಪ್ಪ ಶೆಟ್ಟಿ ಎಂ.ಪಿ(ಸಂ)., **ಪಶ್ಚಿಮರಂಗ ಮಹಾತ್ಮೆ,** ಪು.ಸಂ–೩೧

## ಅಧ್ಯಾಯ : ಏಳು

# ಸಮಾರೋಪ

ವ್ಯಕ್ತಿ, ವಸ್ತು ಅಥವಾ ಒಂದು ಸ್ಥಳದ ಮಹಿಮೆಯನ್ನು ವರ್ಣಿಸುವುದೇ ಮಹಾತ್ಮೆಯಾಗಿದೆ. ಇಂತಹ ಮಹಾತ್ಮೆಗಳು ಸಂಸ್ಕೃತ ಮತ್ತು ಭಾರತದ ಇತರೆ ಭಾಷೆಗಳಲ್ಲಿ ಇರುವಂತೆಯೇ ಕನ್ನಡದಲ್ಲಿಯೂ ವಿಪುಲವಾಗಿ ರಚನೆಯಾಗಿವೆ. ಹಿಂದಿನ ಕಾಲದಲ್ಲಿ ಮಹಾತ್ಮೆಗಳಿಗೆ ಹೆಚ್ಚಿನ ಪ್ರಾಶಸ್ತ್ಯವಿದ್ದಿರಬೇಕು. ಅಲ್ಲದೆ ಇವುಗಳ ರಚನಾಕಾರರಿಗೆ ಹೆಚ್ಚಿನ ಮನ್ನಣೆ ಮತ್ತು ಪ್ರೋತ್ಸಾಹವಿದ್ದಿರಬೇಕು. ಆದ್ದರಿಂದಲೇ ಮಹಾತ್ಮೆಗಳನ್ನು ಮಧ್ಯಕಾಲೀನ ಸಂದರ್ಭದಲ್ಲಿ ಹೆಚ್ಚಾಗಿ ನೋಡಬಹುದು. ಇದಕ್ಕೆ ಪ್ರೇರಕವಾದ ಮೂಲ ಸಾಹಿತ್ಯವೇ ಸಂಸ್ಕೃತ. ಸಂಸ್ಕೃತದಿಂದ ನೇರವಾಗಿ ಕೆಲವು ಮಹಾತ್ಮೆಗಳು ಭಾಷಾಂತರವಾದರೆ ಕೆಲವು ರೂಪಾಂತರಗಳಾಗಿ ಮೂಡಿಬಂದಿವೆ.

ಅನೇಕ ಮಹಾತ್ಮೆಗಳಿಗೆ ಸಂಸ್ಕೃತದ ಬ್ರಹ್ಮಾಂಡ ಪುರಾಣ ಮತ್ತು ಸ್ಕಂದ ಪುರಾಣವೇ ಪ್ರಮುಖ ಆಕರಗಳಾಗಿವೆ. ಇಲ್ಲಿ ಪಾಪ, ಪುಣ್ಯ, ಪವಾಡ ಮತ್ತು ಮುಕ್ತಿಯನ್ನು ಉಂಟು ಮಾಡುವ ಸ್ಥಳಗಳನ್ನು ವರ್ಣಿಸುವುದು. ಹಾಗೆಯೇ ಆ ಸ್ಥಳದ ಮೂಲ ಹುಟ್ಟು, ಬೆಳವಣಿಗೆಯನ್ನು ಪುರಾಣದ ಹಿನ್ನೆಲೆಯೊಂದಿಗೆ ಸಮೀಕರಿಸುತ್ತಾ ಅದರಲ್ಲಿ ಐತಿಹ್ಯ ಮತ್ತು ಚರಿತ್ರೆಯನ್ನು ಅಗತ್ಯಕ್ಕೆ ತಕ್ಕಂತೆ ಚಿತ್ರಿಸುತ್ತಾ ಆ ಸ್ಥಳಗಳನ್ನು ಕೀರ್ತಿಸುವುದು. ಈ ಮಹಾತ್ಮೆಗಳ ಮುಖ್ಯ ಉದ್ದೇಶವಾಗಿದೆ. ಹೀಗಾಗಿ ಇದರಲ್ಲಿ ನಾಯಕ–ನಾಯಕಿ ಪ್ರತಿನಾಯಕರಿಲ್ಲ. ಇಲ್ಲಿ ಹಲವಾರು ಕಥೆಗಳು, ಪಾತ್ರಗಳು ಬರುತ್ತವೆ. ಆದರೆ ಅವೆಲ್ಲವೂ ಕ್ಷೇತ್ರದ ವರ್ಣನೆಗಾಗಿಯೇ ಮೀಸಲಾಗಿವೆ.

ಎಲ್ಲಾ ಮಹಾತ್ಮೆಗಳ 'ಕಥಾವಸ್ತು' ಸಾಂಪ್ರದಾಯಿಕವಾಗಿಯೇ ಸಾಗುತ್ತದೆ. ಪೀಠಿಕಾಧ್ಯಾಯದಲ್ಲಿ ತಮ್ಮ ಇಷ್ಟ ದೇವತೆಗಳಾದ ಗಣಪತಿ, ಅಗಸ್ತ್ಯ, ಸರಸ್ವತಿ ಇನ್ನು ಮುಂತಾದ ದೇವರುಗಳನ್ನು ಪ್ರಾರ್ಥನೆ ಮಾಡಿ ಸ್ತುತಿಸಿದ್ದಾರೆ. ಅನಂತರ ತಮಗೆ ಇಷ್ಟವಾದ ಪೂರ್ವಕವಿಗಳನ್ನು ಸ್ಮರಿಸಿ, ತಮ್ಮ ಕಾವ್ಯೋದ್ದೇಶಗಳನ್ನು ಹೇಳುತ್ತ ಕಾವ್ಯವು

ಮುಂದುವರೆಯುತ್ತವೆ. ಕಾವ್ಯಗಳಲ್ಲಿ ಹಿಂದಿನ ಕವಿಗಳ ಕಾವ್ಯಗಳಲ್ಲಿ ಇರುವಂತೆಯೇ ಸಮುದ್ರ, ಮೇರುಪರ್ವತ, ಪುರ, ಸೂಳೆಗೇರಿ ಮುಂತಾದ ವರ್ಣನೆಗಳನ್ನು ಇಲ್ಲಿಯೂ ಕಾಣಲು ಸಾಧ್ಯ. ಕೆಲವು ಸಲ ಮೂಲಕಥೆಗೆ ಹೊರತಾದ ವರ್ಣನೆಗಳನ್ನು ಕವಿಗಳು ಇಲ್ಲಿ ತಂದಿದ್ದಾರೆ.

ಕನ್ನಡದಲ್ಲಿ ರಚನೆಯಾಗಿರುವ ಮಹಾತ್ಮೆಗಳು ಸಂಸ್ಕೃತ ಸಾಹಿತ್ಯದ ಪ್ರೇರಣೆ-ಪ್ರಭಾವಗಳನ್ನು ಪಡೆದಿದ್ದರೂ ಆಯಾ ಕವಿಗಳ ಪ್ರತಿಭಾ ಸಂಪನ್ನತೆಯಿಂದ ಮತ್ತು ಸೃಜನಶೀಲ ಮನಸ್ಸಿನಿಂದ ಈ ಮಹಾತ್ಮೆಗಳು ಸ್ವತಂತ್ರ್ಯ ಕೃತಿಗಳಾಗಿ ಮೂಡಿಬಂದಿವೆ ಎನ್ನುವುದು ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವಾಗಿದೆ. ಇಲ್ಲಿ ಉದಾಹರಣೆಗೆ ಮುಖ್ಯವಾಗಿ ಕವಿರಂಗ, ಚೆನ್ನವಿರಾಂಕ, ಭಾಸ್ಕರ ಕವಿ, ಚಿಕ್ಕುಪಾಧ್ಯಾಯ, ತಿಮ್ಮಕವಿ ಇನ್ನೂ ಮುಂತಾದವರ ಕೃತಿಗಳು ಇದಕ್ಕೆ ನಿದರ್ಶನಗಳಾಗಿ ಕಂಡುಬರುತ್ತವೆ.

ಸಾಹಿತ್ಯ ಕೃತಿಯೊಂದು ಹುಟ್ಟುವಾಗ ಅದು ಕವಿಯ ಆಶಯಗಳಿಗೆ, ಭಾವನೆಗಳಿಗೆ ಅನುಗುಣವಾಗಿ ರಚನೆಯಾಗಿರುತ್ತವೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಅಂದಿನ ಸಮಕಾಲೀನ ಪರಿಸರದ ಜೊತೆಗೆ ಸಮಕಾಲೀನ ಒತ್ತಡಗಳು ಕೃತಿಯ ಮೇಲೆ ಪ್ರಭಾವ ಬೀರಿರುವುದರ ಪರಿಣಾಮವಾಗಿ ಸಾಹಿತ್ಯ ಕೃತಿಗಳು ರೂಪುಗೊಳ್ಳುತ್ತವೆ. ಕನ್ನಡ ಸಾಹಿತ್ಯದಲ್ಲಿ ರಚನೆಯಾಗಿರುವ ಕೃತಿಯೊಂದು ಸಾಮಾನ್ಯವಾಗಿ ಸಮಕಾಲೀನ ಪರಿಸರ, ವ್ಯಕ್ತಿ, ವಸ್ತು, ಭಾಷೆ ಮುಂತಾದವುಗಳನ್ನು ಪ್ರಾಚೀನ ಪುರಾಣ ವ್ಯಕ್ತಿ, ಸಮಾಜ, ಭಾಷೆಯೊಂದಿಗೆ ಸಮೀಕರಿಸುವ ಸಮಕಾಲೀನಗೊಳಿಸುವ ಪ್ರಕ್ರಿಯೆಯನ್ನು ನಾವು ವಿಶೇಷವಾಗಿ ಗುರ್ತಿಸಬಹುದಾಗಿದೆ. ಇದಕ್ಕೆ ಮಧ್ಯಕಾಲೀನ ಸಂದರ್ಭದಲ್ಲಿ ರಚನೆಯಾದ ಮಹಾತ್ಮೆಗಳೂ ಸಹ ಹೊರತಾಗಿಲ್ಲ. ಇಂತಹ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕವಾದ ಬಾಹ್ಯ ಪ್ರಭಾವಗಳು ಕಾವ್ಯವನ್ನು ನಿಯಂತ್ರಿಸುವಷ್ಟು ಸಮರ್ಥವಾಗಿರುತ್ತವೆ ಎಂಬುದು ಪ್ರಮುಖವಾದ ಸಂಗತಿ. ಕನ್ನಡದಲ್ಲಿ ರಚನೆಯಾಗಿರುವ ಮಹಾತ್ಮೆಗಳ ಸಾಹಿತ್ಯವಂತೂ ಇಂತಹ ಪ್ರಭಾವಗಳಿಗೆ ತನ್ನನ್ನು ಅನುಸರಿಸಿಕೊಂಡೇ ಬೆಳೆದುಬಂದಿರುವುದನ್ನು ಕಾವ್ಯವನ್ನು ಗಮನಿಸಿದಾಗ ಕಂಡುಬರುತ್ತದೆ.

ಸಮಾಜದಲ್ಲಿ ವ್ಯಕ್ತಿಯೊಬ್ಬ ತನ್ನ ಜೀವನವನ್ನು ಸಾಗಿಸುವಾಗ ಒಂದು ಧಾರ್ಮಿಕ ಪರಿಸರಕ್ಕೆ ತನ್ನನ್ನು ಒಪ್ಪಿಸಿಕೊಂಡು ಬದುಕುತ್ತಿರುತ್ತಾನೆ. ಅಂಥಹ ಪರಿಸರಕ್ಕೆ ವ್ಯತಿರಿಕ್ತವಾದ ಧೋರಣೆಯುಳ್ಳ ಕೃತಿ ರಚಿಸುವುದು ಸಾಧ್ಯವಾಗುವುದಿಲ್ಲ. ಕನ್ನಡ ಸಾಹಿತ್ಯದಲ್ಲಿ ೨೦ನೇ ಶತಮಾನವನ್ನು ಹೊರತಾಗಿ ಈ ಮಾತನ್ನು ಇಲ್ಲಿ ಬಳಸಲಾಗಿದೆ. ಒಂದು ವೇಳೆ ತನ್ನ

ಸಮಕಾಲೀನ ಧಾರ್ಮಿಕ ಪರಿಸರಕ್ಕೆ ಸ್ಪಂದಿಸದೆ ಕೃತಿ ರಚನೆಯು ಕರ್ತೃವಿಗೆ ಸಾಧ್ಯವಾಗಿದ್ದರೆ, ಇಂದು ನಾವು ಜೈನ, ವೀರಶೈವ, ವೈದ್ಧಿಕ ಮುಂತಾದ ಧರ್ಮಗಳಿಂದ ಸಾಹಿತ್ಯವನ್ನು ವಿಭಾಗಿಸಿ ನೋಡುತ್ತಿರಲಿಲ್ಲವೇನೋ; ಹಾಗೆ ಆಗಿದ್ದರೆ ಅಂತಹದ್ದೊಂದು ಶುದ್ಧ ಸಾಹಿತ್ಯಿಕ ರೂಪಗಳಾಗಿ ಕಾಣುತ್ತಿದ್ದವು.

ಯಾವುದೇ ಧರ್ಮದ ಕವಿ ತಾನು ಹುಟ್ಟಿ ಬೆಳೆದ ವಾತಾವರಣವನ್ನು ಒಪ್ಪಿಕೊಂಡು, ಆ ಧರ್ಮಕ್ಕೆ ಸಂಬಂಧಿಸಿದ ತನ್ನ ಸುತ್ತಮುತ್ತಲಿನ ಸ್ಥಳ ಕ್ಷೇತ್ರಗಳನ್ನು ಅಥವಾ ವಸ್ತುವನ್ನೇ ಕೃತಿಯ ವಸ್ತುವನ್ನಾಗಿ ಕೃತಿ ರಚನೆ ಮಾಡಿದ್ದಾರೆ. ಈ ರೀತಿಯಾದಂತಹ ಧಾರ್ಮಿಕ ಹಿತಾಸಕ್ತಿಯನ್ನು ಅಂದಿನ ಜನ ಕವಿಯಿಂದ ತಮ್ಮ ಧರ್ಮಪರವಾದ ಕೃತಿ ರಚನೆಯನ್ನೇ ಬಯಸಿರಬೇಕು ಎಂದೆನಿಸುತ್ತದೆ. ಅಲ್ಲದೆ ತಮ್ಮ ಮತಧರ್ಮ ಪರವಾದ ಕೃತಿಯನ್ನು ಬರೆಯುವುದು ಆ ಕವಿಯ ಜವಾಬ್ದಾರಿ ಎಂದು ಜನ ಭಾವಿಸಿದಂತೆ ಕಂಡುಬರುತ್ತದೆ. ಇಲ್ಲಿ ಕವಿಯ ಜವಾಬ್ದಾರಿ ಹೆಚ್ಚಾಗಿರುತ್ತದೆ. ಏಕೆಂದರೆ ಮತಧರ್ಮದ ಆಸ್ಥೆಯೇ ಕವಿಗೆ ಹೆಚ್ಚಾಗಿ ಅದರ ಪ್ರಸಾರ ಪ್ರಚಾರವೇ ಇಲ್ಲಿ ಮುಖ್ಯವಾಗಿ ಬಿಟ್ಟಿದೆ. ಇಂತಹ ಕೃತಿಯು ಸಾಹಿತ್ಯ ಕೃತಿಯಾಗುವುದರ ಬದಲು 'ಧಾರ್ಮಿಕ ಗ್ರಂಥ'ಗಳಾಗಿ ಮಹಾತ್ಮ್ಯೆಗಳ ರೂಪದಲ್ಲಿ ಮೂಡಿಬಂದಿವೆ. ಆದ್ದರಿಂದ ಸಾಹಿತ್ಯಿಕ ಮೌಲ್ಯವು ಕುಂಟಿತವಾಗಿ, ಧರ್ಮವು ಮೇಲುಗೈ ಸಾಧಿಸಿರುವುದನ್ನು ನೋಡಲಾಗಿದೆ.

ವೇದಗಳ ಕಾಲದಿಂದ ಆಧುನಿಕ ಕಾಲದ ಆರಂಭಕ್ಕೂ ಪೂರ್ವದಲ್ಲಿ ರಚನೆಯಾಗಿರುವ ಸಾಹಿತ್ಯ ಕೃತಿಗಳಲ್ಲಿ ಧರ್ಮವೇ ಮೇಲುಗೈ ಸಾಧಿಸಿರುವುದನ್ನು ಗುರ್ತಿಸಲು ಸಾಧ್ಯ. ವೇದಗಳ ಪ್ರಾಮಾಣ್ಯವನ್ನು ತಿರಸ್ಕರಿಸಿ ಬೌದ್ಧ ಮತ್ತು ಜೈನ ಧರ್ಮಗಳು ತಮ್ಮ 'ಧರ್ಮದ' ವಿಚಾರಗಳನ್ನು ಪ್ರತಿಷ್ಠಾಪಿಸಲು ಪ್ರಯತ್ನಿಸಿದನ್ನು ಕಾಣಬಹುದು. ಅದು ಕವಿಗಳ ವೈಯಕ್ತಿಕ ಕಾಳಜಿಗಳಿಂದಲೋ, ರಾಜರುಗಳ ಆಜ್ಞೆಗಳಿಂದಲೋ ಮತಧರ್ಮಗಳು ಮತ್ತು ಸಾಹಿತ್ಯದ ಮಧ್ಯೆ ಸಾಮರಸ್ಯ ಮೂಡಿಬಂದಿರುವುದನ್ನು ಪ್ರಾಚೀನ ಕಾಲದಿಂದಲೂ ನೋಡಬಹುದು. ಅದರಲ್ಲೂ ಮಧ್ಯಕಾಲೀನ ಸಂದರ್ಭದಲ್ಲಿ ಶೈವ ಮತ್ತು ವೈದ್ಧಿಕ ಧರ್ಮಗಳು ಪ್ರಧಾನ ಧರ್ಮಗಳಾಗಿ ಬೆಳೆದ ನಂತರದಲ್ಲಿ ಆ ಧರ್ಮಕ್ಕನುಗುಣವಾಗಿ ಸಾಹಿತ್ಯ ಕೃತಿಗಳು ಹೆಚ್ಚಾಗಿ ರಚನೆಯಾದವು. ಮೈಸೂರು ಅರಸರ ಕಾಲದಲ್ಲಿ ವೈದ್ಧಿಕರದ್ದೆ ಮೇಲುಗೈಯಾಗಿ ರಂಗನಾಥ ಸಂಪ್ರದಾಯದ ಧಾರ್ಮಿಕ ಸಾಹಿತ್ಯವು ಸೃಷ್ಟಿಯಾಯಿತು. ಅಲ್ಲದೆ ಈ ಮತಧರ್ಮಗಳ ನಡುವಿನ ಪೈಪೋಟಿಯನ್ನು ಮಹಾತ್ಮೆ ಕಾವ್ಯಗಳಲ್ಲಿ ಅಲ್ಲಲ್ಲಿ ಕಂಡುಕೊಳ್ಳಲಾಗಿದೆ.

ಅದೇ ರೀತಿಯಾಗಿ ಧಾರ್ಮಿಕ ವಿಚಾರಗಳನ್ನು ಸಾಹಿತ್ಯ ಕೃತಿಗಳ ಮುಖಾಂತರ ವ್ಯಕ್ತಪಡಿಸಲು ಬಯಸಿದ ಕವಿಗಳು ತಮ್ಮ ವೈಯಕ್ತಿಕ ಹಿತಾಸಕ್ತಿಯಿಂದ ಹಾಗೂ ಅರಸರ ಪ್ರೋತ್ಸಾಹದಿಂದ ಕೇವಲ ಧರ್ಮಗ್ರಂಥಗಳಾಗಬಹುದಾಗಿದ್ದ ಧಾರ್ಮಿಕ ವಸ್ತುವನ್ನು ಸಾಹಿತ್ಯದ ವಸ್ತುಗಳನ್ನಾಗಿ ಮಾಡಿಕೊಂಡು ಕೃತಿಗಳನ್ನು ರಚಿಸಿದರು. ಇದಕ್ಕೆ ಮುಖ್ಯ ಕಾರಣವೆಂದರೆ ಕವಿಯ ಉದ್ದೇಶ ಕೇವಲ ಧಾರ್ಮಿಕತೆಯನ್ನು ಸಾರುವುದಷ್ಟೇ ಅಲ್ಲದೇ ತಾನೊಬ್ಬ ಪ್ರಮುಖ ಕವಿ, ಪಂಡಿತ ಕವಿ ಎಂಬ ಮನ್ನಣೆಯು ಸಿಗಬೇಕು ಎನ್ನುವ ದೃಷ್ಟಿಯಿಂದ ಸಂಸ್ಕೃತಯುಕ್ತ ಭಾಷೆಯನ್ನು ಬಳಸುವುದರ ಜೊತೆಗೆ ಆಕರ್ಷಕವಾದ ವರ್ಣನೆಗಳನ್ನು ಕಾವ್ಯದಲ್ಲಿ ಬಳಸಿ ಯಶಸ್ವಿಯಾಗದ ಕವಿಗಳು ಸಿಗುತ್ತಾರೆ. ಆದರೂ ಸಾಹಿತ್ಯ ಕ್ಷೇತ್ರದಲ್ಲಿ ವಿಶೇಷವಾಗಿ 'ಮಹಾತ್ಮೆ'ಗಳನ್ನು ಕುರಿತ ಸಾಹಿತ್ಯಮಾರ್ಗ'ವೊಂದನ್ನು ಈ ಮೂಲಕ ಸೃಷ್ಟಿಸುವಲ್ಲಿ ಯಶಸ್ವಿಯಾಗಿದ್ದಾರೆ.

ಮಹಾತ್ಮೆಗಳಲ್ಲಿ ಕವಿಗಳು ಬಳಸಿರುವ ಧಾರ್ಮಿಕವಾದ ದೃಷ್ಟಿಕೋನವು, ಸಾಹಿತ್ಯ ಸಂಬಂಧಿಯಾಗಿ ಜೈನ ಸಂಪ್ರದಾಯ ಕವಿಗಳ ಸಾಹಿತ್ಯವನ್ನೇ ಅನುಕರಿಸಲಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯ ಸಂದರ್ಭವನ್ನು ಗಮನಿಸಿದಾಗಲೂ ಸಹ ಧಾರ್ಮಿಕ ಅಂಶಗಳನ್ನು ಢಾಳಾಗಿ ಮಹಾತ್ಮೆಗಳಲ್ಲಿ ಬಳಸಿರುವುದನ್ನು ಕಾಣಲಾಗಿದೆ. ಆರಂಭದಲ್ಲಿ ಜೈನ ಕವಿಗಳು ನಿರ್ಮಿಸಿದ ರೂಪದಲ್ಲಿಯೇ ಕಾವ್ಯವನ್ನು ಮಹಾತ್ಮೆಗಳ ರಚನೆಯ ಸಂದರ್ಭದಲ್ಲಿ ಬಳಸಿಕೊಂಡಿರುವುದನ್ನು ಗಮನಿಸಲಾಗಿದೆ. ಅವರಂತೆ ಸ್ತುತಿಗೀತೆ, ವಂಶಾವಳಿ, ಪೂರ್ವಜರು-ಗುರು ಹಿರಿಯರ ಸ್ಮರಣೆ ಹೇಳುವುದರ ಮೂಲಕ ಕೃತಿಗೆ ಪ್ರೇರಣೆಯಾದ ರಾಜರನ್ನು ಪ್ರತಿ ಅಧ್ಯಾಯದ ಸಮಾಪ್ತಿಯಲ್ಲಿ ಸ್ಮರಿಸಲಾಗಿದೆ. ಜೈನ ಕವಿಗಳ ಹಾದಿಯಲ್ಲೇ ನಡೆದ ಕಾವ್ಯಗಳಲ್ಲಿ ವಸ್ತುವಿಷಯ ಒಂದೇ ಆದರೂ ಮಹಾತ್ಮೆಗಳಲ್ಲಿ ಕವಿಯು ಪ್ರಜ್ಞಾಪೂರ್ವಕವಾಗಿ ಧಾರ್ಮಿಕ ಅಂಶಗಳನ್ನು ಕಾವ್ಯಗಳಲ್ಲಿ ತಂದಿದ್ದಾರೆ. ಇದರಿಂದ ಸಾಹಿತ್ಯಕ ಅಂಶವು ಗೌಣವಾಗಿ ಓದುಗರಲ್ಲಿ ಬೇಸರವನ್ನುಂಟು ಮಾಡುತ್ತದೆ. ಆದರೂ ಕಾವ್ಯ ಮತ್ತು ಧರ್ಮವನ್ನು ಮೂಡಿಸುವಲ್ಲಿ ಜೈನ ಕವಿಗಳಂತೆ ಸ್ಪಷ್ಟವಾಗಿ ಮಹಾತ್ಮೆ ರಚನೆಕಾರರು ಆ ಮಟ್ಟಕ್ಕೆ ಯಶಸ್ವಿಯಾಗಲಿಲ್ಲ ಎಂಬುದನ್ನು ಇಲ್ಲಿ ಗುರ್ತಿಸಲಾಗಿದೆ.

ಧರ್ಮ-ಧರ್ಮಗಳ ನಡುವೆ ನಿರಂತರ ಪ್ರತಿಸ್ಪರ್ಧೆ ಏರ್ಪಡುತ್ತಿದ್ದುದನ್ನು ಚರಿತ್ರೆಯುದ್ಧಕ್ಕೂ ಕಾಣುತ್ತೇವೆ. ತಮ್ಮ ತಮ್ಮ ಧರ್ಮಗಳ ಹೆಚ್ಚುಗಾರಿಕೆಯನ್ನು ಪ್ರತಿಪಾದಿಸುವುದರ ಜೊತೆಯಲ್ಲಿಯೇ ಇತರೆ ಧರ್ಮಗಳನ್ನು ನಿಂದಿಸಿರುವುದನ್ನು ಕಾಣುತ್ತೇವೆ.

ಕೆಲವು ಬಾರಿ ಶೈವ-ವೈದ್ಧಿಕ ಧರ್ಮಗಳನ್ನು ಸಮನ್ವಯಿಸಿ ಕಾವ್ಯ ರಚನೆಯಾಗಿರುವುದು ಇಲ್ಲಿ ವಿಶೇಷವಾಗಿದೆ. ಇದಕ್ಕೆ ಮುಖ್ಯ ಕಾರಣವೆಂದರೆ ಅರಸರು ರಾಜ್ಯದಲ್ಲಿನ ಎಲ್ಲಾ ಧರ್ಮಿಯರಿಗೆ ಆಶ್ರಯ ನೀಡಿ ಅವರನ್ನು ಧಾರ್ಮಿಕವಾಗಿ ಸಮಾನತೆಯಿಂದ ಕಾಣುತ್ತಿದ್ದುದು ಒಂದಾಗಿರಬೇಕು. ಅಲ್ಲದೇ ಮತ್ತೊಂದು ಮೈಸೂರು ಅರಸರೇ ಕೆಲವರು ವೈಷ್ಣವ ಧರ್ಮಕ್ಕೆ ಬದ್ಧರಾಗಿದ್ದರೆ, ಕೆಲವರು ಶೈವ ಧರ್ಮಕ್ಕೆ ಬದ್ಧರಾಗಿದ್ದರೆಂದು ತಿಳಿದುಬರುತ್ತದೆ. ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಬಹುಪಾಲು ಧರ್ಮ ಕೇಂದ್ರಿತವಾಗಿ ರಚನೆಯಾದ ಸಾಹಿತ್ಯವೇ ಹೆಚ್ಚಾಗಿ ಕಂಡುಬರುತ್ತದೆ. ವೀರಶೈವ ಕವಿಗಳು ಶಿವನನ್ನು; ವೈಷ್ಣವ ಕವಿಗಳು ವಿಷ್ಣುವನ್ನು ಅವತಾರ ಪುರುಷರಂತೆ ಮೆರೆಸಿ ತಮ್ಮ ಧರ್ಮವನ್ನು ಉಳಿಸಿಕೊಳ್ಳುವ ಮತ್ತು ಬೆಳೆಸುವ ಕೆಲಸವನ್ನು ಮಹಾತ್ಮೆ ಕೃತಿಗಳ ಮೂಲಕ ಮಾಡಿದ್ದನ್ನು ಈ ಮೂಲಕ ಗುರ್ತಿಸಲಾಗಿದೆ.

ರಾಜಾಶ್ರಯ, ಧರ್ಮ ಮತ್ತು ಸಂಸ್ಕೃತ ಭಾಷೆಯ ಪ್ರಭಾವ ಮತ್ತು ಪ್ರೇರಣೆಗಳಿಂದ ಮಹಾತ್ಮೆಗಳ ಸಾಹಿತ್ಯವು ಭಕ್ತಿ ಮತ್ತು ಅನುಭವಯುಕ್ತವಾದ ಸಾಹಿತ್ಯಿಕ ರೂಪದಲ್ಲಿ ಮೂಡಿಬಂದಿವೆ. ಇದು ೧೫ ರಿಂದ ೧೯ನೇ ಶತಮಾನದ ಕೊನೆಯವರೆಗಿನ ಮಧ್ಯಕಾಲೀನ ಸಾಹಿತ್ಯವನ್ನು ಗಮನಿಸಿದರೆ ತಿಳಿಯುತ್ತದೆ. ಈ ಕಾಲದಲ್ಲಿ ಕರ್ನಾಟಕವು ಉಳಿದ ದಕ್ಷಿಣದ ರಾಜ್ಯಗಳಿಗಿಂತ ರಾಜಕೀಯವಾಗಿಯೂ, ಸಾಂಸ್ಕೃತಿಕವಾಗಿಯೂ ಹಿಂದೆಂದೂ ಕಾಣದ ಉನ್ನತಿಯ ಶಿಖರದಲ್ಲಿತ್ತು. ಹಾಗೆ ಹಿಂದೆಂದೂ ತೋರದ ಅವನತಿಯ ಕಂದರದಲ್ಲಿಳಿದಿತ್ತು. ೧೪-೧೫ನೇ ಶತಮಾನದಲ್ಲಿ ತಲೆಯೆತ್ತಿದ ವಿಜಯನಗರ ಸಾಮ್ರಾಜ್ಯವು ದಕ್ಷಿಣ ಭಾರತಕ್ಕೆ ಉಜ್ವಲವಾದ ಪ್ರಭುತ್ವ ಶಕ್ತಿಯ ಕೇಂದ್ರವಾಗಿತ್ತು. ಈ ಕಾಲದಲ್ಲಿ ಸರ್ವಧರ್ಮ ಸಮನ್ವಯವನ್ನು ಧಾರ್ಮಿಕ ನೆಲೆಯಲ್ಲಿ ವಿಜಯನಗರದ ಅರಸರು ಹೊಂದಿದ್ದನ್ನು ಕಾಣಬಹುದು. ಶೈವ-ವೀರಶೈವ, ಜೈನ, ಮುಸ್ಲಿಂ, ವೈಷ್ಣವ ಈ ಎಲ್ಲಾ ಮತಗಳಿಗೆ ಆಶ್ರಯವನ್ನು ನೀಡಿದ್ದನ್ನು ಕಾಣಬಹುದು. ಆದರೆ ಸಮಗ್ರ ಕರ್ನಾಟಕದ ಧಾರ್ಮಿಕ ಬಹುತ್ವದ ಪರಂಪರೆಯನ್ನು ಬದಿಗೊತ್ತಿ ವಿಶಾಲವಾದ ವೈದ್ಧಿಕ ಧರ್ಮವನ್ನು ಸ್ಥಾಪಿಸುವಲ್ಲಿ ವಿಜಯನಗರದ ಅರಸರು ಪ್ರಮುಖ ಪಾತ್ರವನ್ನು ವಹಿಸಿದರು ಎಂಬುದನ್ನು ಮಹಾತ್ಮೆ ಕಾವ್ಯಗಳು ಸ್ಪಷ್ಟಪಡಿಸುತ್ತವೆ.

ಕವಿಯು ಸಮಾಜದೊಂದಿಗೆ ತನ್ನ ಸಾಹಿತ್ಯದ ದೃಷ್ಟಿಕೋನವನ್ನು ಒಪ್ಪಿಕೊಳ್ಳುತ್ತ, ರಾಜಾಶ್ರಯದ ಹಂಗಿನಲ್ಲಿ ಧಾರ್ಮಿಕ ಅಂಶಗಳನ್ನು ಕೃತಿಯಲ್ಲಿ ತರುವಾಗ ಕವಿಯ ಸಾಮರ್ಥ್ಯ ತುಂಬ ಮುಖ್ಯವಾಗಿರುತ್ತದೆ. ಆಶ್ರಯದಾತರ ಆಜ್ಞೆ, ಸ್ವಧರ್ಮದ ಪ್ರೇಮ

ಹಾಗೂ ಸಾಮಾಜಿಕ ಒತ್ತಡಗಳಲ್ಲಿ ಮಹಾತ್ಮ್ಯೆ ಕಾವ್ಯಗಳು ಮೂಡಿಬಂದಿವೆ. ಕವಿಯೊಬ್ಬನು ಧರ್ಮ ಮತ್ತು ರಾಜಾಶ್ರಯದ ಒಳಗೆ ಬರೆಯುತ್ತಿದ್ದರೂ ಅವನು ಮಾನವೀಯ ನೆಲೆಯಲ್ಲಿಯೇ ನಿಂತು ಕಾವ್ಯರಚನೆಯಲ್ಲಿ ತೊಡಗಿರುತ್ತಾನೆ ಎಂಬುದನ್ನು ಮರೆಯಬಾರದು. ಉದಾಹರಣೆಗೆ ಕವಿರಂಗನ ಕಾವೇರಿ ಮಹಾತ್ಮ್ಯೆಯಲ್ಲಿ ಅಗಸ್ತ್ಯ ಮತ್ತು ಕಾವೇರಿ ಮದುವೆ ಪ್ರಸಂಗ, ಮತ್ತು ಮಹಾಕೂಟ ಮಹಾತ್ಮ್ಯೆಯಲ್ಲಿ ಬರುವ ಸಾಮಾಜಿಕ ಮೌಲ್ಯಗಳು ಮತ್ತು ನೀತಿ ನಡಾವಳಿಗಳನ್ನು ವರ್ಣಿಸುವಾಗ ಕವಿ ಅಂದಿನ ಸಮಾಜದ ವಾಸ್ತವ ಬದುಕನ್ನು ಚಿತ್ರಿಸಿದಂತೆ ಭಾಸವಾಗುತ್ತದೆ. ಈ ಸಾಮಾಜಿಕ ವಾಸ್ತವದ ಚಿಂತನೆಯು ಇಲ್ಲಿ ಮುಖ್ಯವಾಗುತ್ತದೆ. ಆದ್ದರಿಂದಲೇ ಮಹಾತ್ಮ್ಯೆ ಕಾವ್ಯಗಳು ಧರ್ಮ, ನೀತಿ ಕಾವ್ಯಗಳಾಗಿ ಹೇಗೆ ಮಹತ್ವವನ್ನು ಪಡೆದಿವೆಯೋ ಹಾಗೆಯೇ ಚಾರಿತ್ರಿಕ ಮತ್ತು ಸಾಮಾಜಿಕ ಮೌಲ್ಯಗಳನ್ನು ತಿಳಿಸುವಾಗ ವಾಸ್ತವತೆಯ ಮಹತ್ವವನ್ನು ಪಡೆದಿವೆ.

ಮಹಾತ್ಮ್ಯೆಗಳ ಸಾಹಿತ್ಯವನ್ನು ವಿಶ್ಲೇಷಿಸುವಾಗ ಚರಿತ್ರೆ, ಐತಿಹ್ಯ, ಪುರಾಣ ಮತ್ತು ಸಮಾಜದ ಸಾಂಸ್ಕೃತಿಕ ಆವರಣದಲ್ಲಿ ಮಹಾತ್ಮ್ಯೆ ಕೃತಿಗಳ ಸಾಹಿತ್ಯ ಬೆಳೆದಿದೆ. ಆದರೆ ಇಲ್ಲಿ ಚರಿತ್ರೆ, ಐತಿಹ್ಯ, ಸಂಸ್ಕೃತಿಗಳ ಕಥನಾಂಶ ಗೌಣವಾಗಿ ಪುರಾಣದ ದೇವತೆಗಳನ್ನು ಕುರಿತ ಅಂಶಗಳೇ ಮೇಲುಗೈ ಸ್ಥಾನವನ್ನು ಪಡೆದಿವೆ. ಹಾಗೆ ಇವು ಆಯಾ ಧರ್ಮದ ಸಂಸ್ಕೃತಿಯ ವೈಶಿಷ್ಟ್ಯದ ಪ್ರತೀಕಗಳಾಗಿ ಅವುಗಳನ್ನು ಕವಿಗಳು ತಮ್ಮ ಕಲ್ಪನೆ ಮೂಲಕ ಬೃಹತ್ ಕಾವ್ಯಗಳನ್ನು ಕಟ್ಟಿಕೊಟ್ಟಿರುವುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಆದರೂ ಕನ್ನಡ ಸಾಹಿತ್ಯದಲ್ಲಿ ಆದಿಕವಿ ಪಂಪನಿಂದ ಇಂದಿನವರೆಗೂ ಸಹ ಇಂತಹ ಪುರಾಣ ಕಾವ್ಯಗಳ ಸೃಷ್ಟಿ ನಿಂತಿಲ್ಲ. ಆದರೆ ಎಲ್ಲಾ ಪುರಾಣ ಅಥವಾ ಮಹಾತ್ಮ್ಯೆಗಳು ಸಹ ಯಶಸ್ವಿಯನ್ನು ಹೊಂದಿಲ್ಲ. ಅದಕ್ಕೆ ಕಾರಣ ಪಂಡಿತ ವರ್ಗದವರಿಂದ ಸಾಹಿತ್ಯ ರಚನೆ ಮಾಡಬೇಕು ಎಂಬ ನಿಲುವಿಗೆ ಬದಲಾಗಿ ಧಾರ್ಮಿಕ ಹಿನ್ನೆಲೆ ಹೊಂದಿರುವ ಕಾವ್ಯ ಸೃಷ್ಟಿ ಆಗಬೇಕು ಎಂಬ ಒತ್ತಡ, ಒತ್ತಾಯವು ಕಾರಣವಾಗಿರಬೇಕು. ಮಹಾತ್ಮ್ಯೆಗಳಲ್ಲಿ ಹಲವು ಕಾವ್ಯಗಳು ಶ್ರೇಷ್ಠತೆಯನ್ನು ಗುರುತಿಸಿಕೊಂಡರೆ ಇನ್ನುಳಿದವುಗಳು ಸಾಹಿತ್ಯಿಕ ವಲಯದಲ್ಲಿ ಯಾವುದೇ ಮಾನ್ಯತೆಯು ಪಡೆಯದೇ ಇರುವುದನ್ನು ಮುಖ್ಯವಾಗಿ ಗಮನಿಸಲಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಇವು ನಿರ್ಲಕ್ಷಕ್ಕೆ ಒಳಗಾಗಿ ಮೂಲೆಗುಂಪಾಗಿವೆ.

ಒಟ್ಟಾರೆಯಾಗಿ ಮಹಾತ್ಮ್ಯೆ ಕಾವ್ಯಗಳು ಕ್ಷೇತ್ರಗಳನ್ನು ವರ್ಣಿಸುವ ಹಿನ್ನೆಲೆಯಲ್ಲಿ ಧರ್ಮ, ನೀತಿ, ಬೋಧನೆಗೆ ನೈವೇದ್ಯವಾಗಿ ಕಾವ್ಯವು ಹೊಂದಿರಬೇಕಾದ ಮೌಲ್ಯಗಳನ್ನು

ಕಳೆದುಕೊಂಡಿವೆ. ಕಾವ್ಯವು ಜೀವನ ಮೌಲ್ಯಗಳನ್ನು ಸಮಾಜಕ್ಕೆ ಆ ಮೂಲಕ ಜನರಿಗೆ ತಾತ್ವಿಕ ಹಿನ್ನೆಲೆಯಲ್ಲಿ ಆದರ್ಶವನ್ನು ಕಟ್ಟಿಕೊಟ್ಟಿರುವುದನ್ನು ಅಲ್ಲಗೆಳೆಯುವುದಕ್ಕೆ ಆಗುವುದಿಲ್ಲ. ಅತಿಯಾದ ಅನುಕರಣೆಯಿಂದಾಗಿ ಧರ್ಮವೇ ತುಂಬಿ ಕಾವ್ಯದ ಸೃಜನಶೀಲತೆಯನ್ನು, ಗುಣವನ್ನು ಮರೆತಂತಿದೆ. ಇಂತಹ ಆಧುನಿಕತೆಯ ವೈಜ್ಞಾನಿಕ ಯುಗದಲ್ಲಿ, ವೈಚಾರಿಕತೆಯಿಂದಾಗಿ ಮತಧರ್ಮಗಳು ಹೆಚ್ಚೆಂದರೆ ಕೇವಲ ವೈಯಕ್ತಿಕ ಹಿತಾಸಕ್ತಿಗೆ ಸಂಬಂಧವನ್ನು ಹೊಂದಿರುತ್ತವೆಯೇ ವಿನಃ ಇದರಿಂದ ಯಾವುದೇ ಸಾಮಾಜಿಕ ಮೌಲ್ಯಗಳನ್ನು ನಿರೀಕ್ಷಿಸುವುದು ಅಸಾಧ್ಯ. ಆದ್ದರಿಂದ ಇಂತಹ ಮಹಾತ್ಮೆ, ಪುರಾಣ, ಐತಿಹ್ಯಗಳನ್ನು ಆಧುನಿಕತೆಯ ವಾಸ್ತವ ಜಗತ್ತಿನಲ್ಲಿ ಅದೊಂದು ಕಲ್ಪಿತ ಜಗತ್ತು ಎಂದು ಭಾವಿಸುವಷ್ಟು ನಾವು ಕಾಲಬಿಂದುವಿನಿಂದ ಮುಂದೆ ಸಾಗಿದ್ದೇವೆ ಎಂಬುದಂತೂ ಸತ್ಯ.

ಈ ಹಿನ್ನೆಲೆಯಲ್ಲಿ ಇಡೀ ಪ್ರಬಂಧದ ಫಲಿತಗಳನ್ನು ಪ್ರಧಾನವಾಗಿ ಈ ರೀತಿಯಾಗಿ ಗ್ರಹಿಸಬಹುದಾಗಿದೆ.

- ಮೊದಲನೆಯದಾಗಿ ಧರ್ಮದ ಪ್ರಭಾವಕ್ಕೆ ಒಳಗಾಗದೆ ಕಾವ್ಯ ರಚಿಸಿರುವ ಕವಿಗಳನ್ನು ಇಲ್ಲಿ ಕಾಣಲು ಸಾಧ್ಯವಾಗುವುದಿಲ್ಲ. ಧರ್ಮವನ್ನು ಒಪ್ಪಿಕೊಂಡೆ ಅದರ ಪ್ರಸಾರ ಅಥವಾ ಪ್ರಚಾರಕ್ಕಾಗಿಯೋ ಅಥವಾ ಅನಿವಾರ್ಯ ಒತ್ತಡದಿಂದಲೋ ಸ್ವಮತ ಧರ್ಮದ ಅಭಿಮಾನದಿಂದಲೂ ಕಾವ್ಯ ರಚಿಸಿರುವುದನ್ನು ಕಾಣಬಹುದು. ಇಲ್ಲಿ ಧರ್ಮವು ಕಾವ್ಯದ ಸೃಜನಶೀಲತೆಗೆ ಧಕ್ಕೆಯನ್ನುಂಟು ಮಾಡಿದೆ ಎಂದು ಹೇಳಿದರೆ ತಪ್ಪಾಗಲಾರದು. ಇಷ್ಟಾದರೂ ಪ್ರತಿಭಾವಂತ ಕವಿಗಳು ಧರ್ಮದ ಈ ಪ್ರಭಾವವನ್ನು ಒಂದು ಸವಾಲಾಗಿ ಸ್ವೀಕರಿಸಿ ಯಶಸ್ವಿಯಾಗಲೂ ಪ್ರಯತ್ನಿಸಿದ್ದಾರೆಂದು ತಿಳಿದುಬರುತ್ತದೆ.
- ಧಾರ್ಮಿಕ ಕಾವ್ಯಗಳನ್ನು ಬರೆಯುವಾಗ ಇವರ ಉದ್ದೇಶ ಧರ್ಮವೇ ಆದರೂ ಕಾವ್ಯ ಧರ್ಮವನ್ನು ತರಲು ಪ್ರಯತ್ನಿಸಿದ್ದಾರೆ. ಆದರೆ ಧರ್ಮಕ್ಕೆ ಭಂಗಬಾರದಂತೆ ಕಾವ್ಯ ರಚನೆಯಾದರೂ ; ಕವಿಗಳು ತಮ್ಮ ಕಾವ್ಯದ ಮೌಲ್ಯಗಳನ್ನು ಕಟ್ಟಿಕೊಡುವಲ್ಲಿ ಸೋಲುತ್ತಾರೆ. ಕಾವ್ಯಕ್ಕೆ ವಸ್ತುವಾಗಬಲ್ಲ ಯೋಗ್ಯತೆ ಕೆಲವೇ ವಿಷಯಗಳಿಗೆ ಇರುವಂತೆ ನಡೆದುಕೊಂಡಿದ್ದಾರೆ. ಇದಕ್ಕೆ ಕಾರಣ ಕೇವಲ ಉದಾತ್ತವಾದ ಗಂಭೀರವಾದ ವಸ್ತುಗಳೇ ಕವಿಯ ಕಾವ್ಯದ ವಸ್ತು-ವಿಷಯಗಳಾಗಲು ತಕ್ಕವು ಎಂಬ ಪರಿಣಾಮದ ಮನೋಭಾವವಿರಬೇಕು ಎಂದೆನಿಸುತ್ತದೆ.
- ಮಧ್ಯಕಾಲೀನ ಸಾಹಿತ್ಯ ಸಂದರ್ಭದಲ್ಲಿ ಸಂಸ್ಕೃತ ಛಂದಸ್ಸಿನ ಚಂಪೂ ಗ್ರಂಥಗಳ ಪ್ರಾಧ್ಯಾನ್ಯತೆ ಕುಸಿದು, ದೇಶಿ ವೃತ್ತಗಳು ಮತ್ತು ಹಾಡುಗಬ್ಬಗಳು ಮುಂದಕ್ಕೆ ಬಂದವು.

ಆದರೂ ಹಳಗನ್ನಡ ಭಾಷೆಯ ಪ್ರಭಾವ ಚಂಪೂ ಗ್ರಂಥಗಳಲ್ಲಿ ನಿಂತುಹೋಗಲಿಲ್ಲ. ಕಾರಣ ಪ್ರೌಢಕವಿಗಳಾದ ಜೈನಕವಿಗಳ ಸಮಾನ ಗೌರವಕ್ಕೆ ಪಾತ್ರರಾಗಬೇಕೆಂಬುದು ಅವರ ಕ್ರಮವನ್ನೇ ಅನುಸರಿಸಿದರು. ಅದರಲ್ಲಿ ಭಾಷೆ, ಕಾವ್ಯ ರೂಪ, ಸಾಹಿತ್ಯ ಲಕ್ಷಣಗಳನ್ನು ಸ್ವೀಕರಿಸಿದರು. ಅವರಂತೆ ಕಾವ್ಯಧರ್ಮದ ಮಟ್ಟವನ್ನು ಮುಟ್ಟಲಾಗಲಿಲ್ಲ. ಇಲ್ಲಿ ಕಾವ್ಯ ಬದಲಾವಣೆ ಎಂದರೆ ಜಿನಭಕ್ತಿಯನ್ನು ಸಾರಿದ ಕಡೆಯಲೆಲ್ಲ ಶಿವಭಕ್ತಿ ಮತ್ತು ವೈಷ್ಣವ ಭಕ್ತಿಯನ್ನು ಸಾರಿ ಸಂದರ್ಭಕ್ಕೆ ತಕ್ಕಂತೆ ಇತಿಹಾಸ, ಐತಿಹ್ಯದಂತಹ ಸ್ಥಳ ಪುರಾಣಗಳಾದ ಮಹಾತ್ಮ್ಯೆಗಳನ್ನು ನಿರೂಪಿಸಲಾಗಿದೆ.

- ಈ ಕಾವ್ಯಗಳ ವಸ್ತು, ಧರ್ಮ, ತತ್ವ, ನೀತಿ ಪ್ರಚಾರವನ್ನೇ ಮುಖ್ಯವಸ್ತುವನ್ನಾಗಿ ಮಾಡಿಕೊಂಡು ಸಾಹಿತ್ಯವನ್ನು ರಚಿಸಲಾಗಿದೆ. ಸಾಹಿತ್ಯವಿರುವುದು ಜನರ ಶ್ರೇಯಸ್ಸನ್ನು ಸಾಧಿಸಲು ಎಂದು ತೀರ್ಥಕ್ಷೇತ್ರಗಳ ಮೂಲಕ ಇದು ಪಾಪ, ಇದು ಪುಣ್ಯ. ಇದು ಹಿತ, ಇದು ಅಹಿತ, ಎಂದು ಬೋಧಿಸುವ ಅನುಭವ ಸಾಹಿತ್ಯದಂತೆ ಈ ಕೃತಿಗಳು ಆಶಯವನ್ನು ಹೇಳುತ್ತವೆ. ಅಲ್ಲದೇ ಪುರುಷಾರ್ಥ ಪ್ರಾಪ್ತಿಗೋಸ್ಕರ, ಪಾಪ ಪರಿಹಾರವಾಗುವುದಕ್ಕೆ, ಪುಣ್ಯಸಿದ್ಧಿಯಾಗುವುದಕ್ಕೆ ಮತ್ತು ಮೋಕ್ಷ ಪ್ರಾಪ್ತಿಗೋಸ್ಕರ ಈ ಕೃತಿಗಳನ್ನು ಪಠಿಸಬೇಕೆಂದು ತಿಳಿಸುತ್ತವೆ. ಈ ಕೃತಿಗಳಲ್ಲಿ ಪುರಾಣ ಯಾವುದು, ಮಹಿಮೆ ಯಾವುದು, ಐತಿಹ್ಯಗಳಾವೋ ಎಂಬಂತಹ ಸಂದೇಹ ಮೂಡುತ್ತದೆ. ಹಾಗೆಯೇ ವಾಸ್ತವ ಬದುಕಿನ ಬಗೆಗೆ ಇರುವ ಪ್ರೀತಿ ಆಸಕ್ತಿ, ಕಾತರತೆ ಹಾಗೂ ತೊಡಗುವಿಕೆಗಳಿಗೆ ತೀರಾ ವಿರುದ್ಧವಾದ ಈ ಉಪದೇಶ, ವಾಸ್ತವ ಹಾಗೂ ಸಹಜಾನುಭವಗಳ ಅಭಿವ್ಯಕ್ತಿಗೆ ಅವಕಾಶವಿಲ್ಲದಂತಹ ಪರಿಸ್ಥಿತಿಯನ್ನು ನಿರ್ಮಾಣ ಮಾಡಿವೆ. ಕಾವ್ಯ ಎನ್ನುವುದು ನೀತಿಬೋಧನೆಗೆ ನೈವೇಧ್ಯವಾಗಿವೆ ಎಂದರೆ ತಪ್ಪಾಗಲಾರದು.
- ಮಹಾತ್ಮ್ಯೆಗಳು ಜೀವನ ಮೌಲ್ಯಗಳನ್ನು, ಆದರ್ಶಗಳನ್ನು ತಾತ್ವಿಕ ಹಿನ್ನೆಲೆಯಲ್ಲಿ ಕಟ್ಟಿಕೊಡಲು ಸಾಧ್ಯವಾಗಿಲ್ಲವೆಂದು ಭಾವಿಸಲಾಗುವುದಿಲ್ಲ. ಆದರೆ ಧರ್ಮದ ಅತಿಯಾದ ಅನುಸರಣೆಯಿಂದಾಗಿ ಮಹಾತ್ಮ್ಯೆ ಸಾಹಿತ್ಯ ಸೃಷ್ಠಿ ಗೌಣವಾಗಿ ಅಲಕ್ಷಿತ ಕಾವ್ಯಗಳಾಗಿವೆ ಎನ್ನುವುದನ್ನು ಇಲ್ಲಿ ಗಮನಿಸಲಾಗಿದೆ.
- ರಾಮಾಯಣ, ಮಹಾಭಾರತ, ಭಾಗವತ, ಶೈವಮತದ ಸಂಸ್ಕೃತ ಪುರಾಣಗಳ ಉದ್ದಕ್ಕೂ ಮಹಾತ್ಮ್ಯೆ ಕಾವ್ಯ ವಸ್ತುಗಳಾಗಿವೆ. ಅನೇಕ ಸಂಸ್ಕೃತ ಕಾವ್ಯಗಳಿಂದ

ವಸ್ತುವಿನ್ಯಾಸವನ್ನು, ಪದಮುಂಜಗಳನ್ನು ಧಾರಾಳವಾಗಿ ಕನ್ನಡ ಕವಿಗಳು ತಮ್ಮ ಮಹಾತ್ಮ್ಯೆ ಕೃತಿಗಳಲ್ಲಿ ಅಳವಡಿಸಿಕೊಂಡಿದ್ದಾರೆ. ಹಾಗೆಯೇ ಇಂದಿನ ಸಂಸ್ಕೃತ ಕವಿಗಳನ್ನು ಕೆಲವರು ತಮ್ಮ ಕಾವ್ಯಗಳ ಆರಂಭದಲ್ಲಿ ಸ್ತುತಿಸಿದ್ದಾರೆ. ಉದಾಹರಣೆಗೆ ತಿಮ್ಮಕವಿ, ಗೋಪಕವಿಗಳು, ಕಾಳಿದಾಸ, ರುದ್ರಭಟ್ಟ, ಮುಂತಾದವರನ್ನು ನೆನೆಸುತ್ತ ಅವರನ್ನೇ ಆದರ್ಶವಾಗಿ ಮಾಡಿಕೊಂಡಿದ್ದಾರೆ. ಹೀಗೆ ಸಂಸ್ಕೃತ ಪ್ರಭಾವವು ವಸ್ತು ಹಾಗೂ ಭಾಷೆಯಲ್ಲಿ ಮುಖ್ಯವಾಗಿ ಕಾಣಿಸಿಕೊಳ್ಳುವುದನ್ನು ಚಿಕ್ಕದೇವರಾಜನ ಕಾಲದ ಕೆಲವು ಕೃತಿಗಳಲ್ಲಿ ನೋಡಬಹುದು. ಒಂದು ರೀತಿ ಮಾರ್ಗ ಕಾವ್ಯದ ರೀತಿಯಲ್ಲಿಯೇ ಕಾವ್ಯಗಳು ರೂಪತಾಳಿದವು. ಇದಕ್ಕೆ ಕಾರಣ ಬಹುಮಟ್ಟಿಗೆ ಕಾವ್ಯಗಳು ರಾಜರುಗಳ ಆಸ್ಥಾನದಲ್ಲಿ ರಚನೆಯಾದದ್ದು. ರಾಜಾಸ್ಥಾನದ ಮರ್ಯಾದೆ ಗಾಂಭೀರ್ಯಗಳಿಗೆ, ಸಂಸ್ಕೃತ ಕನ್ನಡ ಮಿಶ್ರಿತವಾದ ಮಹಾತ್ಮ್ಯೆ ಸಾಹಿತ್ಯದ ಮಾದರಿಯನ್ನು ಗುರ್ತಿಸಲಾಗಿದೆ.

- ಈ ಮಹಾತ್ಮ್ಯೆಗಳು ನದಿಗಳ ಮಹಿಮೆಯನ್ನು ಹೇಳುವುದರಿಂದ; ಅಲ್ಲಿಯ ತೀರ್ಥಗಳು, ದೇವಾಲಯಗಳು, ಕ್ಷೇತ್ರ ವಿಶೇಷದೊಂದಿಗೆ ಪ್ರಕೃತಿಯ ವರ್ಣನೆಯು ತುಂಬಿದೆ, ಇಂತಹ ನದಿಗಳಲ್ಲಿ ಅಥವಾ ಪುಷ್ಕರಣಿಯಲ್ಲಿ ಸ್ನಾನಮಾಡಿದರೆ ರೋಗ ರುಜನೆಗಳು ಪರಿಹಾರವಾಗುತ್ತದೆ ಎಂದು ಬಣ್ಣಿಸಿರುವುದರಿಂದ ಇಲ್ಲಿ ಬರುವ ಭಕ್ತಾದಿಗಳ ಸಂಖ್ಯೆಯೂ ಹೆಚ್ಚುತ್ತದೆ. ಅಲ್ಲಿ ಮತಧರ್ಮ ಎಂಬ ಹಿನ್ನೆಲೆಯಲ್ಲಿ ನೋಡದೆ ಸರ್ವರೆಲ್ಲರೂ ಒಂದಾಗಿ ಅಲ್ಲಿ ನಡೆಯುವ ಆಚರಣೆಗಳಲ್ಲಿ ಭಾಗವಹಿಸುತ್ತಿದ್ದರು. ಇದು ಸರ್ವಧರ್ಮ ಸಮನ್ವಯ ಎಂಬ ತತ್ವವನ್ನು ಸಾರುವಂತೆಯು ತೋರುತ್ತದೆ. ಆದ್ದರಿಂದ ಈ ಕೃತಿಗಳನ್ನು ಒಂದು ಧಾರ್ಮಿಕ ಹಿನ್ನೆಲೆಯಲ್ಲಿ ನೋಡಲಾಗದೆ. ಅದೊಂದು ಜನ ಸಾಮಾನ್ಯರಿಗಾಗಿ ರಚನೆಯಾದ ಕಾವ್ಯಗಳನ್ನಾಗಿ ಕೂಡ ನೋಡಬಹುದು.

- ಅಲ್ಲದೇ ಕೆಲವು ಕಾವ್ಯಗಳಲ್ಲಿ ಸರಳ ಭಾಷೆ ಮತ್ತು ಛಂದಸ್ಸನ್ನು ಬಳಸಿ, ಜನಸಾಮಾನ್ಯರಿಗೂ ಕಾವ್ಯದ ತಿರುಳನ್ನು ತಿಳಿಸುವ ಪ್ರಯತ್ನ ಮಾಡಿದ್ದಾರೆ. ಹಾಗೆಯೆ ಅಂದಿನ ಕಾಲದ ಜನರ ಸ್ಥಿತಿಗತಿ, ಸಾಮಾಜಿಕ ಕಟ್ಟುಪಾಡುಗಳು, ಅವರ ನಂಬಿಕೆಗಳು, ಆಚರಣೆಗಳು, ರೀತಿ–ರಿವಾಜುಗಳು ಮತ್ತು ಜನಜೀವನ ಪದ್ಧತಿಯಂತಹ ಮುಂತಾದ ಸಾಂಸ್ಕೃತಿಕ ಸಂಗತಿಗಳನ್ನು, ಹಲವಾರು ಕಥೆ, ಉಪಕಥೆಗಳ ಗುಚ್ಚಗಳಲ್ಲಿ ಸಾಮಾಜಿಕ ಮೌಲ್ಯಗಳ ಮಹತ್ವವನ್ನು ಕಟ್ಟಿಕೊಡಲಾಗಿದೆ.

- ಪ್ರತಿಯೊಂದು ಮಹಾತ್ಮೆಯೂ ಒಂದು ಪ್ರಮುಖ ಧಾರ್ಮಿಕ ಕ್ಷೇತ್ರ ಅಥವಾ ನದಿಗಳ ಮಹಿಮೆಯನ್ನು ಹೇಳಲಾಗಿದೆ. ಅಲ್ಲಿ ಧಾರ್ಮಿಕ ಸಂಹಿತೆಗಳೆ ತುಂಬಿದ್ದರೂ. ಕೆಲವೊಂದು ಸಂದರ್ಭದಲ್ಲಿ ದೇವಾಲಯಗಳ ಉತ್ಸವ, ಸಂಪ್ರದಾಯ ಹಾಗೂ ರಾಜಕೀಯ, ಸಾಮಾಜಿಕ, ಆರ್ಥಿಕ ಸಂದರ್ಭವನ್ನು ಕಟ್ಟಿಕೊಡುವ ಉಪಯುಕ್ತ ಮಾಹಿತಿಕೋಶಗಳಾಗಿವೆ.
- 'ವೇದಕ್ಕೆ ಸಮನಾದ ತತ್ವವಿಲ್ಲ, ಭಕ್ತಿಗೆ ಸಮಾನವಾದ ಮತ್ತೊಂದು ವಿಧಿಯಿಲ್ಲ, ಯಜ್ಞಕ್ಕೆ ಸಮಾನವಾದ ಧರ್ಮವಿಲ್ಲ, ಬ್ರಾಹ್ಮಣನಿಗೆ ಸರಿಯಾದ ಮುನಿಯಿಲ್ಲ ಎಂಬ ಸಿದ್ಧಾಂತವನ್ನು ಮಹಾತ್ಮೈ ಕಾವ್ಯಗಳ ರಚನೆಯ ಹಿನ್ನೆಲೆಯಲ್ಲಿ ಕೂಡ ಇದೇ ಮನೋಧರ್ಮವನ್ನು ಅನುಸರಿಸಿದ್ದಾರೆ.
- ಈ ಎಲ್ಲಾ ಮಹಾತ್ಮೆಗಳು ಪೌರಾಣಿಕ ಜಾಡಿನಲ್ಲಿ ಸಾಗಿವೆ. ಪುರಾಣದ ಲಕ್ಷಣವೇ ಹೆಚ್ಚಾಗಿ, ಸಾಹಿತ್ಯ ಗೌಣವಾಗಿ ವಸ್ತು ಪ್ರಧಾನವಾಗಿದೆ. ಇಲ್ಲಿ ಕವಿಗಳಿಗೆ ಕಾವ್ಯ, ಸಾಹಿತ್ಯ ಸೌಂದರ್ಯಕ್ಕಿಂತ ದೈವ ಸಂಕೀರ್ತನೆಯೇ ಮುಖ್ಯ ಎಂಬಂತೆ ಚಿತ್ರಿಸಲಾಗಿದೆ. ಇದರಿಂದಾಗಿ ಕಾವ್ಯ ಕಲೆಯ ಸೂಕ್ಷ್ಮ ಧ್ವನಿಗಳು ಮರೆಯಾಗಿ ಪೌರಾಣಿಕ ಅಂಶಗಳಿಗೆ ಒತ್ತು ಕೊಡಲಾಗಿದೆ. ಅಲ್ಲದೇ ಅಲ್ಲಿನ ಜನಜೀವನ ಚಿತ್ರಣ ನೀಡುವಲ್ಲಿ ಯಶಸ್ವಿಯಾಗಿವೆ ಎಂದರೆ ತಪ್ಪಾಗಲಾರದು.

# ಪರಾಮರ್ಶನ ಗ್ರಂಥಗಳು

ಅ. ಮೂಲ ಕೃತಿಗಳು

ಆ. ನಿಘಂಟುಗಳು

ಇ. ಗೆಜೆಟಿಯರ್

ಈ. ಸಂಶೋಧನಾ ಪ್ರಬಂಧಗಳು

ಉ. ಪರಾಮರ್ಶನ ಗ್ರಂಥಗಳು

# ಪರಾಮರ್ಶನ ಗ್ರಂಥಗಳು

## ಅ. ಮೂಲ ಕೃತಿಗಳು

೧. ಉಮಾಪತಿ ಎಸ್ (ಸಂ), **ಶ್ರೀ ಪರ್ವತ ಮಹಾತ್ಮ್ಯೆ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬.

೨. ಎರ್ದುಕಳ ಶಂಕರ ನಾರಾಯಣಭಟ್ ಕೆ, **ಕಾವೇರಿ ವೈಭವ,** ರಾಮಕೃಷ್ಣ ಪ್ರಕಾಶಕರು, ಭಾಗಮಂಡಲ, ೧೯೭೧.

೩. ಎರ್ದುಕಳ ಶಂಕರ ನಾರಾಯಣಭಟ್ ಕೆ, ಇಗ್ಗುತಪ್ಪ **ಮಹಾತ್ಮ್ಯೆ,** ರಾಮಕೃಷ್ಣ ಪ್ರಕಾಶಕರು, ಭಾಗಮಂಡಲ, ೧೯೯೯.

೪. ಗುರು ಓಂ ಸಿದ್ಧಲಿಂಗೇಶ್ವರ ಸ್ವಾಮಿಗಳು, **ಶ್ರೀ ಪಂಪಾಮಹಾತ್ಮ್ಯೆ (ಅನು), ಶ್ರೀ** ವೃಷಭಾಶ್ರಮ, ಸಿದ್ಧಲಿಂಗೇಶ್ವರ ಬೆಟ್ಟ, ಹೊಳಗುಂದಿ, ೧೯೮೩.

೫. ಭಾನುಮತಿ ವೈ.ಸಿ. (ಸಂ), **ಪಂಚಬಾಣನ ಭಂಜಬಲಿ ಚರಿತ್ರೆ,** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೨೦೧೧.

೬. ಭಾನುಮತಿ ವೈ.ಸಿ. (ಸಂ), ಸದಾಶಿವ ಕವಿ ವಿರಚಿತ **ಮಹಾಕೂಟ ಮಹಾತ್ಮ್ಯೆ,** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೨೦೦೬.

೭. ಭಾನುಮತಿ ವೈ.ಸಿ. (ಸಂ), **ಸಹ್ಯಾದ್ರಿ ಖಂಡ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೮೪.

೮. ಪುರುಷೋತ್ತಮ ಸಿ.ಜಿ. (ಸಂ), **ಶ್ರೀ ಆದಿಚುಂಚನಗಿರಿ ಕ್ಷೇತ್ರ ಮಹಿಮೆ,** ಶ್ರೀ ಆದಿಚುಂಚನಗಿರಿ ಗ್ರಂಥಮಾಲೆ, ನಾಗಮಂಗಲ, ೧೯೮೨.

೯. ಮಂಜುನಾಥನ್ ಜಿ.ಜಿ. (ಸಂ), ಗೋವಿಂದ ಕವಿ ವಿರಚಿತ **ನಂದಿಮಹಾತ್ಮ್ಯೆ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೮೧.

೧೦. ಮಂಜಪ್ಪ ಶೆಟ್ಟಿ ಎಂ.ಪಿ. (ಸಂ), ಕವಿರಂಗನ **ಕಾವೇರಿ ಮಹಾತ್ಮ್ಯೆ,** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೨೦೦೧.

೧೧. ಮಂಜಪ್ಪ ಶೆಟ್ಟಿ ಎಂ.ಪಿ. (ಸಂ), **ಪಶ್ಚಿಮರಂಗ ಕ್ಷೇತ್ರ ಮಹಾತ್ಮ್ಯಂ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೮೦.

೧೨. ಮಂಜಪ್ಪ ಶೆಟ್ಟಿ ಎಂ.ಪಿ. (ಸಂ), **ಶ್ರೀರಂಗ ಮಹಾತ್ಮ್ಯೆ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೮೧.

೧೩. ಮಂಜಪ್ಪ ಶೆಟ್ಟಿ ಎಂ.ಪಿ. (ಸಂ), **ವೆಂಕಟಗಿರಿ ಮಹಾತ್ಮ್ಯಂ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೮೪.

೧೪. ಮಂಜಪ್ಪ ಶೆಟ್ಟಿ ಎಂ.ಪಿ. (ಸಂ), **ಯಾದವಗಿರಿ ಮಹಾತ್ಮ್ಯೆ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೮.

೧೫. ಮಂಜಪ್ಪ ಶೆಟ್ಟಿ ಎಂ.ಪಿ. (ಸಂ), **ಚೆಲುವಾಂಬೆಯ ಕೃತಿಗಳು**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೮೪.

೧೬. ಶಾಂತ ಆರ್ (ಸಂ), **ಎಡತೊರೆ ಅರ್ಕಪುಷ್ಕರಣಿ ಮಹಾತ್ಮ್ಯೆ**, ಕನ್ನಡ ಸಾಹಿತ್ಯ ಪರಿಷತ್ತು.

೧೭. ಸಿದ್ದಗಂಗಯ್ಯ (ಸಂ), **ಕಕುದ್ಗಿರಿ ಮಹಾತ್ಮ್ಯೆ ಅಥವಾ ಶಿವಗಂಗೆ ಮಹಾತ್ಮ್ಯೆ**, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೨೦೧೨.

**ಆ. ನಿಘಂಟುಗಳು**

೧. **ಇಂಗ್ಲೀಷ್ ಕನ್ನಡ ನಿಘಂಟು**, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೪೬

೨. **ಕನ್ನಡ ನಿಘಂಟು (ಸಂ-೪)**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೯

೩. ಕಿಟೆಲ್ ಎಫ್. **ಕನ್ನಡ ಇಂಗ್ಲೀಷ್ ಡಿಕ್ಷನರಿ**, ಏಶಿಯನ್ ಎಜ್ಯುಕೇಶನ್ ಸರ್ವಿಸಸ್, ನವದೆಹಲಿ, ೧೯೮೪

೪. ಚಕ್ರವರ್ತಿ ಜಿ.ಎನ್, **ಸಂಸ್ಕೃತ ಕನ್ನಡ ನಿಘಂಟು**, ಗೀತಾಬುಕ್ ಹೌಸ್, ಮೈಸೂರು, ೨೦೦೬

೫. ಶಿವರಾಮ ಕಾರಂತ, **ಸಿರಿಗನ್ನಡ ಅರ್ಥಕೋಶ**, ಹರ್ಷ ಪ್ರಕಟಣಾಲಯ, ಪುತ್ತೂರು, ೧೯೬೭

೬. ಯಜ್ಞನಾರಾಯಣ ಉಡುಪ, **ಪುರಾಣ ಭಾರತ ಕೋಶ**, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೮

**ಇ. ಗೆಜೆಟಿಯರ್**

೧. **ಕರ್ನಾಟಕ ರಾಜ್ಯ ಗಾಸೆಟಿಯರ್ ಇಲಾಖೆ** ದಕ್ಷಿಣ ಕನ್ನಡ ಜಿಲ್ಲೆ, ೨೦೦೭

೨. **ಕರ್ನಾಟಕ ರಾಜ್ಯ ಗಾಸೆಟಿಯರ್ ಇಲಾಖೆ** ಮಂಡ್ಯ ಜಿಲ್ಲೆ, ೨೦೦೩

೩. **ಕರ್ನಾಟಕ ಕೈಪಿಡಿ,** ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ೨೦೦೭

೪. **ಕನ್ನಡ ವಿಷಯ ವಿಶ್ವಕೋಶ ಸಂ-೩,** ಮೈಸೂರು

೫. **ಕನ್ನಡ ವಿಷಯ ವಿಶ್ವಕೋಶ ಸಂ-೧೩,** ಮೈಸೂರು

**ಈ. ಸಂಶೋಧನಾ ಪ್ರಬಂಧಗಳು**

೧. ಕರಿಬಸಪ್ಪ, **ಬಳ್ಳಾರಿ ಜಿಲ್ಲೆಯ ಐತಿಹ್ಯಗಳು,** ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರಬಂಧ, ೨೦೦೪

೨. ದೇವಾಂಗಮಠ ಎ.ವ್ಹಿ. **ಆಧುನಿಕ ಕನ್ನಡ ಪುರಾಣ ಕಾವ್ಯಗಳು : ಒಂದು ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರಬಂಧ, ೨೦೧೧

೩. ಚಿದಾನಂದಮೂರ್ತಿ ಎಂ, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಸಪ್ನ ಬುಕ್ ಹೌಸ್, ೨೦೧೭

೪. ಪೂಜಾರ ವ್ಹಿ.ಜಿ, **ವೀರಶೈವ ಸಾಹಿತ್ಯದಲ್ಲಿ ಪವಾಡಕಥೆಗಳು,** ನಿರಂತರ ಪ್ರಕಾಶನ, ಬೆಂಗಳೂರು, ೧೯೯೧

೫. ಮಂಜಣ್ಣ ಪಿ, **ಕನ್ನಡ ಹಾಗೂ ತೆಲುಗು ಬಸವ ಪುರಾಣಗಳ ತೌಲನಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರಬಂಧ, ೨೦೧೮

೬. ರಾಮೇಗೌಡ, **ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೮೯

೭. ವಿದ್ಯಾಶಂಕರ ಎಸ್, **ವೀರಶೈವ ಪುರಾಣಗಳು ಒಂದು ಅಧ್ಯಯನ,** ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೬

೮. ವೀರಣ್ಣ, **ಕನ್ನಡ ಕವಿಗಳ ಮೇಲಿನ ಐತಿಹ್ಯಗಳು,** ಮಂಗಳೂರು ವಿಶ್ವವಿದ್ಯಾಲಯ, ೧೯೮೮

೯. ವಿಜಯದೇವಿ, **ಚೆನ್ನಬಸವ ಪುರಾಣ ಒಂದು ಅಧ್ಯಯನ**, ಪ್ರಭುದೇವರ ಗ್ರಂಥಮಾಲೆ, ಬೆಂಗಳೂರು, ೧೯೯೮

೧೦. ಲಕ್ಷ್ಮೀದೇವಿ ಎಲ್. **ಅವಿಭಜಿತ ಕೋಲಾರ ಜಿಲ್ಲೆಯ ಐತಿಹ್ಯಗಳು**, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೨೦೧೧

೧೧. ಸಿದ್ಧಲಿಂಗಯ್ಯ, **ಗ್ರಾಮದೇವತೆಗಳು**, ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೯

೧೨. ಸುಬ್ಬಣ್ಣ ರೈ, **ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು**, ಮುಂಬೈ, ೧೯೯೪

**ಉ. ಪರಾಮರ್ಶನ ಗ್ರಂಥಗಳು**

೧. ಅಂಜಪ್ಪಯಳನಾಡು (ಸಂ), **ಧರ್ಮ ಮತ್ತು ವಿಚಾರ**, ಕನ್ನಡ ವಿಶ್ವವಿದ್ಯಾಲಯ, ಪ್ರಸಾರಾಂಗ

೨. ಅನಕೃ, **ಭಾರತೀಯ ಸಂಸ್ಕೃತಿ ದರ್ಶನ, ಸಾಹಿತ್ಯ ಮತ್ತು ಸಂಸ್ಕೃತಿ ದರ್ಶನ**, ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಮೈಸೂರು–ಬೆಂಗಳೂರು ಸರಕಾರ, ಬೆಂಗಳೂರು, ೧೯೬೨

೩. ಅನಂತಚಾರ್ ಎನ್, **ಭಾರತೀಯ ತೀರ್ಥಕ್ಷೇತ್ರ ಸಂದರ್ಶಿನಿ**, ಸ್ವಚ್ಛಂದ ಪ್ರಕಾಶನ, ಮೈಸೂರು, ೧೯೮೪

೪. ಆದ್ಯರಾಮಾಚಾರ್ಯ, **ಶ್ರೀಕ್ಷೇತ್ರ ತಿರುಪತಿ**, ವರದರಾಜ ಪ್ರಕಾಶನ, ಬೆಂಗಳೂರು, ೧೯೮೫

೫. ಉಮೇಶ ಹೆಚ್.ಆರ್, **ಶ್ರೀರಂಗ ಪಟ್ಟಣದ ಐತಿಹಾಸಿಕ ಹಿನ್ನೆಲೆ: ಒಂದು ಅಧ್ಯಯನ**, ಕರ್ನಾಟಕ ಸಂಘ, ಮಂಡ್ಯ, ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ, ೨೦೦೭–೦೮

೬. **ಕನ್ನಡ ಕೈಪಿಡಿ ಸಂ–೨**, ಮೈಸೂರು ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೬೭

೭. **ಕರ್ನಾಟಕ ಪರಂಪರೆ ಸಂ ೧–೨**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೮. ಕೀರ್ತಿನಾಥ ಕುರ್ತಕೋಟಿ, **ಕನ್ನಡ ಸಾಹಿತ್ಯ ಸಂಗಾತಿ**, ಮೆಮೋರಿಯಲ್ ಟ್ರಸ್ಟ್, ಧಾರವಾಡ, ೨೦೧೧

೯. ಕೀರ್ತಿನಾಥ ಕುರ್ತಕೋಟಿ, **ರಾಜಕೀಯ ಮತ್ತು ಧರ್ಮ**, ಮನೋಹರ ಗ್ರಂಥಮಾಲೆ, ಧಾರವಾಡ, ೨೦೦೩

೧೦. ಕುಪ್ಪಸ್ವಾಮಿ ಬಿ. (ಸಂ), **ಶ್ರದ್ಧೆ, ನಂಬಿಕೆ ಮತ್ತು ವೈಚಾರಿಕತೆ**, ಬೆಂಗಳೂರು ವಿಶ್ವವಿದ್ಯಾಲಯ, ೧೯೮೦

೧೧. ಕುವೆಂಪು (ಪ್ರ.ಸಂ), **ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂ-೧**, ಮೈಸೂರು ವಿಶ್ವವಿದ್ಯಾಲಯ, ಪ್ರಸಾರಾಂಗ, ಮೈಸೂರು, ೧೯೭೦

೧೨. ಕುವೆಂಪು (ಪ್ರ.ಸಂ), **ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂ-೨**, ೧೯೭೧

೧೩. ಕೃಷ್ಣಮೂರ್ತಿ ಕೆ, **ಧರ್ಮಶಾಸ್ತ್ರದ ಇತಿಹಾಸ ಸಂ-೫, ಭಾಗ-೧**, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೨೦೧೧

೧೪. ಕೃಷ್ಣಕುಮಾರ್ ಸಿ.ಪಿ. (ಸಂ), **ಕನ್ನಡ ಛಂದಸ್ಸಿನ ಚರಿತ್ರೆ, ಸಂ-೨**, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೦

೧೫. ಗುಂಡಪ್ಪ ಡಿ.ವಿ, **ಸಂಸ್ಕೃತಿ**, ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೯೯

೧೬. ಗೋಪಾಲಕೃಷ್ಣಯ್ಯ ಕೆ.ಎಲ್, **ಕನ್ನಡ ಸಾಹಿತ್ಯದಲ್ಲಿ ಪುರಾಣ ಪ್ರಜ್ಞೆ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೮

೧೭. ಗೋಪಾಲಕೃಷ್ಣಯ್ಯ ಕೆ.ಎಲ್, **ಪುರಾಣ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೦

೧೮. ಚಂದ್ರಕಾಂತ ಪೋಕಳೆ (ಅನು), **ಶ್ರೀ ವಿಠ್ಠಲ ಒಂದು ಮಹಾಸಮನ್ವಯ**, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೨

೧೯. ಚಂದ್ರಶೇಖರಯ್ಯ ಬಿ.ಎಂ, **ಕರ್ನಾಟಕ ಸಂಸ್ಕೃತಿ ಪರಂಪರೆ**, ಸಿ.ವಿ.ಜಿ. ಬುಕ್ಸ್, ಬೆಂಗಳೂರು, ೨೦೧೦

೨೦. ಚಂದ್ರಶೇಖರ್ ಎಸ್, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೯

೨೧. ಚಿದಂಬರ ಕುಲಕರ್ಣಿ (ಅನು), **ಧರ್ಮಶಾಸ್ತ್ರದ ಇತಿಹಾಸ, ಸಂ-೨, ಭಾಗ-೧**, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೨೦೦೨

೨೨. ಚಿದಾನಂದಮೂರ್ತಿ ಎಂ, **ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೫

೨೩. ಜಯದೇವ್ ಹು.ಕಾ., **ಶಾಸನ ಮತ್ತು ಗದ್ಯ,** ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೯

೨೪. ಜಾಜಿ ದೇವೇಂದ್ರಪ್ಪ (ಅನು), **ಶ್ರೀಶೈಲ ಪರಿಸರ ಸಾಂಸ್ಕೃತಿಕ ಅಧ್ಯಯನ,** ಪ್ರಭುದೇವರ ಜನರ ಕಲ್ಯಾಣ ಸಂಸ್ಥೆ, ಸಂಡೂರು, ೨೦೦೯

೨೫. ಜೋಶಿ ಡಿ.ಟಿ, **ಮಧ್ಯಯುಗೀನ ಭಾರತದ ಇತಿಹಾಸ,** ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೬

೨೬. ತಿಪ್ಪೇರುದ್ರಸ್ವಾಮಿ ಎಚ್, **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ಡಿ.ವಿ.ಕೆ. ಮೂರ್ತಿ ಪ್ರಕಾಶನ, ೨೦೦೩

೨೭. ಸೀತಾರಾಮಯ್ಯ ಎಂ.ವಿ, **ಶಾಸ್ತ್ರ ಸಾಹಿತ್ಯ,** ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೯

೨೮. ದಾಸೇಗೌಡ (ಸಂ), **ಕನ್ನಡ ಐತಿಹ್ಯಗಳು,** ತೇಜಸ್ವಿನಿ ಪ್ರಕಾಶನ, ಮಡಿಕೇರಿ, ೧೯೭೦

೨೯. ದಿವಾಕರ್ ಆರ್.ಆರ್. (ಪ್ರ.ಸಂ), **ಕರ್ನಾಟಕ ಪರಂಪರೆ ಸಂ-೨,** ಮೈಸೂರು ರಾಜ್ಯ ಸರ್ಕಾರ ಬೆಂಗಳೂರು, ೧೯೭೦

೩೦. ದೇವಾಂಗಮಠ ಎ.ವ್ಹಿ, **ಆಧುನಿಕ ಕನ್ನಡ ಪುರಾಣ ಕಾವ್ಯಗಳು : ಒಂದು ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರಬಂಧ, ೨೦೧೧

೩೧. ದೇವುಡು, **ಕರ್ನಾಟಕ ಸಂಸ್ಕೃತಿ,** ಶಾರದಾ ಪ್ರಕಟಣಾಲಯ, ಬೆಂಗಳೂರು, ೧೯೩೫

೩೨. ನರಸಿಂಹಚಾರ್ ಆರ್, **ಕರ್ನಾಟಕ ಕವಿಚರಿತೆ, ಸಂ-೧,೨,೩,** ಕನ್ನಡ ಸಾಹಿತ್ಯ ಪರಿಷತ್ತು, ೧೯೭೨

೩೩. ನರಸಿಂಹಶಾಸ್ತ್ರಿ ಕೆ, **ಧರ್ಮಶಾಸ್ತ್ರ ಇತಿಹಾಸ ಭಾಗ-೨, ಸಂ-೪,** ಮೈಸೂರು ವಿಶ್ವವಿದ್ಯಾಲಯ, ಪ್ರಸಾರಾಂಗ, ೨೦೧೨

೩೪. ನಾಯಕರ ಹುಲುಗಪ್ಪ, **ಪುರಾಣ-ಐತಿಹ್ಯ ಕನ್ನಡ ಶಾಸನಗಳ ದೃಷ್ಟಿಕೋನ,** ಅನುಷ ಪ್ರಕಾಶನ, ಕಮಲಾಪುರ, ೨೦೧೭

೩೫. ನಾಗೇಗೌಡ ಹೆಚ್.ಎಲ್, **ಪ್ರವಾಸಿಕಂಡ ಇಂಡಿಯಾ, ಸಂ–೧ ಮತ್ತು ೨,** ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೬೪

೩೬. ನಾಗೇಂದ್ರಪ್ಪ ಕೆ, **ಹದಿನೈದನೆ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ,** ಕನ್ನಡ ಸಾಹಿತ್ಯ ಪರಿಷತ್ತು, ೧೯೯೬

೩೭. ಪರಮಶಿವಯ್ಯ ಜಿ.ಶಂ, **ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು,** ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೧೬

೩೮. ಪ್ರಧಾನ ಗುರುದತ್ತ, **ಶ್ರೀಕೃಷ್ಣ ಕಥೆಯ ಉಗಮ ಮತ್ತು ವಿಕಾಸ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೯೦

೩೯. ಪುಲುಮತಿ ಶಾಮರಾವ್, **ವಿಜಯನಗರದ ಕಲೆ ಮತ್ತು ಸಾಹಿತ್ಯ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೫೬

೪೦. ಪೋಲಂಕಿ, ರಾಮಮೂರ್ತಿ, **ಸಂಸ್ಕೃತಿ ಮತ್ತು ರಾಜಕಾರಣ ಸಂಕ್ರಮಣ,** ಜನವರಿ–ಫೆಬ್ರವರಿ, ೧೯೮೪

೪೧. ಪುರುಷೋತ್ತಮ ಬಿಳಿಮಲೆ, **ಮೆಕೆಂಜಿ ಕೈಫಿಯತ್ತುಗಳು,** ೧೯೮೭

೪೨. ಬಸವರಾಧ್ಯ ಎನ್, **ಪ್ರಾಚೀನ ಕನ್ನಡ ಗದ್ಯವಿಹಾರ,** ಪ್ರಾಚೀನ ಕಾವ್ಯ ಪ್ರಕಾಶನ, ಬೆಂಗಳೂರು, ೧೯೮೨

೪೩. ಬಸವರಾಜು ಕಲ್ಗುಡಿ, **ಮಧ್ಯಕಾಲೀನ ಭಕ್ತಿ ಮತ್ತು ಅನುಭವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೮

೪೪. ಭಾನುಮತಿ ವೈ.ಸಿ, **ಅರಸರ ಚರಿತ್ರೆಗಳು,** ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು, ೨೦೧೧

೪೫. ಮಂಜಪ್ಪ ಶೆಟ್ಟಿ ಮಸಗಲಿ, **ಪ್ರಾಚೀನ ಕಾವ್ಯ ಪರಾಮರ್ಶೆ,** ಮಸಗಲಿ ಪ್ರಕಾಶನ, ಮೈಸೂರು, ೨೦೧೫

೪೬. ಮಜುಂದಾರ್ ಆರ್.ಸಿ, (ಪ್ರಸಂ), **ಸಾಮ್ರಾಜ್ಯ ಏಕತಾಯುಗ, ಭಾಗ–೨, ಸಂ–೪,** ಭಾರತೀಯ ವಿದ್ಯಾಭವನ, ಬೆಂಗಳೂರು, ೧೯೯೮

೪೭. ಮಜುಂದಾರ್ ಆರ್.ಸಿ, (ಪ್ರಸಂ), **ಅಭಿಜಾತ ಯುಗ, ಭಾಗ–೨, ಸಂ–೬,** ಭಾರತೀಯ ವಿದ್ಯಾಭವನ, ಬೆಂಗಳೂರು, ೧೯೯೮

೪೮. ಮಜುಂದಾರ್ ಆರ್.ಸಿ. (ಪ್ರ.ಸಂ), **ಕನೋಜ್ ಸಾಮ್ರಾಜ್ಯ ಯುಗ, ಭಾಗ–೨, ಸಂ–೮,** ಭಾರತೀಯ ವಿದ್ಯಾಭವನ, ಬೆಂಗಳೂರು, ೧೯೯೮

೪೯. ಮಂಜೇಶ್ವರ ಗಣಪತಿರಾವ್ ಐಗಳ್, **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ,** ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ೧೯೨೩

೫೦. ಮರಿಯಪ್ಪ ಭಟ್ಟ ಎಂ, **ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ,** ಮೈಸೂರು ಭಾರತೀ ಪ್ರಕಾಶನ, ಮೈಸೂರು, ೧೯೭೨

೫೧. ಮಾಸ್ತಿ ವೆಂಕಟೇಶ ಅಯ್ಯಂಗಾರ್, **ಕರ್ನಾಟಕ ಜನತೆಯ ಸಂಸ್ಕೃತಿ,** ಜೀವನ ಕಾರ್ಯಾಲಯ ಟ್ರಸ್ಟ್, ಮಾಸ್ತಿಮನೆ, ಬೆಂಗಳೂರು, ೧೯೩೧

೫೨. ಮುಗಳಿ ರಂ.ಶ್ರೀ, **ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು,** ಸಮಾಜ ಪುಸ್ತಕಾಲಯ, ಧಾರವಾಡ, ೧೯೯೭

೫೩. ಮೂರ್ತಿರಾವ್, **ದೇವರು,** ಡಿ.ವಿ.ಕೆ. ಪ್ರಕಾಶನ, ಮೈಸೂರು, ೨೦೦೭

೫೪. ರಂಗಸ್ವಾಮಿ ಸು, **ಕರ್ನಾಟಕದ ದೇವಾಲಯಗಳು,** ಹಂಸಧ್ವನಿ ಪ್ರಕಾಶನ, ಬೆಂಗಳೂರು, ೧೯೯೪

೫೫. ರಂಗಣ್ಣ ಎಸ್.ವಿ, **ಶೈಲಿ,** ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೪೪

೫೬. ರಘುಸುತ, **ಶ್ರೀ ವೈಷ್ಣವ ದರ್ಶನ ಮತ್ತು ಸಂಸ್ಕೃತಿ,** ವೈಷ್ಣವ ಪ್ರಕಾಶನ, ಬೆಂಗಳೂರು, ೧೯೮೦

೫೭. ರಾಜಾರಾಮ ಹೆಗಡೆ, **ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪

೫೮. ರಾಮಚಂದ್ರರಾವ್ ಸಾ.ಕೃ, **ತಿರುಪತಿ ತಿಮ್ಮಪ್ಪ,** ಅಭಿಜ್ಞಾನ ಮಾಸ್ತಿಮನೆ, ಬೆಂಗಳೂರು, ೨೦೦೬

೫೯. ರಹಮತ್ ತರೀಕೆರೆ (ಸಂ), **ಧರ್ಮ,** ಕನ್ನಡ ವಿಶ್ವವಿದ್ಯಾಲಯ, ಪ್ರಸಾರಾಂಗ, ೨೦೦೦

೬೦. ರಹಮತ್ ತರೀಕೆರೆ, **ಸಾಂಸ್ಕೃತಿಕ ಅಧ್ಯಯನ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪

೬೧. ರಹಮತ್ ತರೀಕೆರೆ, **ಕರ್ನಾಟಕ ಸೂಫಿಗಳು,** ಅಭಿನವ ಪ್ರಕಾಶನ, ಬೆಂಗಳೂರು, ೨೦೧೧

೬೨. ಲಿಂಗಯ್ಯ ಎಂ.ಕೆ, **ಮೈಸೂರು ಒಂದು ಅಧ್ಯಯನ**, ಮೈಸೂರು ವಿಶ್ವವಿದ್ಯಾಲಯ, ಪ್ರಸಾರಾಂಗ, ೧೯೮೨

೬೩. ವಿದ್ಯಾಶಂಕರ್ ಎಸ್, **ವೀರಶೈವ ಸಾಹಿತ್ಯ ಚರಿತ್ರೆ, ಸಂ-೩, ಭಾಗ-೧**, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೧೪

೬೪. ವೀರಣ್ಣ ಸಿ, **ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ ಸಂ-೧,೨**, ನವಕರ್ನಾಟಕ ಪಬ್ಲಿಕೇಷನ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು, ೨೦೧೨

೬೫. ವಿರೂಪಾಕ್ಷಿ ಪೂಜಾರಹಳ್ಳಿ, **ವಿಜಯನಗರ ಕಾಲದ ಸಂಸ್ಕೃತಿ**, ಕನ್ನಡ ವಿಶ್ವವಿದ್ಯಾಲಯ, ಪ್ರಸಾರಾಂಗ, ೨೦೧೫

೬೬. ವಿರೂಪಾಕ್ಷಿ ಪೂಜಾರಹಳ್ಳಿ, **ಕೃಷ್ಣದೇವರಾಯನ ತೀರ್ಥಯಾತ್ರೆಗಳು**, ಕನ್ನಡ ವಿಶ್ವವಿದ್ಯಾಲಯ, ಪ್ರಸಾರಾಂಗ, ೨೦೧೫

೬೭. ವಿವೇಕ ರೈ. ಬಿ.ಎಂ, **ಪ್ರವಾಸಿ ಕಂಡ ವಿಜಯನಗರ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪

೬೮. ವೆಂಕಟಾಚಲಶಾಸ್ತ್ರಿ ಟಿ.ವಿ, **ಕನ್ನಡ ಛಂದಸ್ಸು**, ಡಿ.ವಿ.ಕೆ. ಪ್ರಕಾಶನ, ಮೈಸೂರು, ೧೯೭೬

೬೯. ವೇಣುಗೋಪಾಲ್ (ಅನು), **ಪುರಾಣ ಮತ್ತು ವಾಸ್ತವ**, ಚಿಂತನ ಪ್ರಕಾಶನ, ಶಿರಸಿ, ೨೦೦೩

೭೦. ಶಂಭುಶರ್ಮಾನಾಜಗಾರ, **ಧರ್ಮಸಿಂಧು**, ಸಮಾಜ ಪುಸ್ತಕಾಲಯ, ಶಿವಾಜಿ ಬೀದಿ, ಧಾರವಾಡ, ೨೦೦೨

೭೧. ಶಿವರುದ್ರಪ್ಪ ಜಿ.ಎಸ್, (ಸಂ), **ಶ್ರವಣಬೆಳಗೊಳ ಒಂದು ಸಮೀಕ್ಷೆ**, ಬೆಂಗಳೂರು ವಿಶ್ವವಿದ್ಯಾಲಯ, ಪ್ರಸಾರಾಂಗ, ೧೯೮೩

೭೨. ಶಿವರುದ್ರಪ್ಪ ಜಿ.ಎಸ್. (ಸಂ), **ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ-೪, ಮತ್ತು ೫**, ಬೆಂಗಳೂರು ವಿಶ್ವವಿದ್ಯಾಲಯ, ಪ್ರಸಾರಾಂಗ, ೧೯೭೬

೭೩. ಶಿವರುದ್ರಪ್ಪ ಜಿ.ಎಸ್, **ಕನ್ನಡ ಸಾಹಿತ್ಯ ಸಮೀಕ್ಷೆ**, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೨೦೧೦

೭೪. ಶಿವರುದ್ರಪ್ಪ ಜಿ.ಎಸ್, **ಕಾವ್ಯಾರ್ಥ ಪದಕೋಶ**, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೨೦೧೦

೭೫. ಶ್ರೀಕಂಠಶಾಸ್ತ್ರೀ ಎಸ್, **ಭಾರತೀಯ ಸಂಸ್ಕೃತಿ,** ಕಾಮಧೇನು ಪುಸ್ತಕ ಭವನ, ಬೆಂಗಳೂರು, ೨೦೧೫

೭೬. ಶ್ರೀಕಂಠ ಇಳೇಕಾನ್, **ಮಸಗಲಿ,** ಮಸಗಲಿ ಪ್ರಕಾಶನ, ಮೈಸೂರು, ೨೦೧೫

೭೭. ಸಂಗಮೇಶ ಸವದತ್ತಿಮಠ, **ಕನ್ನಡ ಭಾಷಾ ವ್ಯಾಸಂಗ,** ರೂಪರಶ್ಮಿ ಪ್ರಕಾಶನ, ಧಾರವಾಡ, ೨೦೧೩

೭೮. ಸದಾನಂದ ಕನವಳ್ಳಿ (ಸಂ), **ವೀರಶೈವ ಸಾಹಿತ್ಯ ಸಮೀಕ್ಷೆ,** ಕನ್ನಡ ಪುಸ್ತಕ ಪ್ರಾಧಿಕಾರ, ೨೦೧೦

೭೯. ಸದಾಶಿವ ಕೆ, **ಸಮಗ್ರ ಭಾರತದ ಇತಿಹಾಸ,** ಪ್ರಿಯದರ್ಶಿನಿ ಪ್ರಕಾಶನ, ಮೈಸೂರು, ೨೦೧೬

೮೦.ಸಂಪದ್ಗಿರಿರಾವ್, **ಕರ್ನಾಟಕ ಪರಂಪರೆ ಸಂ-೨,** ಮೈಸೂರು ರಾಜ್ಯ ಸರ್ಕಾರ ಬೆಂಗಳೂರು, ೧೯೭೦

೮೧. ಸಾಲೆತೊರೆ ಬಿ.ಎ. (ಪ್ರ.ಸಂ), **ಕನ್ನಡ ನಾಡಿನ ಚರಿತ್ರೆ ಭಾಗ-೧,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೫

೮೨. ಸಣ್ಣಯ್ಯ ಬಿ.ಎಸ್ (ಸಂ), **ರಾಜಾವಳಿ ಕಥಾಗಾರ,** ಮೈಸೂರು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೮೮

೮೩. ಸಿದ್ಧಲಿಂಗಯ್ಯ, **ಗ್ರಾಮದೇವತೆಗಳು,** ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೯

೮೪. ಸಿ.ಪಿ.ಕೆ. **ಇತಿಹಾಸ ಪುರಾಣಗಳು,** ಚಿತ್ರಭಾನು ಪ್ರಕಾಶನ, ಮೈಸೂರು, ೧೯೮೧

೮೫. ತಿಪ್ಪೇರುದ್ರಸ್ವಾಮಿ ಎಚ್, **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ಡಿ.ವಿ.ಕೆ, ಮೂರ್ತಿ ಪ್ರಕಾಶನ, ೨೦೦೩

## ಅಪ್ರಕಟಿತ ಮಹಾತ್ಮೆಗಳು

| ಕ್ರಸಂ | ಪತ್ರ ಸಂ. | ಗ್ರಂಥದ ಹೆಸರು | ಕವಿ | ಕಾಲ | ಪ್ರಕಾರ | ಸೂಚಿ ಸಂಖ್ಯೆ |
|---|---|---|---|---|---|---|
| ೧. | ೧೭ | ಅಖಂಡ ಕಾವೇರಿ ಮಹಾತ್ಮೆ ಟೀಕಾ | ಕೃಷ್ಣರಾಜ ಒಡೆಯರ್ | ೧೯ನೇ | ಗದ್ಯ | ಕೆ.ಬಿ ನೂರ ಅರವತ್ತೊಂದು |
| ೨. | ೩೭ | ಆಧ್ಯಾತ್ಮ ರಾಮಾಯಣದ ಮಹಾತ್ಮೆ | ನರಸಿಂಹ ಕವಿ | ೧೮೦೦ | ಭಾ.ಷ | ಕೆ.೪೨೨ |
| ೩. | ೯೦ | ಅರ್ಕಪುಷ್ಕರಣೀ ಮಹಾತ್ಮೆ | ಕೃಷ್ಣರಾಜ ಒಡೆಯರ್ | ೧೮೦೦ | ಗದ್ಯ | ಕೆ.ಬಿ ೧೫೯ |
| ೪. | ೨೨೫ | ಕಮಲಾಚಲ ಮಹಾತ್ಮೆ-೧ | ಚಿಕ್ಕೂಪಧ್ಯಾಯ | ೧೯೭೨ | ಚಂಪು | ಕೆ.ಬಿ ೩೮ |
| ೫. | ೨೨೬ | ಕಮಲಾಚಲ ಮಹಾತ್ಮೆ-೨ | ಚಿಕ್ಕೂಪಧ್ಯಾಯ | ೧೯೭೨ | ಚಂಪು | ಕೆ.ಬಿ ೪೨ |
| ೬. | ೨೫೬ | ಕಲ್ಯಾಣ ಪಟ್ಟಣದ ಮಹಾತ್ಮೆ | ? | ? | ಗದ್ಯ | ಕೆ.ಬಿ ೨೮೯ |
| ೭. | ೩೬೦ | ಕೈಶಿಕದ್ವಾದಶೀ ಮಹಾತ್ಮೆದ ಕನ್ನಡ ಬೇಕು ಶ್ಲೋಕ ಟೀಕು | ? | ? | ಕನ್ನಡ ಟೀಕು | ಕೆ ೬೦೩ |
| ೮. | ೩೬೩ | ಕೊಲ್ಲೀಪಾಕಿ ಮಹಾತ್ಮೆ | ಗುರುಮುದ್ದು ಸಂಗಮದೇವ | ೧೭೦೦ | ಯಕ್ಷಗಾನ | ಕೆ ೪೭೯ |
| ೯. | ೩೯೭ | ಗರಳಪುರಿ ಮಹಿಮೆ | ಕಳಲೆ ನಂಜರಾಜ | ೧೭೪೦ | ಗದ್ಯ | ಕೆ.ಎ ೨೦ |
| ೧೦. | ೬೮೧ | ದೇವಿ ಮಹಾತ್ಮೆ | ಮುಮ್ಮಡಿ ಕೃಷ್ಣರಾಜ | ೧೮೦೦ | ಗದ್ಯ | ಕೆ.ಬಿ ೩೨೨ |
| ೧೧. | ೬೮೨ | ದೇವಿ ಮಹಾತ್ಮೆ | ? | ? | ಯಕ್ಷಗಾನ | ಕೆ.ಬಿ ೪೧೯ |
| ೧೨. | ೮೮೪ | ಪಶ್ಚಿಮ ರಂಗಾಥ ಮಹಾತ್ಮೆಯ ಟೀಕು | ? | ? | ಗದ್ಯ | ಕೆ.ಬಿ ೨೬೧ |
| ೧೩. | ೧೩೭೨ | ಯಾದವಗಿರಿ ಮಹಾತ್ಮೆ | ಲಕ್ಷ್ಮೀಶ | ೧೬೭೨ | ಸಾಂಗತ್ಯ | ಕೆ.ಎ ೧೨೪ |
| ೧೪. | ೧೩೭೩ | ಯಾದವಗಿರಿ ಮಹಾತ್ಮೆ | ವೆಂಕಟಾಚಾರ್ಯ ಶಿಷ್ಯ | ೧೭೦೦ | ಭಾ.ಷ | ಕೆ. ೭೪ |
| ೧೫. | ೧೩೭೪ | ಯಾದವಗಿರಿ ಮಹಾತ್ಮೆ | ವೆಂಕಟಾಚಾರ್ಯ ಶಿಷ್ಯ | ೧೭೦೦ | ಭಾ.ಷ | ಕೆ.ಎ ೨೭೭ |
| ೧೬. | ೧೬೧೮ | ವೆಂಕಟೇಶ ಮಹಾತ್ಮೆ | ಚಿಕ್ಕುಪಾಧ್ಯಾಯ | ೧೬೭೨ | ಗದ್ಯ | ಕೆ. ೪೦ |
| ೧೭. | ೧೭೩೬ | ಶಿವ ಮಹಿಮಾ ಶತಕ | ಚೆನ್ನ ಮಲ್ಲಿಕಾರ್ಜುನ | ೧೭೪೦ | ವೃತ್ತ | ಕೆ. ೩೪೩/೪ |

| | | | | | | |
|---|---|---|---|---|---|---|
| ೧೮. | ೧೮೦೩ | ಶ್ರೀರಂಗ ಮಹಾತ್ಮ್ಯೆ | ಮಲ್ಲಿಕಾರ್ಜುನ | ? | ಚಂಪೂ | ಕೆ.ಬಿ. ೫೨ |
| ೧೯. | ೧೮೦೪ | ಶ್ರೀರಂಗ ಮಹಾತ್ಮ್ಯೆ | ಸಿಂಗರಾರ್ಯ | ೧೭೭೦ | ಗದ್ಯ | ಕೆ.ಬಿ ೧೯೪ |
| ೨೦. | ೧೮೦೫ | ಶ್ರೀರಂಗ ಮಹಾತ್ಮ್ಯೆ | ಅಪ್ಪಳಾಚಾರ್ಯ | ೧೯ನೇ ಶ | ಗದ್ಯ | ಕೆ.ಬಿ. ೩೨೮/೨ |
| ೨೧. | ೧೮೧೯ | ಷಡಕ್ಷರ ಮಹಿಮೆ | ? | ? | ಭಾ.ಷ | ಕೆ. ೮೯/೨ |
| ೨೨. | ೧೯೬೧ | ಸೇತು ಮಹಾತ್ಮ್ಯೆ | ? | ? | ಭಾ.ಷ | ಕೆ.ಬಿ. ೧೭೭ |
| ೨೩. | ೨೦೩೫ | ಹಸ್ತಿಗೆರೆ ಮಹಾತ್ಮ್ಯೆ | ಚಿಕ್ಕುಪಾಧ್ಯಾಯ | ೧೯೮೦ | ಚಂಪೂ | ಕೆ.ಬಿ. ೬೧ |
| ೨೪. | ೨೦೫೩ | ಹಾಲಾಸ್ಯ ಮಹಾತ್ಮ್ಯೆ | ಕಳಲೆ ನಂಜರಾಜ | ೧೭೪೦ | ಗದ್ಯ | ಕೆ.ಬಿ.೧೭೯ |
| ೨೫. | ೭೬ | ವಿಭೂತಿ ಮತ್ತು ಪಾದೋದಕ ಮಹಾತ್ಮ್ಯೆ | ? | ? | ವಚನ | ಕೆ.ಬಿ. ೬೧೨/೧೧ |
| ೨೬. | ೧೬೬ | ವೆಂಕಟಗಿರಿಯ ಮಹಾತ್ಮ್ಯೆ | ? | ? | ಗದ್ಯ | ಕೆ.ಬಿ. ೮೬೨ |
| ೨೭. | ೩೨೨ | ಶನಿ ಮಹಾತ್ಮ್ಯೆ | ಮಹಾಂತ ದೇಶೀಕೇಂದ್ರ | ? | ಯಕ್ಷಗಾನ | ಕೆ.ಬಿ.೬೬೦ |
| ೨೮. | ೧೧೪ | ಶಿವ ಮಹಿಮಾ ರಗಳೆ | ? | ? | ರಗಳೆ | ಕೆ. ೧೨೬೩/೮ |
| ೨೯. | ೪೧೫ | ಶಿವ ಮಹಿಮಾ ಶತಕ | ಚೆನ್ನ ಮಲ್ಲಿಕಾರ್ಜುನ | ೧೫೬೦ | ವೃತ್ತ | ಕೆ. ೨೦೬೭/೪ |
| ೩೦. | ೪೧೬ | ಶಿವ ಮಹಿಮಾ ಸ್ತೋತ್ರ | ಚೆನ್ನ ಮಲ್ಲೇಶ | ? | ವೃತ್ತ | ಕೆ. ೬೫೫ |
| ೩೧. | ೫೪೭ | ಶ್ರೀರಂಗ ಮಹಾತ್ಮ್ಯೆ | ಸಿಂಗರಾರ್ಯ | ೧೭೭೦ | ಗದ್ಯ | ಕೆ. ೮೭೮ |
| ೩೨. | ೫೪೮ | ಶ್ರೀರಂಗ ಮಹಾತ್ಮ್ಯೆ | ? | ? | ಚಂಪೂ | ಕೆ. ೮೯೬ |
| ೩೩. | ೩೫೮ | ಹಾಲಾಸ್ಯ ಮಹಾತ್ಮ್ಯೆ | ಕಳಲೆ ನಂಜರಾಜ | ೧೭೪೦ | ಗದ್ಯ | ಕೆ. ೧೩೩೨ |
| ೩೪. | | ಮಹಿಮಾಷ್ಟಕ | ? | ? | ಕಂದ | ಕೆ. ೧೧೩೮ |

